# ಪ್ರಜಾಪ್ರಭುತ್ವ ಮತ್ತು ಶಿಕ್ಷಣ

ಮಾಸ್ಟರ್ ಆಫ್ ಫಿಲಾಸಫಿ (ಎಂ. ಫಿಲ್.) ಪದವಿಯ
ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಪ್ರೌಢ ಪ್ರಬಂಧ

ಸಂಶೋಧಕರು :
ತಾರಿಹಳ್ಳಿ. ಹನುಮಂತಪ್ಪ

ಮಾರ್ಗದರ್ಶಕರು :
ಡಾ. ಎಚ್. ಎಸ್. ಶ್ರೀಮತಿ

ಸಂಕಲನಗಳ ವಿಭಾಗ
ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ, ಕಮಲಾಪುರ - ೫೮೩ ೨೨೧
ಅಕ್ಟೋಬರ್ ೧೯೯೬

25

# ಪ್ರಜಾಪ್ರಭುತ್ವ ಮತ್ತು ಶಿಕ್ಷಣ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಯ
ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಪ್ರೌಢ ಪ್ರಬಂಧ.



ಸಂಶೋಧಕರು :
ತಾರಿಹಳ್ಳಿ . ಹನುಮಂತಪ್ಪ

ಮಾರ್ಗದರ್ಶಕರು :
ಡಾ. ಎಚ್.ಎಸ್. ಶ್ರೀಮತಿ

. ಸಂಕಲನಗಳ ವಿಭಾಗ
ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೧
ಅಕ್ಟೋಬರ್ ೩೧, ೧೯೯೬



# ಸಂಶೋಧಕರ ಪ್ರಮಾಣ ಪತ್ರ

"ಪ್ರಜಾಪ್ರಭುತ್ವ ಮತ್ತು ಶಿಕ್ಷಣ" ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಡಾ. ಎಚ್.ಎಸ್.ಶ್ರೀಮತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಪ್ರಬಂಧ ಅಥವಾ ಇದರ ಯಾವುದೇ ಭಾಗವನ್ನು ಯಾವ ಪದವಿಗಾಗಲಿ ಅಥವಾ ಯಾವುದೇ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲ ಎಂದು ಈ ಮೂಲಕ ಘೋಷಿಸುತ್ತೇನೆ.

ದಿನಾಂಕ: ೩೧.೧೦.೧೯೯೬
ಸ್ಥಳ: ವಿದ್ಯಾರಣ್ಯ

ತಾರಿಹಳ್ಳಿ. ಹನುಮಂತಪ್ಪ
ಸಂಶೋಧನಾ ವಿದ್ಯಾರ್ಥಿ
ಸಂಕಲನಗಳ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ



# ಮಾರ್ಗದರ್ಶಕರ ದೃಢೀಕರಣ ಪತ್ರ

*ಶ್ರೀ ತಾರಿಹಳ್ಳಿ.ಹನುಮಂತಪ್ಪ* ಅವರು "ಪ್ರಜಾಪ್ರಭುತ್ವ ಮತ್ತು ಶಿಕ್ಷಣ" ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ೧೯೯೫-೯೬ರ ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲೆಂದು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಪ್ರೌಢ ಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ, ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ:೩೧.೧೦.೧೯೯೬
ಸ್ಥಳ: ವಿದ್ಯಾರಣ್ಯ

ಮಾರ್ಗದರ್ಶಕರು

*(ಡಾ. ಎಚ್.ಎಸ್.ಶ್ರೀಮತಿ)*
ಮುಖ್ಯಸ್ಥರು
ಸಂಕಲನಗಳ ವಿಭಾಗ
**ಕನ್ನಡ ವಿಶ್ವವಿದ್ಯಾಲಯ, ಹಂಪಿ.**

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಅಧ್ಯಯನಕ್ಕೆ ಅವಕಾಶ ಕಲ್ಪಿಸಿಕೊಟ್ಟ ಮಾನ್ಯ ಕುಲಪತಿಗಳಾದ ಡಾ: ಚಂದ್ರಶೇಖರ ಕಂಬಾರ ಮತ್ತು ಆಡಳಿತ ವರ್ಗದ ಇತರ ಎಲ್ಲ ಹಿರಿಯರಿಗೆ,

ಅಧ್ಯಯನದ ಕ್ರಮವನ್ನು ಬೋಧಿಸಿ ಪ್ರೀತಿಯಿಂದ ಮಾರ್ಗದರ್ಶನ ನೀಡಿದ ಡಾ: ಎಚ್.ಎಸ್.ಶ್ರೀಮತಿ ಅವರಿಗೆ,

ಅಧ್ಯಯನದ ಅವಧಿಯಲ್ಲಿ ವಿವಿಧ ರೀತಿಯಲ್ಲಿ ಸಹಕರಿಸಿದ ಬೋಧಕ ವರ್ಗದ ಎಲ್ಲಾ ಹಿರಿಯರಿಗೆ,

ಕ್ಷೇತ್ರಕಾರ್ಯದ ಅವಧಿಯಲ್ಲಿ ಅಮೂಲ್ಯ ಮಾಹಿತಿ ನೀಡಿ ಸಹಕರಿಸಿದ ಶ್ರೀ ಎಚ್.ಬಾಲರಾಜು, ಶ್ರೀ ಟಿ.ಧ್ರುವಕುಮಾರ್, ಶ್ರೀ ಎಸ್.ಡಿ. ಜೋಳದ, ಶ್ರೀ ಜೆ. ಪ್ರಹ್ಲಾದ....... ಅವರುಗಳಿಗೆ,

ಅಧ್ಯಯನದ ಅವಧಿಯಲ್ಲಿ ನೆರವಾದ ಇತರ ಎಲ್ಲ ಸಹಪಾಠಿ ಮಿತ್ರರಿಗೆ,

ಸದಾ ನನ್ನ ಶ್ರೇಯಸ್ಸನ್ನೇ ಬಯಸುವ ತಂದೆ, ತಾಯಿ, ಸಹೋದರ ಹಾಗೂ ನನ್ನ ಬಂಧುಗಳಿಗೆ,

ಈ ಮಹಾ ಪ್ರಬಂಧವನ್ನು ಗಣಕಯಂತ್ರದಲ್ಲಿ ಸುಂದರವಾಗಿ ಸಂಯೋಜಿಸಿಕೊಟ್ಟ ಮಿತ್ರ ಶ್ರೀ. ಎ.ಎಂ.ಕೃಪಾಶಂಕರ್ ಅವರಿಗೆ, ಹೊಸಪೇಟೆಯ ಸ್ಫೂರ್ತಿ ಕಂಪ್ಯೂಟರ್ಸ್‌ನ ಶ್ರೀಮತಿ ರೇಣುಕಾ ಅವರಿಗೆ,

ತುಂಬಾ ಹೃದಯದ ಕೃತಜ್ಞತೆಗಳು.

ದಿನಾಂಕ:೩೧-೧೦-೧೯೯೭
ಸ್ಥಳ: ವಿದ್ಯಾರಣ್ಯ

ತಾರಿಹಳ್ಳಿ. ಹನುಮಂತಪ್ಪ
ಸಂಶೋಧಕ
ಸಂಕಲನ ವಿಭಾಗ.
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

## ಅಧ್ಯಾಯ-೧

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

ಜನರ ಪ್ರಗತಿಗೆ ಹಲವು ರಾಜಕೀಯ ಸಿದ್ಧಾಂತಗಳಲ್ಲಿ ಪ್ರಜಾಪ್ರಭುತ್ವ ಒಂದು ಆದರ್ಶದಾಯಕ ವ್ಯವಸ್ಥೆಯಾಗಿದೆ. ಜನತೆಯ ಸುಖಕ್ಕಾಗಿ ರೂಪುಗೊಂಡ ಸಿದ್ಧಾಂತ, ಪ್ರಜಾಪ್ರಭುತ್ವವಾಗಿದೆ. ಪ್ರಜೆಗಳಿಂದ, ಪ್ರಜೆಗಳಿಗಾಗಿ, ಪ್ರಜೆಗಳೇ ನಡೆಸುವ ಈ ಪ್ರಜಾಪ್ರಭುತ್ವ ಉಳಿದ ಎಲ್ಲ ರಾಜಕೀಯ ಸಿದ್ಧಾಂತಗಳಿಗಿಂತ ವಿಶಿಷ್ಟವಾಗಿದೆ. ಪ್ರಜಾಪ್ರಭುತ್ವದ ಉಳಿವಿಗಾಗಿ ಮಹಾಯುದ್ಧವೇ ನಡೆದಿರುವುದನ್ನು ಈ ಜಗತ್ತು ಮರೆಯುವಂತಿಲ್ಲ. ಪ್ರಜಾಪ್ರಭುತ್ವ ರೂಪು ಪಡೆಯಲು ಪ್ರಜೆಗಳ 'ಮತ' ಅಭಿಪ್ರಾಯವೇ ಮುಖ್ಯ ಜೀವಾಳವಾದರೂ ಪ್ರಜಾಪ್ರಭುತ್ವ ಸರ್ಕಾರ ರಚನೆಗೊಂಡ ನಂತರ, ಅದು ಪ್ರಜೆಗಳಿಗೆ ಪೂರಕವಾದ ಆಡಳಿತ ನೀಡದೆ ಇರಬಹುದು, ಆದರೂ ಪ್ರಜಾಪ್ರಭುತ್ವದ ಸಫಲತೆ ಕೇವಲ ಪ್ರಜೆಗಳಿಂದಷ್ಟೇ ಅಲ್ಲ, ಜನರಿಂದ ಚುನಾಯಿತವಾಗಿ ರಚಿತಗೊಂಡ ಸರ್ಕಾರವೂ ಮುಖ್ಯವಾಗುತ್ತದೆ. ಇದಕ್ಕೆ ಕಾರಣ ಪ್ರಜಾಪ್ರಭುತ್ವ ಏಕ ವ್ಯಕ್ತಿಯದಲ್ಲ. ಇಲ್ಲಿ ಅಭಿಪ್ರಾಯ ಎಷ್ಟು ಮುಖ್ಯವೋ, ಭಿನ್ನಾಭಿಪ್ರಾಯವೂ ಅಷ್ಟೇ ಮುಖ್ಯವಾಗಿರುತ್ತದೆ. ಅದರಲ್ಲೂ ಅನೇಕ ಜಾತಿ, ಧರ್ಮ, ವರ್ಗದಿಂದ ಕೂಡಿದ ಭಾರತದಂತಹ ದೇಶದಲ್ಲಿ ನಮ್ಮ ಪ್ರಜಾಪ್ರಭುತ್ವವಾದಿಗಳಾದ ಜವಾಹರಲಾಲ್ ನೆಹರೂ, ಮಹಾತ್ಮಾಗಾಂಧೀಜಿ, ಹಾಗೂ ಡಾ.ಬಿ.ಆರ್. ಅಂಬೇಡ್ಕರ್ ರಂತಹ ಚಿಂತಕರು ಆಲೋಚಿಸಿ ಪ್ರಜಾಪ್ರಭುತ್ವ ಎನ್ನುವಂತ ಸಿದ್ಧಾಂತವನ್ನು ಅಳವಡಿಸಿಕೊಂಡಿರುವುದು ಎಷ್ಟರಮಟ್ಟಿಗೆ ಪ್ರಸ್ತುತ. ಪ್ರಜಾಪ್ರಭುತ್ವವು ವಾಸ್ತವದಲ್ಲಿ ಜಾರಿಗೊಂಡು ನಿರೀಕ್ಷಿತ ಫಲಗಳನ್ನು ಕೊಡಬೇಕಾದರೆ, ಜನತೆ ಸಕ್ರೀಯವಾಗಿ ಭಾಗವಹಿಸುವುದು ಅನಿವಾರ್ಯ. ಪ್ರಜಾಪ್ರಭುತ್ವ ಸಿದ್ಧಾಂತ ಅರ್ಥಪೂರ್ಣವಾಗಿ ಜಾರಿಗೊಳ್ಳಬೇಕಾದರೆ, ಸುಶಿಕ್ಷಿತ ಜನರಿಂದ ಮಾತ್ರ ಸಾಧ್ಯ. ಅದಕ್ಕೆ ಉತ್ತಮವಾದ ಶಿಕ್ಷಣದ ಪರಿಸರ ನಿರ್ಮಾಣವಾದಾಗ, ಪ್ರಜಾಪ್ರಭುತ್ವ ಸಿದ್ಧಾಂತ ಫಲಪ್ರದವಾಗಿ ಜಾರಿಗೊಳ್ಳುತ್ತದೆ. ಹೀಗೆ ಪ್ರಜಾಪ್ರಭುತ್ವದಂತಹ ಆದರ್ಶಮಯ ಸಿದ್ಧಾಂತ ಜನತೆಗೆ ದೊರಕಬೇಕಾದರೆ, ಶಿಕ್ಷಣದ ಪಾತ್ರ, ಸ್ವರೂಪದ ಬಗ್ಗೆ ಅಧ್ಯಯನ ಮಾಡಲು ಈ ಪ್ರೌಢ ಪ್ರಬಂಧದಲ್ಲಿ ಉದ್ದೇಶಿಸಲಾಗಿದೆ.

ಪ್ರಜಾಪ್ರಭುತ್ವ ಸಿದ್ಧಾಂತ ಅರ್ಥಮಾಡಿಕೊಳ್ಳಲು ಜಾಗತಿಕ ನೆಲೆಯಲ್ಲಿ, ಜಾಗತಿಕ ಸಿದ್ಧಾಂತಗಳನ್ನು ವಿವರಿಸುತ್ತಾ ಅವುಗಳ ಮಹತ್ವ, ಅವುಗಳ ಆಡಳಿತ ವೈಖರಿ ಮತ್ತು ಅವುಗಳ ಸಫಲತೆಗೆ- ವಿಫಲತೆಗೆ ಕಾರಣಗಳನ್ನು ವಿವರಿಸಲಾಗಿದೆ. ಭಾರತ ಸ್ವಾತಂತ್ರ್ಯ ಪಡೆದ ನಂತರ ಪ್ರಜಾಪ್ರಭುತ್ವ ಸಮಾಜವಾದಿ ರಾಷ್ಟ್ರವಾಗಿ ರೂಪುಗೊಳ್ಳಲು ಕಾರಣ ಮತ್ತು ತನ್ನದೇ ಆದ ಆಡಳಿತ ವ್ಯವಸ್ಥೆಯನ್ನು ಹೊಂದಲು, ಪ್ರಜಾಪ್ರಭುತ್ವವಾದಿಗಳಾದ ಜವಾಹರಲಾಲ್

ನೆಹರೂ, ಮಹಾತ್ಮಾಗಾಂಧೀಜಿ ಹಾಗೂ ಡಾ: ಬಿ.ಆರ್.ಅಂಬೇಡ್ಕರ್ ರಂತಹ ಮೇಧಾವಿಗಳ ಪ್ರಯತ್ನ ಮತ್ತು ಅವರುಗಳು ಪ್ರಜಾಪ್ರಭುತ್ವದಲ್ಲಿ ಇಟ್ಟ ಅಚಲನಂಬಿಕೆ, ವಿಶ್ವಾಸ ಮತ್ತು ಅವರುಗಳು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಇಲ್ಲಿ ವಿವರಿಸಲಾಗಿದೆ. ಆಡಳಿತ ವ್ಯವಸ್ಥೆಯಲ್ಲಿ ಪ್ರಜೆಗಳ ಪಾಲ್ಗೊಳ್ಳುವಿಕೆ ಮತ್ತು ವ್ಯಕ್ತಿ ಬೆಳವಣಿಗೆಯ ಜೊತೆಗೆ ಸಮಾಜದ ಬೆಳವಣಿಗೆ ಅತಿ ಮುಖ್ಯ ಎಂಬುವುದು ಪ್ರಜಾಪ್ರಭುತ್ವ ಸಿದ್ಧಾಂತದಲ್ಲಿ ಪ್ರತಿಪಾದಿತವಾಗಿರುವುದರಿಂದ, ಪ್ರತಿಯೊಬ್ಬ ಪ್ರಜೆಯೂ ಇಲ್ಲಿ ಪ್ರಭು. ಚುನಾವಣೆಯಲ್ಲಿ 'ಮತ' ಚಲಾಯಿಸುವುದೊಂದೇ ಪ್ರಭುವಿನ ಕೆಲಸವಲ್ಲ. ಜೊತೆಗೆ ಆಡಳಿತದಲ್ಲಿ ಪಾಲ್ಗೊಳ್ಳಬೇಕು ಎಂಬುವುದನ್ನು ಚರ್ಚಿಸಲಾಗಿದೆ. ಜನತೆಯ ಪ್ರಗತಿಯಲ್ಲಿ ಶಿಕ್ಷಣದ ಪಾತ್ರ. ಶಿಕ್ಷಣದ ಸ್ವರೂಪ ಹೇಗಿರಬಹುದು ಎಂಬುವುದನ್ನು ಇಲ್ಲಿ ವಿವರಿಸಲಾಗಿದೆ ಮತ್ತು ಚರ್ಚಿಸಲಾಗಿದೆ. ಇಂತಹ ಒಂದು ವಿವರವಾದಂತಹ ವಿಶ್ಲೇಷಣೆ ಮಾಡಿಕೊಳ್ಳುತ್ತಾ ಪ್ರಜಾಪ್ರಭುತ್ವ ಸಿದ್ಧಾಂತ ಫಲಪ್ರದವಾಗಿ ಜಾರಿಗೊಳ್ಳುವಲ್ಲಿ ಶಿಕ್ಷಣದ ಮಹತ್ವವನ್ನು ಅರಿಯಲು ಪ್ರಯತ್ನಿಸಲಾಗಿದೆ. ಈ ಚಿಂತನೆಗೆ ಪ್ರಾಯೋಗಿಕವಾದ ಪುರಾವೆಯನ್ನು ಒದಗಿಸಿಕೊಳ್ಳುವ ಕಾರಣವಾಗಿ ಬಳ್ಳಾರಿ ಜಿಲ್ಲೆಯಲ್ಲಿ ಪ್ರಜಾಪ್ರಭುತ್ವ ಸರಿಯಾಗಿ ಅನ್ವಯವಾಗದೆ ಹಿನ್ನಡೆಗೊಂಡಿದೆ ಎಂಬುದನ್ನು ಸೋದಾಹರಣವಾಗಿ ವಿಶ್ಲೇಷಿಸಲಾಗಿದೆ. ಜೊತೆಗೆ ಇನ್ನಷ್ಟು ಸೂಕ್ಷ್ಮವಾದ ಪುರಾವೆಯನ್ನು ಒದಗಿಸಲು ೯೯೦ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ನಡೆದಿರುವ ಸಂಪೂರ್ಣ ಸಾಕ್ಷರತಾ ಆಂದೋಲನದ ಪರಿಣಾಮಗಳು ಮತ್ತು ಗೊತ್ತುಗುರಿಗಳು, ಈ ಜಿಲ್ಲೆಯ ಜನತೆ ಮತ್ತು ಜನಜೀವನದ ಮೇಲೆ ಯಾವ ಬದಲಾವಣೆಯನ್ನು ತರಬಹುದು. ಇದಕ್ಕಾಗಿ ಸರಕಾರ ಖರ್ಚು ಮಾಡುವಂತಹ ಹಣದ ಜೊತೆಗೆ ಸಮಾಜದ ಕೊಡುಗೆ ಏನು? ಎಂಬುವುದನ್ನು ನೋಡುತ್ತಾ ಈ ವಿಶ್ಲೇಷಣೆಗೆ ಅಂಕಿ-ಅಂಶಗಳ ಮಾಹಿತಿಗಳನ್ನು ಒದಗಿಸಿಕೊಳ್ಳುವಲ್ಲಿ ನೇರವಾಗಿ ಕಾರ್ಯಕರ್ತರು, ಸಾರ್ವಜನಿಕರು ಮತ್ತು ಅಧಿಕಾರಿಗಳೊಂದಿಗೆ ಸಂದರ್ಶನ, ವಿಶ್ಲೇಷಣೆ, ಚರ್ಚೆಯನ್ನು ಕೈಕೊಂಡ ಆ ವಿವರಗಳನ್ನು ಬಳಸಿಕೊಳ್ಳಲಾಗಿದೆ. ಒಟ್ಟಾರೆಯಾಗಿ ಈ ಸಂಶೋಧನೆಯು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಶಿಕ್ಷಣದ ಪಾತ್ರವನ್ನು ಗ್ರಹಿಸಲು ಪ್ರಯತ್ನವನ್ನು ಮಾಡಲಾಗಿದೆ.

ಈ ಪ್ರಬಂಧ ಒಳಗೊಂಡ ವಿಷಯದ ಹಿನ್ನೆಲೆಯಲ್ಲಿ, ಇದರ ಸ್ಪಷ್ಟ ಸಮೀಕ್ಷೆಗೋಸ್ಕರ ಒಂದು ಚೌಕಟ್ಟನ್ನು ನಿರ್ಮಿಸಿಕೊಂಡು ಅಧ್ಯಯನಕ್ಕೆ ತೊಡಗಲಾಗಿದೆ. ಪ್ರಜಾಪ್ರಭುತ್ವ ಸಿದ್ಧಾಂತದ ಸ್ವರೂಪ, ಈ ಆಡಳಿತ ವ್ಯವಸ್ಥೆಯ ಬಲಾಬಲಗಳು, ಹಾಗೂ ಇದಕ್ಕೆ ಈ ಸಿದ್ಧಾಂತದ ಹಿನ್ನೆಲೆಯಲ್ಲಿ ಇರುವ ಚಿಂತಕರು, ಚಿಂತನೆ, ಪ್ರಜಾಪ್ರಭುತ್ವ ಸಿದ್ಧಾಂತ ಫಲಪ್ರದವಾಗುವುದರಲ್ಲಿ ಶಿಕ್ಷಣದ ಪಾತ್ರ, ಶಿಕ್ಷಣದ ಸ್ವರೂಪ ಹಾಗೂ

ಚಾರಿತ್ರಿಕ ಹಿನ್ನೆಲೆ, ಅವು ಮಾಡುವ ಕೆಲಸದ ವಿವರ, ಪ್ರಯೋಜನ, ಇತ್ಯಾದಿಯಾಗಿ ಚರ್ಚೆ ಮಾಡಲಾಗಿದೆ. ಪ್ರಜಾಪ್ರಭುತ್ವ ಸಿದ್ಧಾಂತದ ಸ್ವರೂಪ ಮತ್ತು ಈ ಸಿದ್ಧಾಂತ ಜಾರಿಗೊಳ್ಳುವಲ್ಲಿ ಶಿಕ್ಷಣ ಎಷ್ಟರಮಟ್ಟಿಗೆ ಪ್ರಸ್ತುತ ಎಂಬುವುದನ್ನು ಭಾರತ ದೇಶವನ್ನು ಹಿನ್ನೆಲೆಯಾಗಿ ಇಟ್ಟುಕೊಂಡು ಅಧ್ಯಯನ ಮಾಡುವುದು ಇಲ್ಲಿಯ ವಿಶೇಷವಾಗಿದೆ. ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯು ಜನರ ಕುಂದು-ಕೊರತೆಗಳನ್ನು ನಿವಾರಿಸುವ ಆಶಯ ಹೊಂದಿದ್ದು, ಇದು ಜನರ ಆಯ್ಕೆಯ 'ಪ್ರತಿನಿಧಿಗಳ ಸಮೂಹ'ವಾಗಿರುತ್ತದೆ. ವಿವಿಧ ವರ್ಗದ ಪ್ರತಿನಿಧಿಗಳಿಂದ ರಚಿತಗೊಂಡ ಪ್ರಜಾಪ್ರಭುತ್ವ, ಆಡಳಿತ ವ್ಯವಸ್ಥೆಯ ವಿವಿಧ ಆಶೋತ್ತರಗಳನ್ನೊಳಗೊಂಡಿರುತ್ತದೆ. ಪ್ರಜಾಪ್ರಭುತ್ವದಲ್ಲಿ 'ಮತ'ಚಲಾವಣೆಗೆ ಶಿಕ್ಷಣ ಅಗತ್ಯವೆಂದು ಆದರೆ ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆ ಜಾರಿಗೆ ಬಂದಾಗ ಶಿಕ್ಷಣ ಅತ್ಯಗತ್ಯವೆಂದು ಹೇಳಲಾಗುತ್ತದೆ. ಬಹುಪಾಲು ಜನ ಅನಕ್ಷರಸ್ಥರೇ ಮತ ಚಲಾಯಿಸಿ ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಗೆ ಕಾರಣವಾಗುವುದರಿಂದ, ಪ್ರಜಾಪ್ರಭುತ್ವ ಯಶಸ್ವಿಯಾಗಲಾರದು. ಪ್ರಜಾಪ್ರಭುತ್ವದ ಯಶಸ್ಸಿಗೆ, ಜನತೆಗೆ 'ಶಿಕ್ಷಣ' ಕೊಡುವುದು ಜವಾಬ್ದಾರಿ ಎಂಬಂತೆ ತಿಳಿಯಲಾಗುತ್ತದೆ. ಆದರೆ 'ಶಿಕ್ಷಣ' ಎಂಬುವುದು ಕಲಿಯುವ ಕ್ರಿಯೆ ಹೇಗೋ ಹಾಗೆಯೇ ಕಲಿಸುವ ಅವಕಾಶ ಕಲ್ಪಿಸುವ, ಬದುಕು ರೂಪಿಸುವ ಸುಶಿಕ್ಷಿತ ಸಮಾಜ ನಿರ್ಮಿಸುವ ಕಾರ್ಯವೂ ಆಗಿದೆ. ಇದೂ ಕೇವಲ ಪ್ರಾಥಮಿಕ ಶಿಕ್ಷಣ ನೀಡುವಷ್ಟಕ್ಕೆ ಸೀಮಿತವಾಗದೆ, ರಾಜಕೀಯ ಪ್ರಜ್ಞೆ ತಿಳಿಯುವ ಪ್ರೌಢಶಿಕ್ಷಣದವರೆಗೆ ಎಲ್ಲ ವರ್ಗ, ಜಾತಿ, ಪಂಗಡ, ಧರ್ಮದವರಿಗೆ ಹೇಗೆ ಸಾಧ್ಯ ಎಂಬವರೆಗೆ ಇದರ ವ್ಯಾಪ್ತಿ ಅಡಗಿದೆ. ಇದರಿಂದಾಗಿ ಪ್ರಜಾಪ್ರಭುತ್ವದ 'ಶಿಕ್ಷಣ' ಕೇವಲ ಮೌಲ್ಯ ಅಥವಾ ಆದರ್ಶವಾಗದೆ ಅದು ಅವಕಾಶ, ಮತ್ತು ಸೌಲಭ್ಯ ನೀಡುವ ಪ್ರಾಯೋಗಿಕ ಕ್ರಿಯೆ ಆದಾಗ ಮಾತ್ರ ಬಹುಮುಖೀ ಸಂಸ್ಕೃತಿಯ ವಿವಿಧ ವರ್ಗ ಜಾತಿಯ ಸಮಾಜದಲ್ಲಿ ಪ್ರಜಾಪ್ರಭುತ್ವದ ಮುಖ್ಯ ಧ್ಯೇಯವಾಗಬೇಕಾಗಿದೆ. ಪ್ರಜಾಪ್ರಭುತ್ವ ಸಿದ್ಧಾಂತ ಮತ್ತು ಶಿಕ್ಷಣ ಎಂಬ ವಿಷಯಗಳನ್ನು ತೆಗೆದುಕೊಂಡು ಭಾರತವನ್ನು ಹಿನ್ನೆಲೆಯಾಗಿ ಇಟ್ಟುಕೊಂಡು ಅಧ್ಯಯನ ಮಾಡುವುದು ಇಲ್ಲಿಯ ವ್ಯಾಪ್ತಿಯಾಗಿದೆ.

ಪ್ರಜಾಪ್ರಭುತ್ವ ಸಿದ್ಧಾಂತ ಅರ್ಥ ಮಾಡಿಕೊಳ್ಳಲು ಜಾಗತಿಕ ನೆಲೆಯಲ್ಲಿ ,ಜಾಗತಿಕ ಸಿದ್ಧಾಂತಗಳನ್ನು ವಿವರಿಸುತ್ತಾ ಅವುಗಳ ಮಹತ್ವ,ಅವುಗಳ ಆಡಳಿತ ವೈಖರಿ ಮತ್ತು ಅವುಗಳ ಸಫಲತೆಗೆ-ವಿಫಲತೆಗೆ ಕಾರಣಗಳನ್ನು ವಿವರಿಸಲಾಗಿದೆ. ಭಾರತ ಸ್ವಾತಂತ್ರ್ಯ ಪಡೆದ ನಂತರ ಪ್ರಜಾಪ್ರಭುತ್ವ ಸಮಾಜವಾದಿ ರಾಷ್ಟ್ರವಾಗಿ ರೂಪುಗೊಳ್ಳಲು ಕಾರಣ ಮತ್ತು ತನ್ನದೇ ಆದ ಆಡಳಿತ ವ್ಯವಸ್ಥೆಯನ್ನು ಹೊಂದಲು, ಪ್ರಜಾಪ್ರಭುತ್ವವಾದಿಗಳಾದ ಜವಾಹರಲಾಲ್ ನೆಹರೂ, ಮಹಾತ್ಮಗಾಂಧೀಜಿ ಹಾಗೂ ಡಾ: ಬಿ.ಆರ್. ಅಂಬೇಡ್ಕರ್ ರಂತಹ ಮೇಧಾವಿಗಳ ಪ್ರಯತ್ನ ಮತ್ತು

ಅವರುಗಳು ಪ್ರಜಾಪ್ರಭುತ್ವದಲ್ಲಿ ಇಟ್ಟ ಅಚಲನಂಬಿಕೆ, ವಿಶ್ವಾಸ ಮತ್ತು ಅವರುಗಳು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಇಲ್ಲಿ ವಿವರಿಸಲಾಗಿದೆ. ಆಡಳಿತ ವ್ಯವಸ್ಥೆಯಲ್ಲಿ ಪ್ರಜೆಗಳ ಪಾಲ್ಗೊಳ್ಳುವಿಕೆ ಮತ್ತು ವ್ಯಕ್ತಿ ಬೆಳವಣಿಗೆಯ ಜೊತೆಗೆ ಸಮಾಜದ ಬೆಳವಣಿಗೆ ಅತಿ ಮುಖ್ಯ ಎಂಬುವುದು ಪ್ರಜಾಪ್ರಭುತ್ವ ಸಿದ್ಧಾಂತದಲ್ಲಿ ಪ್ರತಿಪಾದಿತವಾಗಿರುವುದರಿಂದ, ಪ್ರತಿಯೊಬ್ಬ ಪ್ರಜೆಯೂ ಇಲ್ಲಿ ಪ್ರಭು. ಚುನಾವಣೆಯಲ್ಲಿ 'ಮತ' ಚಲಾಯಿಸುವುದೊಂದೇ ಪ್ರಭುವಿನ ಕೆಲಸವಲ್ಲ. ಜೊತೆಗೆ ಆಡಳಿತದಲ್ಲಿ ಪಾಲ್ಗೊಳ್ಳಬೇಕು ಎಂಬುವುದನ್ನು ಚರ್ಚಿಸಲಾಗಿದೆ. ಜನತೆಯ ಪ್ರಗತಿಯಲ್ಲಿ ಶಿಕ್ಷಣದ ಪಾತ್ರ, ಶಿಕ್ಷಣದ ಪದ್ಧತಿಗಳು ಹಾಗೂ ಶಿಕ್ಷಣ ನಡೆದು ಬಂದ ದಾರಿ ಇತ್ಯಾದಿಗಳನ್ನು ಭಾರತ ದೇಶದ ಚಾರಿತ್ರಿಕ ಹಿನ್ನೆಲೆಯಲ್ಲಿ ನೋಡಿ ಅದರ ಬದಲಾವಣೆಗಳು, ಪ್ರಗತಿಗಳು ಹಾಗೂ ಶಿಕ್ಷಣದ ಸ್ವರೂಪ ಹೇಗಿರಬಹುದು ಎಂಬುವುದನ್ನು ಇಲ್ಲಿ ವಿವರಿಸಲಾಗಿದೆ ಮತ್ತು ಚರ್ಚಿಸಲಾಗಿದ. ಇಂತಹ ಒಂದು ವಿವರವಾದಂತ ವಿಶ್ಲೇಷಣೆ ಮಾಡಿಕೊಳ್ಳುತ್ತಾ ಪ್ರಜಾಪ್ರಭುತ್ವ ಸಿದ್ಧಾಂತ ಫಲಪ್ರದವಾಗಿ ಜಾರಿಗೊಳ್ಳುವಲ್ಲಿ ಶಿಕ್ಷಣದ ಮಹತ್ವವನ್ನು ಅರಿಯಲು ಪ್ರಯತ್ನಿಸಲಾಗಿದೆ. ಈ ಚಿಂತನೆಗೆ ಪ್ರಾಯೋಗಿಕವಾದ ಪುರಾವೆಯನ್ನು ಒದಗಿಸಿ ಕೊಳ್ಳುವ ಕಾರಣವಾಗಿ ಬಳ್ಳಾರಿ ಜಿಲ್ಲೆಯಲ್ಲಿ ಪ್ರಜಾಪ್ರಭುತ್ವ ಸರಿಯಾಗಿ ಅನ್ವಯವಾಗದೆ ಹಿನ್ನಡೆಗೊಂಡಿದೆ ಎಂಬುದನ್ನು ಸೋದಾಹರಣವಾಗಿ ವಿಶ್ಲೇಷಿಸಲಾಗಿದೆ. ಜೊತೆಗೆ ಇನ್ನಷ್ಟು ಸೂಕ್ಷ್ಮದ ಪುರಾವೆಯನ್ನು ಒದಗಿಸಲು ೧೯೯೪ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ನಡೆದಿರುವ ಸಂಪೂರ್ಣ ಸಾಕ್ಷರತಾ ಕಾರ್ಯಕ್ರಮದ ವಿಶ್ಲೇಷಣೆಯನ್ನು ವಿವರವಾಗಿ ಕೈ ಕೊಳ್ಳಲಾಗಿದೆ. ಕರ್ನಾಟಕದ ಇತರ ಜಿಲ್ಲೆಗಳಿಗೆ ಹೋಲಿಸಿದರೆ ಬಳ್ಳಾರಿ ಜಿಲ್ಲೆಯಲ್ಲಿ ನಡೆದ ಸಂಪೂರ್ಣ ಸಾಕ್ಷರತಾ ಆಂದೋಲನದ ಪರಿಣಾಮಗಳೂ ಮತ್ತು ಗೊತ್ತು ಗುರಿಗಳು, ಈ ಜಿಲ್ಲೆಯ ಜನತೆ ಮತ್ತು ಜನಜೀವನದ ಮೇಲೆ ಯಾವ ಬದಲಾವಣೆಯನ್ನು ತರಬಹುದು. ಇದಕ್ಕಾಗಿ ಸರಕಾರ ಖರ್ಚು ಮಾಡುವಂತಹ ಹಣದ ಜೊತೆಗೆ ಸಮಾಜದ ಕೊಡುಗೆ ಏನು? ಎಂಬುವುದನ್ನು ನೋಡುತ್ತಾ ಈ ವಿಶ್ಲೇಷಣೆಗೆ ಅಂಕಿ-ಅಂಶಗಳ ಮಾಹಿತಿಗಳನ್ನು ಒದಗಿಸಿಕೊಳ್ಳುವಲ್ಲಿ ನೇರವಾಗಿ ಕಾರ್ಯಕರ್ತರು, ಸಾರ್ವಜನಿಕರು ಮತ್ತು ಅಧಿಕಾರಿಗಳೊಂದಿಗೆ ಸಂದರ್ಶನ, ವಿಶ್ಲೇಷಣೆ, ಚರ್ಚೆಯನ್ನು ಕೈಗೊಂಡ ಆ ವಿವರಗಳನ್ನು ಬಳಸಿಕೊಳ್ಳಲಾಗಿದೆ. ಒಟ್ಟಾರೆಯಾಗಿ ಈ ಸಂಶೋಧನೆಯು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಶಿಕ್ಷಣದ ಪಾತ್ರವನ್ನು ಗ್ರಹಿಸಲು ಪ್ರಯತ್ನವನ್ನು ಮಾಡಲಾಗಿದೆ.

## ಅಧ್ಯಾಯ-೨

# ಆಡಳಿತ ವ್ಯವಸ್ಥೆ ಮತ್ತು ರಾಜಕೀಯ ಸಿದ್ಧಾಂತಗಳು

೧. ಪ್ರಾಚೀನರಲ್ಲಿ ಆಡಳಿತ ವ್ಯವಸ್ಥೆ

೨. ಆಡಳಿತ ಪದದ ಅರ್ಥ ವಿವರಣೆ

೩. ಆಡಳಿತ ವ್ಯವಸ್ಥೆಗಳು ಅಳವಡಿಸಿಕೊಂಡ ಕೆಲವು ಪ್ರಮುಖ ರಾಜಕೀಯ ಸಿದ್ಧಾಂತಗಳ ಮಾದರಿಗಳು

೪. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರಜೆಗಳ ಪಾತ್ರ

೫. ರಾಜಕೀಯ ಸಿದ್ಧಾಂತಗಳು-ತೌಲನಿಕ ಅಧ್ಯಯನ

# ಅಧ್ಯಾಯ-೨

## ಆಡಳಿತ ವ್ಯವಸ್ಥೆ ಮತ್ತು ರಾಜಕೀಯ ಸಿದ್ಧಾಂತಗಳು

"ಮಾನವ ಸಂಘಜೀವಿ". ಆತ ಒಂಟಿಯಾಗಿ ಬದುಕಲಾರ. ಸಮಾಜದಲ್ಲಿಯೇ ತನ್ನ ಬದುಕಿನ ಸಿದ್ಧಿಯನ್ನು ಪಡೆಯಬೇಕಾದ ಮಾನವನ ಬದುಕು ಸಮಾಜದ ಅವಿಭಾಜ್ಯ ಅಂಗವೇ ಆಗಿರುವದು. ಮಾನವನು ಸಾಮಾಜಿಕ ಸಂಬಂಧಗಳಿಂದ ದೂರವಿರುವುದು ಸಾಧ್ಯವೇ ಇಲ್ಲ. ವ್ಯಕ್ತಿ-ವ್ಯಕ್ತಿಗಳ ನಡುವೆ ಸಂಪರ್ಕ ಕ್ರಿಯೆ ಉಂಟಾಗುತ್ತದೆ. ಮಾನವ ಸಂಬಂಧ ಬೆಳೆಯುವ ಅಭಿಪ್ರಾಯ, ಆಲೋಚನೆ, ವಿಚಾರ ವಿಷಯಾದಿಗಳು, ವಿನಿಮಯ ಮಾಡಿಕೊಳ್ಳುವ ಎಲ್ಲಾ ವಿಧಾನಗಳು ಈ ಸಂಪರ್ಕ ಪದದ ವ್ಯಾಪ್ತಿಗೆ ಒಳಪಡುತ್ತವೆ.

ಜಾನ್ ಡ್ಯೂಯಿ ಅವರು ಹೇಳುವಂತೆ, " ಸಂಪರ್ಕವಿಲ್ಲದೆ ಮಾನವ ಸಮಾಜವಿಲ್ಲ. ಮಾನವ ಇಂದು ನಾಗರಿಕನಾಗಿ ಉತ್ತಮಸ್ಥಿತಿಯಲ್ಲಿರಲು ಸಂಪರ್ಕವೇ ಕಾರಣವಾಗಿದೆ. ಸಂಪರ್ಕ ಎಂಬುವುದಿಲ್ಲದಿದ್ದರೆ, ಇಂದು ಮಾನವ, ಮಾನವನಾಗುತ್ತಿರಲಿಲ್ಲ. ತೀರಾ ಕೆಳಮಟ್ಟದ ಪ್ರಾಣಿಗಳಂತೆಯೇ ಉಳಿಯುತ್ತಿದ್ದ". ಅಂದರೆ ವ್ಯಕ್ತಿ-ವ್ಯಕ್ತಿಗಳ ನಡುವೆ ಸಂಪರ್ಕ ಮುಖ್ಯ. ಜಾತಿ, ಧರ್ಮ, ಭಾಷೆ ಪಂಗಡಗಳ ವೈವಿಧ್ಯ ಮತ್ತು ಏಕಾರೂಪತೆ ಸಾಧಿಸಲು ಎಲ್ಲರಿಗೂ ಅನುಕೂಲವಾದ, ಜೀವನದಲ್ಲಿ ಸುಖದಾಯಕವಾದ ಆಡಳಿತ ವ್ಯವಸ್ಥೆಯನ್ನು ಮಾನವ ಮಾಡಿಕೊಂಡಿದ್ದಾನೆ.

"ಸಮಾಜ" ಎನ್ನುವುದು ಒಂದು ವ್ಯವಸ್ಥೆ. ಯಾವುದೇ "ಸಮಾಜ" ರೂಪುಗೊಳ್ಳಬೇಕಾದರೆ, ಅದಕ್ಕೆ ಅದರದೇ ಆದ ವ್ಯವಸ್ಥಿತವಾದ ನೀತಿ, ನಿಯಮಗಳಿರುತ್ತವೆ. ಆ ನೀತಿ, ನಿಯಮಗಳ ಉದ್ದೇಶ, ಮಾನವ ಮತ್ತು ಒಟ್ಟು ಸಮಾಜದ ಬೆಳವಣಿಗೆ ಮತ್ತು ಪ್ರಗತಿಯೇ ಆಗಿರುತ್ತದೆ. ಸಮಾಜವೊಂದು ಜಾತಿ, ವರ್ಗ, ಧರ್ಮಗಳ ಸಂಕೀರ್ಣ ವ್ಯವಸ್ಥೆಯಾಗಿರುತ್ತದೆ. ಸುಖಕರ ಜೀವನಕ್ಕೆ ಸಹಕಾರ ಬಹಳ ಅಗತ್ಯವಾದದ್ದು. ಕಾರಣ ಪ್ರತಿಯೊಬ್ಬ ವ್ಯಕ್ತಿಯೂ ಮತ್ತೊಬ್ಬನನ್ನು ಅವಲಂಬಿಸುರುತ್ತಾನೆ. ಸಮಾಜದಲ್ಲಿ ನಿಜವಾದ ಸಂತೋಷವನ್ನು ಕಾಣಬೇಕೆಂದರೆ, ಎಲ್ಲ ಪ್ರಜೆಗಳು ಸ್ವತಂತ್ರರೂ, ಸಮಾನರೂ ಆಗಿರಬೇಕು. ಇದರಿಂದ ಸಮಾಜ ಪ್ರಬಲವಾಗವುದಷ್ಟೇ ಅಲ್ಲ, ದೇಶವೂ ಪ್ರಬಲವಾಗುವುದು.

ಮನುಷ್ಯನು ಕುಟುಂಬ, ರಾಷ್ಟ್ರ ಮತ್ತು ವಿಶ್ವದ ಪ್ರಜೆಯಾಗಿರುವನು. ಅವನು ಪ್ರತಿಯೊಂದರ ಬಗ್ಗೆಯೂ ಮಾಡಬೇಕಾದ, ಕರ್ತವ್ಯಗಳಿರುವವು. ಕುಟುಂಬ, ರಾಷ್ಟ್ರಗಳು ಒಂದೇ ದಿನದಲ್ಲಿ ಬೆಳೆದು ಬಂದಿಲ್ಲ. ಅವು ಕಾಲ ಕ್ರಮೇಣ ಬೆಳೆದು ಬಂದಿವೆ. ಪ್ರಾಚೀನರಲ್ಲಿಯೂ ಸಹ ಆಡಳಿತ ವ್ಯವಸ್ಥೆ ಸುಗಮವಾಗಿತ್ತು. ರಾಜ, ರಾಜ್ಯ ಆಡಳಿತ, ವಿಭಾಗಕ್ರಮ ಇತ್ಯಾದಿಗಳ ಬಗ್ಗೆ ಗಮನ ಹರಿಸಿದ್ದರು.

### ೨.೧ ಪ್ರಾಚೀನರಲ್ಲಿ ಆಡಳಿತ ವ್ಯವಸ್ಥೆ

ಪ್ರಾಚೀನ ಕರ್ನಾಟಕದ ರಾಜರು, ತಮ್ಮ ರಾಜ್ಯಗಳಲ್ಲಿನ ಆಡಳಿತವನ್ನು ನೋಡಿಕೊಂಡು ಹೋಗಲು ಒಂದು ವ್ಯವಸ್ಥಿತವಾದ ರೂಪವನ್ನು ಕೊಟ್ಟಿದ್ದರು. ಸರ್ವತಂತ್ರ ಸ್ವತಂತ್ರ ಅಧಿಕಾರಿ ರಾಜನೆ. ಆಧಾರಗಳಾಗಿ, ಶಾಸನಗಳು ಬರುತ್ತವೆ. ಜೊತೆಗೆ ಆಡಳಿತ ನಡೆಸುವುದರ ಬಗ್ಗೆ ಸ್ಮೃತಿ ಧರ್ಮಶಾಸ್ತ್ರ ಗ್ರಂಥಗಳು, ವಿದೇಶಿ ಬರವಣಿಗೆಗಳು ಇತ್ಯಾದಿ ಮೂಲಗಳಿಂದ ತಿಳಿಯಬಹುದು.

ರಾಜನ ಕರ್ತವ್ಯ ಪ್ರಜಾಪರಿಪಾಲನೆ. ದುಷ್ಟರನ್ನು ದಂಡಿಸುವುದು ಶಿಷ್ಟರನ್ನು ಪೋಷಿಸುವುದು, ನ್ಯಾಯಾನ್ಯಾಯ ವಿವಾದವನ್ನು ವಿಚಾರಣೆಯಿಂದ ತೀರ್ಮಾನಿಸುವುದು, ತೆರಿಗೆಯ ಹೊರೆಯನ್ನು ಹಗುರವಾಗಿಸುವುದು. ವರ್ಣಾಶ್ರಮ ವ್ಯವಸ್ಥೆಯನ್ನು ಉಳಿಸುವುದು ಪರರಾಜರ ಪೆಟ್ಟಿನಿಂದ ತನ್ನ ರಾಜ್ಯವನ್ನು ಕಾಪಾಡುವುದು ಇವೇ ಮೊದಲಾದ ಕರ್ತವ್ಯಗಳು ರಾಜಧರ್ಮದ ಅಂಶಗಳೆಂದು ನಮ್ಮ ಸ್ಮೃತಿ ಪುರಾಣಗಳು ಹೇಳುತ್ತಿವೆ.

ಇನ್ನೂ ಕೆಲವರು ಮತ್ಸ್ಯನ್ಯಾಯ ರಾಜತ್ವ ಹುಟ್ಟಿದಕ್ಕೆ ಕಾರಣ ಹೇಳುತ್ತಾರೆ. ಮತ್ಸ್ಯನ್ಯಾಯ ತಾಂಡವ ವಾಡುತ್ತಿರುವಾಗ ತಮ್ಮನ್ನು ತಾವು ರಕ್ಷಿಸಿಕೊಳ್ಳುವುದಕ್ಕಾಗಿ ತಾವು ಬಯಸಿ, ಮಾಡಿಕೊಂಡ ವ್ಯವಸ್ಥೆಯೇ ರಾಜತ್ವ. ಮತ್ಸ್ಯ ದೊಡ್ಡ ಮೀನು, ಸಣ್ಣ ಮೀನನ್ನು ತಿಂದು ಹಾಕುತ್ತವೆ. ಮನುಷ್ಯರಲ್ಲಿಯೇ ಬಲಾಢ್ಯರಾದವರು ನಿಶ್ಶಕ್ತರಾದವರನ್ನು ತುಳಿಯಲು ತೊಡಗಿದಾಗ ಜನರು ತಮ್ಮನ್ನು ತಾವು ರಕ್ಷಿಸಿಕೊಳ್ಳಲು ತಪ್ಪಿಸಿಕೊಳ್ಳುವುದಕ್ಕಾಗಿ ಒಬ್ಬನನ್ನು ಆರಿಸಿಕೊಂಡು "ರಾಜ"ಎಂದರು. ಅವನಿಂದ ಸುವ್ಯವಸ್ಥಿತವಾದ ಆಡಳಿತ ವ್ಯವಸ್ಥೆಯನ್ನು ಮಾಡಿಕೊಂಡರು. ಪ್ರಜೆಗಳನ್ನು ರಕ್ಷಣೆ ಮಾಡುವದು ರಾಜನಾದವನ ಮೊಟ್ಟಮೊದಲ ಕರ್ತವ್ಯ. ಪ್ರಜೆಗಳರಕ್ಷಣೆ,ರಾಜನ ಕರ್ತವ್ಯದ ಬಗ್ಗೆ "ಕನ್ನಡದ ಕಾವ್ಯಾವಲೋಕನದಲ್ಲಿ" ಈ ರೀತಿ ಇದೆ.

"ಆರ್ಮೆಯಿ ಸರ್ವಭೂತಾಧಾರಂ ಮಳೆಯುಂ ನೃಪೇಂದ್ರನುಂ"ಮಳೆಗಾಲಂ ಬಾರದೊಡಂ ನಿರ್ವಹಿಸುವರ್ ಆರುಂ ನೃಪನಿಲ್ಲದಿಂದು ನಿರ್ವಹಿಸುವರೆ?" ೩೧೩ ನೇ ಪದ್ಯ.

ಇಲ್ಲಿ ಮಳೆಗಿಂತಲೂ 'ರಾಜ' ಮುಖ್ಯನಾಗಿದ್ದನು, ಎಂದು ಸ್ಪಷ್ಟ ಪಡಿಸಿದ್ದಾರೆ. ರಾಜನಿಲ್ಲದಿದ್ದರೆ ನಿರ್ವಹಿಸಲಾಗದು. ಆಡಳಿತ ವ್ಯವಸ್ಥೆ ಸುಗಮವಾಗಲಾರದು. ಈ ರೀತಿ ಆಡಳಿತ ವ್ಯವಸ್ಥೆ ಬಗ್ಗೆ ಕನ್ನಡಿಗರಲ್ಲಿ ಉದಾತ್ತ ಭಾವನೆಗಳಿದ್ದವು, ಎಂಬುವುದನ್ನು ತಿಳಿಯಬಹುದು./ಪ್ರಾಚೀನ ಕರ್ನಾಟಕದ ಆಡಳಿತ ವ್ಯವಸ್ಥೆಯನ್ನು ಸ್ಥೂಲವಾಗಿ ಎರಡು ವಿಭಾಗಗಳಾಗಿ ವಿಂಗಡಿಸಬಹುದು. ರಾಜ್ಯಾಡಳಿತ ಮತ್ತು ಊರುಗಳ ಆಡಳಿತ. ಈ ವಿಭಜನೆಯು ಕೇವಲ ಸೌಕರ್ಯಕ್ಕಾಗಿ, ಸಹಕಾರಕ್ಕಾಗಿ ಮಾಡಿಕೊಂಡಿರುವಂಥದು. ಗ್ರಾಮಗಳ ಮತ್ತು ನಗರಗಳ ಮೊತ್ತವೇ ರಾಜ್ಯ ಪ್ರಾಚೀನರ ಪ್ರಕಾರ ರಾಜ್ಯ ಎನ್ನುವುದು ರಾಜನಿಗೆ ಸೇರಿದುದು. ಅದರ ರಕ್ಷಣೆ ಅವನ ಹೊಣೆ.

" ಸೋಮದೇವನ ನೀತಿ ವಾಕ್ಯಾಮೃತದ ಪ್ರಕಾರ" ಪ್ರಾಜೆಗಳನ್ನು ರಕ್ಷಿಸಿದವನು ರಾಜನೇ ಅಲ್ಲ. " ಸ ಕಿಂ ರಾಜಾಯೋ ನ ರಕ್ಷತಿ ಪ್ರಜಾಃ" ಪ್ರಜಾಪಾಲನೆಯೇ ರಾಜನ ನಿಜವಾದ ಯಜ್ಞವೆಂದೂ ಭಾವಿಸಿದ್ದರು. " ಪ್ರಜಾಪಾಲನಂ ಹಿ ರಾಜ್ಞಃ ಯಜ್ಞಃ"- ಹೀಗೆ ರಾಜನಿರುವುದು ಪ್ರಜೆಗಳಿಗಾಗಿ ಅವರ ಯೋಗಕ್ಷೇಮಕ್ಕಾಗಿ ಎಂಬ ಭಾವನೆ ಸಾರ್ವತ್ರಿಕವಾಗಿದ್ದಿತು. ಪ್ರಾಚೀನರು ಆಡಳಿತ ವ್ಯವಸ್ಥೆಯನ್ನು ಯಾವ ವಿಭಾಗಿವಾಗಿ ಮಾಡಿದ್ದಾರೋ ಆ ವಿಭಾಗವನ್ನೇ ಈಗ ಮುಂದುವರಿಸಿಕೊಂಡು ಬಂದಿರುವುದನ್ನು ಕಾಣಬಹುದು. ಹೆಸರಿನ ವ್ಯತ್ಯಾಸ ಬದಲಿರಬಹುದು ಆದರೆ ಪದ್ಧತಿ ಮಾತ್ರ ಅದೇ ಮುಂದುವರಿದಿದೆ.

## ೨.೨ ಆಡಳಿತ ಪದದ ಅರ್ಥ ವಿವರಣೆ

'ಆಡಳಿತ' ಪದದ ಅರ್ಥ ವ್ಯಾಪ್ತಿ ವಿಶಾಲವಾದುದು. ಮತ್ತು ಅಷ್ಟೇ ಸಂಕೀರ್ಣವಾದುದು. 'ಆಡಳಿತ'ವು ಸಮಾಜವನ್ನು ಸುವ್ಯವಸ್ಥೆಯಲ್ಲಿಡಲು ಕಾರಣವಾಗಿದೆ. ಅಲ್ಲದೇ 'ಆಡಳಿತ'ವು ಅಧಿಕಾರ ಚಲಾವಣೆಯೇ ಆಗದೆ. ಒಂದುಸಮಾಜದ ಆಡಳಿತ ವ್ಯವಸ್ಥೆ ಯಾವ ರೀತಿಯದು ಎನ್ನುವುದರ ಮೇಲೆ ಆ ಸಮಾಜದ ಧ್ಯೇಯ ಧೋರಣೆ, ನೀತಿ, ನಿಯಮ ಪ್ರಗತಿಗಳು ನಿರ್ಧರಿತವಾಗಿರುತ್ತವೆ. ಇದು ಮನುಷ್ಯ ತನ್ನ ಉದ್ದೇಶ ಗುರಿ ಸಾಧನೆಗಾಗಿ ರೂಪಿಸಿಕೊಂಡ ವ್ಯವಸ್ಥೆಗಳ ಕ್ರಮ. ಮತ್ತು ಸಂಘಜೀವನದ ಫಲ. ಹೀಗಾಗಿ ಯಾವುದೇ ಸಮಾಜದಲ್ಲಿ

‘ಆಡಳಿತ’ವ್ಯವಸ್ಥೆ ಇರಲೇಬೇಕು. ಅದರ ರೀತಿಗಳು ಬೇರೆ ಬೇರೆಯಿರಬಹುದು. ಆದರೆ, ತಾನು ರೂಪಿಸಿಕೊಂಡ ಆಡಳಿತ ವ್ಯವಸ್ಥೆಯ ಚೌಕಟ್ಟಿಗೆ ಯಾವುದೇ ಸಮಾಜ ಒಳಪಟ್ಟಿರುತ್ತದೆ.

ಆದಿ ಮಾನವನಿಂದ ಈವರೆಗಿನ ಮಾನವ ಸಮಾಜವು ಅನೇಕ ರೀತಿಯ ಆಡಳಿತ ವ್ಯವಸ್ಥೆಗಳನ್ನು ರೂಪಿಸಿಕೊಂಡಿದೆ. ಇದು ಮಾನವ ವಿಕಾಸದ ಚರಿತ್ರೆಯೇ ಆಗಿದೆ. ಆಡಳಿತ ವ್ಯವಸ್ಥೆ ರೂಪುಗೊಳ್ಳಲು ಮಾನವನ ಬುದ್ಧಿ ಕುಶಲತೆಗಳೇ ಮುಖ್ಯ ಕಾರಣವಾದ್ದರಿಂದ, ಬುದ್ಧಿ ಕುಶಲತೆ ಬೆಳೆದುದರ ಅನುಗುಣವಾಗಿ ಆಡಳಿತ ವ್ಯವಸ್ಥೆಗಳು ರೂಪಿತವಾಗಿ, ಚರಿತ್ರೆಯಲ್ಲಿ ಮಾನವನ ಆಡಳಿತ ವ್ಯವಸ್ಥೆಗಳು ಚಾರಿತ್ರಿಕ ಸಂದರ್ಭಕ್ಕನುಗುಣವಾಗಿ ಹುಟ್ಟಿಕೊಂಡಿವೆ. ಕೆಲವು ಆಡಳಿತ ವ್ಯವಸ್ಥೆಗಳು ಯಶಸ್ವಿಯಾಗಿವೆ. ಕೆಲವು ವಿಫಲವಾಗಿವೆ. ಇನ್ನು ಕೆಲವು ಪ್ರಯೋಗದಲ್ಲಿವೆ. ಈ ಆಡಳಿತ ವ್ಯವಸ್ಥೆಗಳು ಆಯಾ ಸಮಾಜ ತನ್ನ ಭದ್ರತೆ, ರಕ್ಷಣೆ, ನ್ಯಾಯ ಕ್ಷೇಮಕ್ಕಾಗಿ ರೂಪಿಸಿಕೊಂಡ ನೀತಿ, ನಿಯಮಗಳೂ ಆಗಿರುವುದರಿಂದ ಈ ಆಡಳಿತ ವ್ಯವಸ್ಥೆಗಳು ಸಮಾಜದಿಂದ ಸಮಾಜಕ್ಕೆ ದೇಶದಿಂದ ದೇಶಕ್ಕೆ ಭಿನ್ನವಾಗಿರುತ್ತವೆ. ಆಡಳಿತ ವ್ಯವಸ್ಥೆಗಳು ತಮ್ಮದೇ ಆದ ಸಂವಿಧಾನವೊಂದನ್ನು ರೂಪಿಸಿಕೊಂಡಿರುತ್ತವೆ. ಸಂವಿಧಾನದಲ್ಲಿನ ನೀತಿ, ನಿಯಮಗಳಿಗನುಗುಣವಾಗಿ ಆಡಳಿತ ನಡೆಸುತ್ತವೆ. ಹೀಗಾಗಿ ಆಡಳಿತ ಎನ್ನುವುದು ಅನೇಕ ಬಾರಿ ಬದಲಾವಣೆಗೊಳಪಟ್ಟರೂ ಅದು ಯಂತ್ರವಿದ್ದಂತೆ. ಅದರ ಚಾಲನೆ ಆಡಳಿತ ನಡೆಸುವವರ ಕೈಯಲ್ಲಿರುತ್ತದೆ. ಅಲ್ಲದೆ ಇದಕ್ಕೆ ಸೈದ್ಧಾಂತಿಕವಾದ ವಿಚಾರಗಳೂ ಇರುತ್ತವೆ. ಹೀಗಾಗಿ ಆಡಳಿತ ವ್ಯವಸ್ಥೆಯು ಅನೇಕ ಬಗೆಯ ರಾಜಕೀಯ ಸಿದ್ಧಾಂತಗಳನ್ನು ರೂಪಿಸಿಕೊಂಡುರುತ್ತದೆ. ಮುಖ್ಯವಾಗಿ ಜನರ ಹಿತರಕ್ಷಣೆಯೇ ಆಡಳಿತ ವ್ಯವಸ್ಥೆಯ ಮುಖ್ಯ ಗುರಿಯಾಗಿರುತ್ತದೆ.

ಶಿಕ್ಷಣ, ಉದ್ಯೋಗ, ಮುಂತಾದ ಮೂಲಭೂತ ಅವಶ್ಯಕತೆಗಳನ್ನು ಸಮಾಜದ ಜನರಿಗೆ ಪೂರೈಸುವುದು ಆಡಳಿತ ವ್ಯವಸ್ಥೆಯ ಮುಖ್ಯ ಕರ್ತವ್ಯವಾಗಿರುತ್ತದೆ. ಇದು ಯಶಸ್ವಿಯಾಗಬಹುದು ಅಥವಾ ವಿಫಲವಾಗಲೂ ಬಹುದು. ಹೀಗಾಗಿಯೇ ಆಡಳಿತ ವ್ಯವಸ್ಥೆಗಳು ಏಕ ಮಾದರಿಯವು ಅಲ್ಲ. ಅವು ವಿಭಿನ್ನವಾದವುಗಳಾಗಿವೆ.

ಇಂದು ಸಂಸ್ಕೃತಿ ನಾಗರಿಕತೆಗಳು ಬೆಳೆದಿವೆ. ಇಂದಿನ ಯಂತ್ರ ನಾಗರಿಕತೆಯ ಯುಗದಲ್ಲಿ ಮನುಷ್ಯ ಅತ್ಯಂತ ವಿಶಿಷ್ಟ ರೀತಿಯ ಸಮಾಜವನ್ನು ರೂಪಿಸಿಕೊಂಡಿದ್ದಾನೆ. ಈ ವಿಕಾಸ ಪಥದಲ್ಲಿ ಸಮಾಜ ಅನೇಕ ಹಂತಗಳನ್ನು ದಾಟಿ ಬಂದಿದೆ. ಹೀಗೆ ಸಾಗುವಲ್ಲಿ ಮಾನವ ರೂಢಿಸಿಕೊಂಡ ಆಡಳಿತ ವ್ಯವಸ್ಥೆಯ ಅತ್ಯಂತ ಪ್ರಮುಖವಾದುದಾಗಿದೆ.

ಸಂಸ್ಕೃತಿ , ನಾಗರಿಕತೆಗಳು ಬೆಳೆಯುವುದಕ್ಕೆ ಮುಂಚೆ ಮಾನವನಿಗೆ ಆಡಳಿತ ವ್ಯವಸ್ಥೆ ಇರಲಿಲ್ಲ. ಅಂದು ಮಾನವ ಅಲೆಮಾರಿಯಾಗಿದ್ದ. ಅನೇಕ ಗುಂಪುಗಳಾಗಿ ಹಂಚಿ, ಒಂದು ಗುಂಪು ಮತ್ತೊಂದು ಗುಂಪಿನೊಂದಿಗೆ ಸಂಬಂಧಗಳೇ ಇರಲಿಲ್ಲ. ಅಲ್ಲದೇ ಇದಕ್ಕೆ ಪ್ರಾಕೃತಿಕ ಹಾಗೂ ಭೌಗೋಳಿಕ ಕಾರಣಗಳು ಕಾರಣವಾಗಿವೆ. ಹೀಗಾಗಿ ಮಾನವ ಅನೇಕ ಗಣಗಳಾಗಿ ಹಂಚಿಹೋಗಿದ್ದ ಇದಕ್ಕೂ ಮುಂಚೆ ಮಾನವನ ಬುದ್ಧಿ ಕೌಶಲ್ಯ ಬೆಳೆಯುವುದಕ್ಕೆ ಮುಂಚೆ ಬೇಟೆ ಅವನ ಪ್ರಮುಖ ಕಸುಬಾಗಿತ್ತು. ಕುಟುಂಬದ ಸದಸ್ಯರೊಡನೆ ಬೆರೆತು ಆಹಾರ ಸಂಪಾದಿಸಿ, ಬದುಕುವ ಸಾಮೂಹಿಕ ಒಡೆತನ ಚಲಾವಣೆಯಲ್ಲಿತ್ತು. ಮಾನವನ ಬುದ್ಧಿ ಬೆಳೆದಂತೆ, ಬೇಟೆಯಿಂದ ಪಶು ಸಂಗೋಪನೆ- ಪಶುಸಂಗೋಪನೆಯಿಂದ ಕೃಷಿಗೆ ಪಲ್ಲಟವಾದ ಮೇಲೆ ಖಾಸಗಿ ಒಡೆತನ ಪ್ರಾರಂಭವಾಯಿತು. ಇಲ್ಲಿಂದ ತನ್ನ, ತನ್ನವರ ರಕ್ಷಣೆಗೆ ಮತ್ತು ಆಸ್ತಿ ಸಂರಕ್ಷಣೆಗಾಗಿ ಅನೇಕ ರೀತಿಯ ವ್ಯವಸ್ಥೆ ರೂಪಿಸಿ ಕೊಳ್ಳಬೇಕಾಯಿತು. ಕೃಷಿಯಾಧಾರಿತ ಕುಟುಂಬಗಳು ಒಂದೆಡೆಗೆ ನೆಲೆ ನಿಂತು ಬದುಕುವ ಪರಿಸ್ಥಿತಿ ಸೃಷ್ಟಿಯಾಯಿತು. ಅನೇಕ ಕುಟುಂಬಗಳು ಸೇರಿ ಗಣಗಳಾದವು, ಅನೇಕ ಗಣಗಳು ಸೇರಿ ಸಮುದಾಯ, ಅನೇಕ ಸಮುದಾಯ- ಸಂಘಗಳು ಸೇರಿ "ಸಮಾಜ" ನಿರ್ಮಾಣವಾಯಿತು.

ಸಂಘ, ಸಂಸ್ಥೆಗಳು ಸಮುದಾಯದ ಗುರಿಗಳನ್ನು ಸಾಧಿಸಲು ಆಶಯ ಹೊಂದಿ ಸೃಷ್ಟಿಯಾದವು. ಆಗ ಸಮುದಾಯ ಮತ್ತು ಸಮಾಜವನ್ನು ನಿಯಂತ್ರಣದಲ್ಲಿಡಲು, ಅವುಗಳ ಆಶೋತ್ತರಗಳನ್ನು ಈಡೇರಿಸಲು ಆಡಳಿತ ವ್ಯವಸ್ಥೆಯನ್ನು ಮಾನವ ರೂಪಿಸಿ ಕೊಳ್ಳಬೇಕಾಯಿತು. ಹೀಗಾಗಿ ಸಮಾಜ ಅಂತರಂಗಿಕವಾಗಿ ಅನೇಕ ರೀತಿಯ ಒಪ್ಪಂದಗಳನ್ನು ಮಾಡಿಕೊಂಡಿತು.

ಒಂದು ಸಮಾಜದ ಆಡಳಿತ ವ್ಯವಸ್ಥೆ ರೂಪುಗೊಳ್ಳುವುದು ಅಲ್ಲಿನ ವ್ಯಕ್ತಿಗಳಿಂದ, ಅದರ ವಿಸ್ತಾರ ಒಬ್ಬ ವ್ಯಕ್ತಿಯಿಂದ -ಅನೇಕ ವ್ಯಕ್ತಿಗಳವರೆಗೆ ಹರಡಿದೆ. ಈ ಆಡಳಿತ ವ್ಯವಸ್ಥೆಯೂ ರೂಪಿಸುವ ಕ್ರಿಯೆ ಅದು ದೇಶದಿಂದ, ದೇಶಕ್ಕೆ , ಸಮಾಜದಿಂದ ಸಮಾಜಕ್ಕೆ ಭಿನ್ನವಾದರೂ ಅದು ಒಟ್ಟಾಗಿ ಸಮಾಜವನ್ನು ಮುನ್ನಡೆಸುವ ಅಧಿಕಾರ, ಚಲಾವಣೆಯ ಒಂದು ಒಪ್ಪಂದವಾಗಿದೆ.

ಈ ಆಡಳಿತ ವ್ಯವಸ್ಥೆ ಎನ್ನುವುದು ಒಂದು ಸಮಾಜಕ್ಕೆ ಭದ್ರತೆಯನ್ನು ಒದಗಿಸುವುದಾಗಿದೆ. ಒಂದು ಸಮಾಜಕ್ಕೆ ಆಡಳಿತ ವ್ಯವಸ್ಥೆ ಇಲ್ಲದಿದ್ದರೆ, ಆ ಸಮಾಜ ಅರಾಜಕತೆಯಿಂದ ತೊಳಲಾಡುತ್ತಿರುತ್ತದೆ. ಅಂತಹ ಸಮಾಜದಲ್ಲಿ ಅನ್ಯಾಯ, ಅಕ್ರಮ, ದೌರ್ಜನ್ಯಗಳು ಹೆಚ್ಚಿ ಅಶಾಂತಿ, ತಾಂಡವವಾಡುತ್ತದೆ. ದೈಹಿಕ ಬಲವಿದ್ದವರು

ಬಲಹೀನರ ಮೇಲೆ ಆಕ್ರಮಣ ಶೀಲರಾಗುತ್ತಾರೆ. ಬದುಕು ಅಸ್ತವ್ಯಸ್ತವಾಗುತ್ತದೆ. ಇಡೀ ಸಮಾಜ ಮೃಗಗಳ ಪ್ರಪಂಚವಾಗಿ ಮಾರ್ಪಡುತ್ತದೆ. ಅಲ್ಲಿ ನೈತಿಕತೆ, ನ್ಯಾಯ, ಶಾಂತಿ ಇಲ್ಲವಾಗುತ್ತದೆ. ಹೀಗಾಗಿ ಆಡಳಿತ ವ್ಯವಸ್ಥೆ ಮಾನವ ಸಮಾಜಕ್ಕೆ ಅತ್ಯಂತ ಅಗತ್ಯ ಗಾಹೂ ಅನಿವಾರ್ಯವಾದುದು. ಇದನ್ನರಿತ ಮಾನವ ತನ್ನ ಸಮಾಜಕ್ಕೆ ಬೇಕಾದಂತಹ ಆಡಳಿತ ವ್ಯವಸ್ಥೆಗಳನ್ನು ಅತ್ಯಂತ ಪ್ರಾಚೀನ ಕಾಲದಿಂದ ಅಳವಡಿಸಿಕೊಂಡು ಬಂದಿದ್ದಾನೆ.

'ಆಡಳಿತ ವ್ಯವಸ್ಥೆ" ಯನ್ನು ನಿರ್ಧರಿಸುವವರು ಮತ್ತು ಅದನ್ನು ಸಮಾಜದಲ್ಲಿ ಪ್ರಯೋಗಿಕವಾಗಿ ಚಲಾವಣೆಗೆ ತರುವವರು ಆ ಸಮಾಜದ ಬುದ್ಧಿ ಜೀವಿಗಳೇ ಆಗಿರುತ್ತಾರೆ. ಆದ್ದರಿಂದ ಆಡಳಿತ ವ್ಯವಸ್ಥೆಯ ನಿರ್ಮಾಣದಲ್ಲಿ ಬುದ್ಧಿ ಜೀವಿಗಳ ಪಾತ್ರ ಹಿರಿದಾದು. ಆ ಸಮಾಜದ ಬುದ್ಧಿ ಜೀವಿಗಳು ಸಾಮಾಜಿಕ, ರಾಜಕೀಯ ಆರ್ಥಿಕವಾಗಿ ಪ್ರಜ್ಞಾಶೀಲ ವುಳ್ಳವರಾಗಿರುತ್ತಾರೆ. ಇಡೀ ಸಮಾಜದ ಜನರನ್ನು ಈ ಬುದ್ಧಿ ಜೀವಿಗಳೇ ಪ್ರತಿನಿಧಿಸುತ್ತಾರೆ. ಜನರ ಆಶೋತ್ತರಗಳನ್ನು ಅರಿತ ಮಾನವ ಪ್ರಗತಿಯನ್ನು ಬಯಸುವ ಬುದ್ಧಿಜೀವಿಗಳು ಆಲೋಚನೆಯಿಂದ ರೂಪಿತಗೊಂಡ ಆಡಳಿತ ವ್ಯವಸ್ಥೆ ಅತ್ಯಂತ ಶ್ರೇಷ್ಠ ಮಟ್ಟದ ಸಮಾಜವನ್ನು ನಿರ್ಮಿಸಲು ಸಾಧ್ಯ.

ರಾಜಕೀಯ ವ್ಯವಸ್ಥೆಯೊಂದು ಒಂದು ತಲೆಮಾರಿನವರಿಗೆ ಹಿಡಿಸಬಹುದು. ಆದರೆ ಇದೇ ವ್ಯವಸ್ಥೆ ಮತ್ತೊಂದು ತಲೆಮಾರಿನವರಿಗೆ ಸರಿ ಹೋಗದೇ ಇರಬಹುದು. ಅಂದರೆ ರಾಜಕೀಯ ವ್ಯವಸ್ಥೆ ಜನತೆಯ ಸಂಸ್ಕೃತಿ, ಶಿಕ್ಷಣ, ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಯನ್ನು ಅವಲಂಬಿಸಿರುತ್ತದೆ. ಜನ ಜೀವನ ಬದಲಿಸಿದಂತೆ ರಾಜಕೀಯ ವ್ಯವಸ್ಥೆಯೂ ಬದಲಿಸಬಹುದು. ಆದರೆ, ಯಾವ ರಾಜಕೀಯ ವ್ಯವಸ್ಥೆಯೂ ಶಾಶ್ವತವಲ್ಲ. ಜನತೆಯ ನಿರಂತರ ಒತ್ತಡಕ್ಕೆ ಇವು ಮಣಿಯಲೇ ಬೇಕಾಗುತ್ತವೆ. ಉದಾಹರಣೆಗೆ, ದುರ್ಬಲ ಪ್ರಜಾಸತ್ತೆಯು ಬಲಾನ್ವಿತ ಸರ್ವಾಧಿಕಾರಕ್ಕೆ ಮಣಿಯುತ್ತದೆ. ಜನಾದರಣೆಯನ್ನು ಪಡೆಯದ ಸರ್ವಾಧಿಕಾರತ್ವವು ಸೇನಾ ಪ್ರಭುತ್ವಕ್ಕೆ ಶರಣಾಗುತ್ತದೆ. ಜನತೆಯ ಹಕ್ಕುಗಳು ತುಳಿಯಲ್ಪಟ್ಟಾಗ ಅವರು ದಂಗೆ ಎದ್ದು ಸಂವಿಧಾನಾತ್ಮಕ ಪ್ರಜಾಸತ್ತೆಯನ್ನು ಸ್ಥಾಪಿಸಬಹುದು.

"ರಾಜಕೀಯ ಸಿದ್ಧಾಂತಗಳು" ಸಮಾಜದ ಪ್ರಗತಿಯ ಸಫಲತೆ ಮತ್ತು ವಿಫಲತೆಯನ್ನು ನಿರ್ಧರಿಸುತ್ತವೆ. "ಯಾವುದೇ ಒಬ್ಬ ಲೇಖಕನಿಂದ ರೂಪಿತ ವಿಚಾರ, ಇಲ್ಲವೇ ವಿಚಾರಧಾರೆ ರಾಜಕೀಯ ಸಿದ್ಧಾಂತವೆನಿಸಿಕೊಳ್ಳುತ್ತದೆ. ಪ್ರಚಲಿತ ರಾಜಕೀಯ ಘಟನೆಗಳ ನಿರೀಕ್ಷಣೆ ಮತ್ತು ವಿಶ್ಲೇಷಣೆಯ ಆಧಾರದಿಂದ

ರಚಿತವಾದ ಸಾಮಾನ್ಯ ನಿಯಮಗಳೂ ಕೂಡ ರಾಜಕೀಯ ಸಿದ್ಧಾಂತಗಳು ಎನಿಸಿ ಕೊಳ್ಳುತ್ತವೆ". ಅಲ್ಲದೆ ರಾಜಕೀಯ ಸಿದ್ಧಾಂತಗಳ ಬಗ್ಗೆ ಪ್ರೊ॥ " ಅರ್ನೆಸ್ಟ ಬಾರಕರ" ಎಂಬವರ ಅಭಿಪ್ರಾಯ ಹೀಗಿದೆ. ಮಾನವನು ಸಾಮಾಜಿಕ ಹಾಗೂ ನೈತಿಕ ಜೀವಿ ಈ ನಾತೆಯಿಂದ ತನ್ನ ಮುಂದೆ ಇರಿಸಿಕೊಳ್ಳುವ ಧ್ಯೇಯೋದ್ದೇಶಗಳಿಗೆ ಸಂಬಂಧಸಿದ ಸಿದ್ಧಾಂತಗಳೇ ರಾಜಕೀಯ ಸಿದ್ಧಾಂತಗಳು ಆಗಿವೆ. ತನ್ನ ವ್ಯಕ್ತಿತ್ವವನ್ನು ಸಾಧ್ಯವಿದ್ದ ಮಟ್ಟಿಗೆ ವಿಕಸನಗೊಳಿಸಲು ಮಾನವನು ಯತ್ನಿಸುತ್ತಾನೆ. ಆದರೆ, ಅವನ ಈ ನೈಸರ್ಗಿಕ ಎಂಬುದು ಮಹತ್ವದ ಪ್ರಶ್ನೆಯಾಗಿದೆ. ರಾಜ್ಯದ ಅಧಿಕಾರ ಮತ್ತು ವ್ಯಕ್ತಿಯ ಸ್ವಾತಂತ್ರ್ಯ ಈ ವಿಷಯಗಳ ಮೇಲೆ ರಾಜಕೀಯ ಸಿದ್ಧಾಂತವು ಬೆಳಕನ್ನು ಚೆಲ್ಲುತ್ತದೆ. ಉದಾ: ವ್ಯಕ್ತಿಗಳ ವಿಚಾರ ಹಾಗೂ ಪ್ರವೃತ್ತಿಗಳನ್ನು ನಿಯಂತ್ರಿಸುವ ವಿಷಯದಲ್ಲಿ ರಾಜ್ಯಕ್ಕೆ ಅನಿರ್ಬಾಧಿತ ಅಧಿಕಾರವಿದೆಯೇ? ಅಥವಾ ರಾಜ್ಯದ ಅಧಿಕಾರಗಳು ನಿರ್ಬಾಧಿತವಾದವುಗಳೇ? ಎಂಬ ಪ್ರಶ್ನೆಗಳಿಗೆ ರಾಜಕೀಯ ಸಿದ್ಧಾಂತದಲ್ಲಿ ಉತ್ತರವನ್ನು ಹುಡುಕ ಬಹುದು. ನೈತಿಕ ಮೌಲ್ಯದ ಸಮಸ್ಯೆಯೂ ಕೂಡ ರಾಜಕೀಯ ಸಿದ್ಧಾಂತದಲ್ಲಿ ಅಡಕವಾಗಿದೆ. ಈ ಮೌಲ್ಯದ ಸಮಸ್ಯೆಯೂ ಕೂಡ ರಾಜಕೀಯ ಸಂಗತಿಗಳ ವಿಶ್ಲೇಷಣೆ ಮಾಡಬೇಕಾಗುತ್ತದೆ. "ನ್ಯಾಯ" ಎಂಬುದು ಇಂಥದೊಂದು ನೈತಿಕ ಮೌಲ್ಯ ಉಳ್ಳತತ್ವ. "ನ್ಯಾಯದ" ಒರೆಗಲ್ಲಿಗೆ ಹಚ್ಚಿಯೆ ಎಲ್ಲ ರಾಜಕೀಯ ಸಿದ್ಧಾಂತಗಳನ್ನು ಪರೀಕ್ಷಿಸಬೇಕಾಗುತ್ತದೆ.

ಕೆಲವೊಂದು ಮಟ್ಟಿಗೆ ರಾಜಕೀಯ ಸಿದ್ಧಾಂತದ ಸ್ವರೂಪವು ತಾರ್ಕಿಕವೂ, ಕಾಲ್ಪನಿಕವೂ ಆಗಿದೆ. ಇದಕ್ಕೆ ಕಾರಣವೆಂದರೆ, ರಾಜ್ಯವು ಮುಂದೆ ಹೇಗೆ ರೂಪಗೊಳ್ಳಬೇಕು ಎಂಬುದೂ ಕೂಡ ರಾಜಕೀಯ ಸಿದ್ಧಾಂತದಲ್ಲಿ ಸಮಾವೇಶವಾಗುತ್ತದೆ. ಮುಂದೆ ಏನಾಗಬೇಕು, ಎಂಬುದು ಒಂದು ಕಲ್ಪನೆ ಮಾತ್ರ ಆಗಿದೆ. ಒಂದು ಆದರ್ಶವಾಗಿದೆ. ಸಾಧಿಸತಕ್ಕ ಒಂದು ಧ್ಯೇಯವಾಗಿದೆ. ಅದು ಕಲ್ಪನೆಗೆ ಸಂಬಂಧಿಸಿದುದು. ತನ್ನ "ರಿಪಬ್ಲಿಕ್ " ಎಂಬ ಗ್ರಂಥದಲ್ಲಿ ಪ್ಲೇಟೋ "ಒಂದು ಆದರ್ಶರಾಜ್ಯದ " ಚಿತ್ರವನ್ನು ಕೊಟ್ಟಿದ್ದಾನೆ. ಇಂಥ ಆದರ್ಶ ರಾಜ್ಯಗಳು ಇತಿಹಾಸದಲ್ಲಿ ಎಂದೂ ಇದ್ದಿರಲಿಲ್ಲ. ಮಾತ್ರವಲ್ಲ ಅವು ಮನುಷ್ಯ ಸ್ವಾಭಾವಕ್ಕೂ ವ್ಯತಿರಿಕ್ತವಾಗಿವೆ. ಇಂಥರಾಜಕೀಯ ತತ್ವಜ್ಞಾನಗಳು ಶುದ್ಧ ವೈಚಾರಿಕವಾದಗಳಾಗಿ ಕೆಲವೊಂದು ಸಲ ಅಹಿತಕಾರಿ ಪರಿಣಾಮಗಳನ್ನೂ ಬೀರುವ ಸಂಭವ ಇದೆ. ಒಂದು ಆದರ್ಶ ರಾಜ್ಯದ ನಿರ್ಮಾಣವು ನಮ್ಮೆಲ್ಲರ ಮುಖ್ಯಗುರಿ ಆಗಿರಬೇಕು, ಎಂಬುದೇನೋ ನಿಜವಾದರೂ ಆದರ್ಶ ರಾಜ್ಯದ ನಮ್ಮ ಕಲ್ಪನೆ ತೀರಾ ನಿರಾಧಾರವೂ ಆಗಿರ ಕೂಡದು.

ರಾಜಕೀಯ ತತ್ವಜ್ಞಾನಿಯು ತನ್ನ ಧ್ಯೇಯ ಯಾವದು ಎಂಬುದನ್ನು ಮೊದಲು ನಿಶ್ಚಿತ ಪಡಿಸಿಕೊಳ್ಳುತ್ತಾನೆ. ಆ ಧ್ಯೇಯವನ್ನು ತಲುಪಲು ಅವಶ್ಯವಾದ ಮಾರ್ಗಗಳನ್ನೂ, ಸಾಧನೆಗಳನ್ನೂ ಅಂದರೆ, ಸಂಘ-ಸಂಸ್ಥೆಗಳನ್ನು ರೂಪಿಸಿಲು ಅನಂತರ ಪ್ರಯತ್ನಿಸುತ್ತಾನೆ. ಅಂದರೆ ಅವನ ವಿಚಾರವು ನ್ಯಾಯದ ಆದರ್ಶ ಹಾಗೂ ಧ್ಯೇಯವನ್ನು ಪ್ಲೇಟೋ ಮೊದಲು ನಿಶ್ಚಿತ ಪಡಿಸಿಕೊಂಡನು.ಅದರ ಸಾಧನೆಗಾಗಿ ಸರಕಾರದಿಂದ ವ್ಯವಸ್ಥಿತವಾದ ಸಾಮಾಜಿಕ ಸಂಬಂಧ ಸೂತ್ರಗಳ ಒಂದು ಕ್ರಮಬದ್ಧ ತತ್ವಜ್ಞಾನವನ್ನು ಬೆಳೆಸಿದನು. ಥಾಮಸ್ ಹಾಬ್ಸನು ಕಲಹ-ಅಶಾಂತಿಗಳ ವಿರೋಧಕನು "ಯಾವ ಅರಸೊತ್ತಿಗೆಯಿಂದ ಕಾಯಿದೆ-ಸುವ್ಯವಸ್ಥೆಗಳು ರಕ್ಷಿತವಾಗುವವೋ ಅಂಥ ಅರಸೊತ್ತಿಗೆಯೇ ಯೋಗ್ಯವಾದುದು ಎಂದು ಅವನ ಅಭಿಪ್ರಾಯವಾಗಿತ್ತು.

ಅಂದರೆ "ನಿರಂಕುಶ ಅರಸೊತ್ತಿಗೆ" ಯೇ ಅವನ ಧ್ಯೇಯವಾಗಿತ್ತು. ಆದ್ದರಿಂದ ಅವನು "ಸಾಮಾಜಿಕ ಒಪ್ಪಂದ''ದ ಸಿದ್ಧಾಂತವನ್ನು ಈ ಧ್ಯೇಯದ ಸಮರ್ಥನೆಗಾಗಿಯೇ ಬಳಸಿಕೊಂಡನು. ಮತ್ತು ಸ್ಟೂವರ್ಟ್ ೯, ಅರಸರ ನಿರಂಕುಶತೆಯನ್ನು ಬೆಂಬಲಿಸಿದನು. "ನಂಬಿಕೆಗಳು ಮತ್ತು ವಿಚಾರ ಸ್ವಾತಂತ್ರ್ಯ ಅಂದರೆ ಸಹಿಷ್ಣುತೆ ಹಾಗೂ ಹಕ್ಕುಗಳ ಅನಿವಾರ್ಯತೆ ಈ ಧ್ಯೇಯಗಳನ್ನು ಹಿಡಿದುಕೊಂಡು ಹೊರಟ "ಜಾನ್ ಲಾಕ್" "ನಿಯಂತ್ರಿತ ಅರಸೊತ್ತಿಗೆ'' ಯನ್ನು ಬೆಂಬಲಿಸಿದನು.

ರಾಜಕೀಯ ಸಿದ್ಧಾಂತದ ಮೌಲ್ಯ, ಸೃಜನಾತ್ಮಕವು ಹಾಗೂ ನಿರೀಕ್ಷಣಾತ್ಮಕವೂ ಆಗಿದೆ. ಅಂದರೆ ರಾಜಕೀಯ ಸಿದ್ಧಾಂತವು ಕೆಲವೊಂದು ಸಾಮಾಜಿಕ, ರಾಜಕೀಯ, ಆರ್ಥಿಕ ಮೌಲ್ಯಗಳನ್ನು ಪ್ರಕಟಗೊಳಿಸುತ್ತದೆ. ವ್ಯಕ್ತಿವಾದ, ಸಮತಾವಾದ, ಉದಾರಮತವಾದ, ಇತ್ಯಾದಿಗಳು, ಮೌಲ್ಯ ಸೃಜನಾತ್ಮಕ ಸಿದ್ಧಾಂತಗಳು ಆಗಿವೆ. ಮತ್ತು ಈ ಸಿದ್ಧಾಂತಗಳ ಮಾರ್ಗದರ್ಶನದ ಎಷ್ಟೋ ಕ್ರಮಗಳು ವ್ಯವಹಾರದಲ್ಲಿಯೂ ಕಾರ್ಯಗತವಾಗುತ್ತವೆ.

ಅನೇಕ ರಾಜಕೀಯ ಪದ್ಧತಿಗಳ ಕಾರ್ಯಚರಣೆಯನ್ನು ನಿರೀಕ್ಷಿಸಿ, ಅಧ್ಯಯನ ಮಾಡುವದರಿಂದ ರಾಜಕೀಯ ಸಿದ್ಧಾಂತವು ನಿರೀಕ್ಷಣಾತ್ಮಕವೂ ಆಗಿದೆ. ಉದಾ: ಅಮೇರಿಕ, ಕೆನಡಾ, ಸ್ವಿಝರ್ಲೆಂಡ್, ಆಸ್ಟ್ರೇಲಿಯಾ ಮುಂತಾದ ದೇಶಗಳ ಸರಕಾರಗಳ ಪದ್ಧತಿಯ ಕಾರ್ಯಚರಣೆಯ ನಿರೀಕ್ಷಣೆಯಿಂದ ಸಂಯುಕ್ತ-ರಾಜ್ಯ ಸಿದ್ಧಾಂತವನ್ನು ರಾಜನೀತಿಜ್ಞರು ಬೆಳೆಸುತ್ತಾರೆ.

ಮಾನವ-ಸ್ವಭಾವವನ್ನು ಗಮನಿಸಿದ ಯಾವುದೇ ಅಧ್ಯಯನ ಪದ್ಧತಿಯು ನಿಜವಾದ ನಿಯಮಗಳನ್ನು ರಚಿಸಬಲ್ಲ ರಾಜಕೀಯ ಸಿದ್ಧಾಂತವನ್ನು ರೂಪಿಸುವದು ಸಾಧ್ಯವಿಲ್ಲ. ರಾಜ್ಯ ಇರುವದು ಮಾನವರಿಗಾಗಿ ಮತ್ತುಮಾನವರ ಬೇಕು, ಬೇಡಿಕೆಗಳನ್ನು ಪೂರೈಸುವದಕ್ಕಾಗಿ ಈ ಮಾನವನೇ ನಮ್ಮ ಅಧ್ಯಯನದ ಮಧ್ಯವರ್ತಿ ವಸ್ತು. ಅವನ ಸಮಸ್ಯೆಗಳನ್ನು ಅರಿತುಕೊಳ್ಳುವವರಿದ್ದರೆ, ಅವನ ಮನೋವಿಶ್ಲೇಷಣೆಯನ್ನೂ ಅರಿತು ಕೊಳ್ಳುವದು ಅವಶ್ಯ. ಮಾನವನು ವಿಚಾರವಾದಿಯಾದ ಜೀವಿ ಎಂದೂಹಾಗೂ ಅವನ ಈ ಸ್ವಾಭಾವವನು ವಿವಾದತೀತವೆಂದೂ ತಿಳಿದುಕೊಂಡ ರಾಜಕೀಯ ಸಿದ್ಧಾಂತಕಾರರು ಆ ಆಧಾರದಿಂದಲೇ ತಮ್ಮ ಸಂಶೋಧನೆಗಳನ್ನು ಮುಂದುವರಿಸಿದ್ದರು.

ಆದರ್ಶವಾದ ಹಾಗೂ ವಾಸ್ತವವಾದ ಇವೆರಡೂ ರಾಜಕೀಯ ಸಿದ್ಧಾಂತದ ಎರಡು ಬದಿಗಳಾಗಿದ್ದು, ಮಾನವನ ಜೀವನದ ನೈಜತೆಗೆ ಹೊಂದಿಕೊಳ್ಳುವಂತೆ ಅವೆರಡನ್ನು ಸಮನ್ವಯಗೊಳಿಸುವದು ಅವಶ್ಯ.ಈ ರಾಜಕೀಯ ಸಿದ್ಧಾಂತಗಳು, ಸಮಾಜದ ಎಲ್ಲ ವ್ಯಕ್ತಿಗಳಿಗೆ, ಎಲ್ಲ ಸಂಗತಿಗಳಿಗೆ ಅನ್ವಯಿಸಿ ರಚಿತವಾಗಿರುತ್ತವೆ. ರಾಜಕೀಯ ಸಂದೇಶ ಅನೇಕ ಬಾರಿ ಕಲ್ಪನೆಯೂ ಆಗಿರುತ್ತದೆ. ತನ್ನ, ತನ್ನಸಮಾಜಸ ಭವಿಷ್ಯ ನಿರ್ಧರಿಸುವ ಆಶಯ ಹೊಂದಿರುತ್ತದೆ. ಆದ್ದರಿಂದಲೇ ಪ್ಲೇಟೋ ತನ್ನ ರಿಪಬ್ಲಿಕ್ ಕೃತಿಯಲ್ಲಿ ಆದರ್ಶರಾಜ್ಯದ ಚಿತ್ರಣ ಕೊಡುತ್ತಾನೆ. ಹೀಗಾಗಿ ರಾಜಕೀಯ ಸಿದ್ಧಾಂತ ಎನ್ನುವುದು ಸಮಾಜದ ಬೆಳವಣಿಗೆಗಾಗಿ ರೂಪಿಸಿಕೊಂಡ ಮೂಲ ತತ್ವವಾಗಿದೆ.

## ೨.೩ "ಆಡಳಿತ ವ್ಯವಸ್ಥೆಗಳು ಅಳವಡಿಸಿಕೊಂಡ ಕೆಲವು ಪ್ರಮುಖ ರಾಜಕೀಯ ಸಿದ್ಧಾಂತಗಳ ಮಾದರಿಗಳು"

ಒಂದು ರಾಷ್ಟ್ರ ಮತ್ತು ಒಂದು ರಾಷ್ಟ್ರದ ಜನರ ಒಪ್ಪಿಗೆ ಪಡೆದ. ಆಯಾ ರಾಷ್ಟ್ರದ ಚಿಂತನಶೀಲರು ಅಳವಡಿಸಿಕೊಂಡ ರಾಜಕೀಯ ಸಿದ್ಧಾಂತಗಳು ಬಹಳ ಕಾಲದವರೆಗೆ ಬಾಳುತ್ತವೆ. ಬಲವಂತದಿಂದ ಜನರ ಮೇಲೆ ಆಡಳಿತ ನಡೆಸುವ ಸಿದ್ಧಾಂತಗಳು ಬಹಳ ಕಾಲದವರೆಗೆ ಬಾಳುವುದಿಲ್ಲ. ಅದಕ್ಕೆ ಒಂದು ಉತ್ತಮ ಉದಾಹರಣೆಯೆಂದರೆ, ಫ್ಯಾಸಿಸಂ ಮತ್ತು ನಾಝಿಝಮ್ ಗಳನ್ನು ನೋಡಬಹುದು. ಜೊತೆಗೆ ನಿರಂಕುಶ ಪ್ರಭುತ್ವದ ತತ್ವಕೆ ವಿರುದ್ಧವಾದ ಪ್ರಜಾಪ್ರಭುತ್ವ ಮತ್ತು ಸಮಾಜವಾದದಂತ ಸಿದ್ಧಾಂಗಳ ಜನಪ್ರಿಯತೆಯನ್ನು ಸಹ ಇಂದು ನೋಡಬೇಕಾಗುತ್ತದೆ. ಪ್ರತಿಯೊಂದು ಸಿದ್ಧಾಂಗಳ ಜನಪ್ರಿಯತೆಯನ್ನು ಸಹ ಇಂದು

ನೋಡಬೇಕಾಗುತ್ತದೆ. ಪ್ರತಿಯೊಂದು ಸಿದ್ಧಾಂತವು ತನ್ನದೇ ಆದ ಚಾರಿತ್ರಿಕ ಹಿನ್ನಲೆಯನ್ನು ಹೊಂದಿರುತ್ತವೆ. ಪ್ರಜಾಪ್ರಭುತ್ವ, ಉದಾರತಾವಾದ ಮತ್ತು ಸಮಾಜವಾದ ಇವು ಇಂದಿನ ಸಾಮಾಜಿಕ ಮೌಲ್ಯಗಳಾಗಿವೆ. ಈ ಮಾಲ್ಯಗಳನ್ನು ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಸುಭದ್ರವಾಗಿ ಒಪ್ಪಿಗೆಯಾಗುವಂತೆ ಆಡಳಿತ ನಡೆಸುವ ಸರಕಾರ ನೋಡಿಕೊಳ್ಳಬೇಕಾಗುತ್ತದೆ.

ಪ್ರಜಾಪ್ರಭುತ್ವದ ಹುಟ್ಟು ಗ್ರೀಸ್. ಪ್ರಜಾಪ್ರಭುತ್ವವು ಗ್ರೀಸ್ ನಿಂದಲೇ ಪ್ರಾರಂಭವಾಯಿತು ಎಂದು ಹೇಳಬಹುದು. ಗ್ರೀಸ್ ನ 'ಸಿಟಿಸ್ಟೇಟ್ 'ಗಳ ಪ್ರಜಾಪ್ರಭುತ್ವದ ಪರಂಪರೆಯನ್ನು ಇಂದಿನ ವಿಶ್ವದ ಪ್ರಜಾಪ್ರಭುತ್ವದ ರಾಷ್ಟ್ರಗಳೆಲ್ಲವೂ ಅನುಸರಿಸಿವೆ. ಗ್ರೀಸ್ ನಂತಹ ನಗರ-ರಾಜ್ಯಗಳಲ್ಲಿ 'ಸಿಟಿ ಸ್ಟೇಟ್ ' ಆಡಳಿತ ಸಾಧ್ಯವಾಗಿತ್ತು. ಆದರೆ ಅಲ್ಲಿಯೂ ಸಹ ಗುಲಾಮರು, ವಿದೇಶಿಯರು ಹಾಗೂ ಹೆಂಗಸರು ಭಾಗವಹಿಸಲು ಸಾಧ್ಯವಿರಲಿಲ್ಲ ಎಂಬ ಅಂಶವನ್ನು ಗಮನಿಸಬೇಕಾಗುತ್ತದೆ. ಜಗತ್ತಿನಲ್ಲಿ ಇಂದು ಪ್ರಜಾಪ್ರಭುತ್ವವು ಒಂದು ಸ್ವೀಕಾರ ಯೋಗ್ಯ ಆಳ್ವಿಕೆಯಾಗಿದೆ. ಈಚಿನ ವರ್ಷಗಳಲ್ಲಿ ರಾಜ ಆಳ್ವಿಕೆ ಮತ್ತು ಸರ್ವಾಧಿಕಾರಿಯ ಆಳ್ವಿಕೆಗಳಲ್ಲಿದ್ದ ಎಷ್ಟೋ ಸರಕಾರಗಳು ಪ್ರಜಾಪ್ರಭುತ್ವ ಮಾದರಿಯ ಸರಕಾರವನ್ನು ಆಯ್ಕೆ ಮಾಡಿಕೊಂಡಿವೆ. ಜನರ ಧೋರಣೆ ಮತ್ತು ಮನೋಧರ್ಮಗಳು ಪ್ರಜಾಪ್ರಭುತ್ವವನ್ನು ಬಯಸುವಂತೆ ರೂಪುಗೊಂಡಿವೆ. ಮೊದಮೊದಲ ಪ್ರಜಾಪ್ರಭುತ್ವವನ್ನು ಕೇವಲ ರಾಜಕೀಯ ಸಿದ್ಧಾಂತವೆಂದು ಪರಿಗಣಿಸಲಾಗಿದ್ದಿತು. ನಂತರದಲ್ಲಿ ಈ ಸಿದ್ಧಾಂತವು ಪ್ರಜಾಪ್ರಭುತ್ವವೇ ಒಂದು ಜೀವನ ವಿಧಾನ ಎನ್ನುವಂತಾಯ್ತು.

ಸಮಾಜವಾದವೆಂಬುವುದು ಆಧುನಿಕ ರಾಜಕೀಯ ಸಿದ್ಧಾಂತ. ಸಮಾಜವಾದ ಪದದ ಅರ್ಥದ ಬಗ್ಗೆ ಗೊಂದಲವಿದ್ದು, ಇದು ಯಾವುದೇ ನಿರ್ದಿಷ್ಟ ವರ್ತಮಾನ ಅಥವಾ ಭೂತಕಾಲದ ಸಮಾಜಿಕ ಪರಿಸರದ ವಿವರಣೆ ನೀಡುವುದಿಲ್ಲ. ರಾಜಶಾಸ್ತ್ರದ ಪ್ರಖಾಂಡ ಪಂಡಿತನಾದ ಸಿ.ಎಂ. ಜೋಡ್ ರವರ ಅಭಿಪ್ರಾಯದಲ್ಲಿ ಸಮಾಜವಾದ ಒಂದು ವಿಶಿಷ್ಟ ಸಿದ್ಧಾಂತವಷ್ಟೇ ಅಲ್ಲ, ಅದು ಒಂದು ಚಳುವಳಿ. ಅದು ರಾಜಕೀಯ ಸಿದ್ಧಾಂತವಷ್ಟೇ ಅಲ್ಲ ಆರ್ಥಿಕ ಹಾಗೂ ಸಾಮಾಜಿಕ ಸೂತ್ರಗಳನ್ನು ಒಳಗೊಂಡ ಒಂದು ಮಹೋನ್ನಾತ ಜೀವನ ಧರ್ಮಕೋಶ ಎಂದು ಹೇಳಿದ್ದಾರೆ. ಸಮಾಜವಾದ ಹಾಗೂ ಸಮಾಜವಾದಿ ಎಂಬ ಶಬ್ದಗಳನ್ನು ಮೊಟ್ಟಮೊದಲಿಗೆ ಯಾರು ಬಳಸಿದರು ಎನ್ನುವುದು ಸ್ಪಷ್ಟವಾಗಿಲ್ಲ. ಹೀಗೆ ಗೊತ್ತಿರುವ ಮಟ್ಟಿಗೆ ಇಟಲಿಯನ್ ಭಾಷೆಯಲ್ಲಿ ಈ ಪದವನ್ನು ಮೊದಲ ಬಾರಿಗೆ ಬಳಸಲಾಗಿದೆ. ಸಮಾಜವಾದಿ ಆಂದೋಲನ ಔದ್ಯೋಗಿಕ ಕ್ರಾಂತಿಯ ನಂತರ ಪ್ರಾರಂಭವಾಯಿತು ಎಂದು ಹೇಳಬಹುದುದಾದರು. ಅದಕ್ಕಿಂತಲೂ ಮೊದಲು ಸಮಾಜವಾದಿ ವಿಚಾರಗಳಿಗೆ

ಕೊರತೆಯಿರಲಿಲ್ಲ. 'ಸಮಾನತೆ' ಸಮಾಜವಾದದ ಅತ್ಯುಚ್ಛ ಆದರ್ಶ ಎನ್ನುವುದಾದರೆ ಅದನ್ನು ಬಯಸಿ ಸಮಾಜದಲ್ಲಿನ ಅಸಮಾನತೆಯನ್ನು ಖಂಡಿಸಿದ ಹಲವಾರು ಉದಾಹರಣೆಗಳು ಚರಿತ್ರೆಯಲ್ಲಿ ಸಿಗುತ್ತವೆ. ಸಮಾಜವಾದ ಎಂಬ ಪದವನ್ನು ಹಲವಾರು ವಿದ್ವಾಂಸರು ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಬದಲಾಗುತ್ತಿರುವ ಪರಿಸ್ಥಿತಿಗನುಗುಣವಾಗಿ ಸಮಾಜವಾದ ಹೊಸ ಹೊಸ ಅರ್ಥಪಡೆಯುತ್ತಿದೆ. ಯಾವುದೇ ಸಿದ್ಧಾಂತವಾಗಲಿ ನಿರ್ದೋಷವಾದುದಾಗಿರಲೂ ಸಾಧ್ಯವಿಲ್ಲ.

ಉದಾರತವಾದವು ಆಧುನಿಕ ಸಿದ್ಧಾಂತವಾಗಿದೆ. ಉದಾರತವಾದಕ್ಕೆ ಸ್ವಾತಂತ್ರ್ಯವೇ ಮುಖ್ಯ. ಈ ವಾದಕ್ಕೆ ಹುಟ್ಟುವುದಕ್ಕೆ ಪುರೋಗಾಮಿ ಮಧ್ಯಮವರ್ಗದ ಬೆಂಬಲ ಮುಖ್ಯವಾಗಿದೆ. ೧೯ನೇ ಶತಮಾನದಲ್ಲಿ ಈ ಸಿದ್ಧಾಂತ ಯೊರೋಪ್ ಹಾಗೂ ಅಮೇರಿಕಾದಲ್ಲಿ ಅಸ್ಥಿತ್ವಕ್ಕೆ ಬಂದಿತ್ತು. ಇದನ್ನು ಮೊಟ್ಟಮೊದಲು ಜಾರಿಗೆ ತಂದವರು ಸ್ಪ್ಯಾನಿಷ್ ಉದಾರತಾವಾದಿಗಳು. ಎಲ್ಲ ಸಿದ್ಧಾಂತಗಳ ಮುಖ್ಯಗುರಿ ಜನಕಲ್ಯಾಣವೇ ಆಗಬೇಕು. ಜನಕಲ್ಯಾಣವನ್ನು ಕಡೆಗಣಿಸಿದ ಸಿದ್ಧಾಂತ ಉಳಿಯಲಾರದು. ಪ್ರತಿಯೊಂದು ಸಿದ್ಧಾಂತವು ತಮ್ಮದೇ ಆದ ಆಡಳಿತ ವ್ಯವಸ್ಥೆಯನ್ನು ಹೊಂದಿವೆ.

**ಸಮಾಜವಾದ ಸಿದ್ಧಾಂತ**

೧೮ಮತ್ತು ೧೯ನೇ ಶತಮಾನದಲ್ಲಿ ಕೈಗಾರಿಕಾ ಕ್ರಾಂತಿಯ ಫಲವಾಗಿ ಹುಟ್ಟಿಕೊಂಡ ಸಮಾಜವಾದವು ವೈಚಾರಿಕ ಧಾರೆಯಾಗಿದೆ. ಬಂಡವಾಳಶಾಹಿ ವ್ಯವಸ್ಥೆಯ ನೀತಿಯನ್ನು ವಿರೋಧಿಸಿದ ಸಮಾಜವಾದ ಸಿದ್ಧಾಂತವು "ಆಡಳಿತ"ವು ದುಡಿಯುವ ಜನರ ಕೈಸೇರಬೇಕೆಂಬುದು ಇದರ ಮುಖ್ಯ ನಿಲುವಾಗಿದೆ. ಉತ್ಪಾದನಾ ಸಾಮಗ್ರಿ, ಸಾಧನಗಳನ್ನು ಎಲ್ಲ ಜನರಿಗೆ, ಅಂದರೆ ದುಡಿಯುವ ವರ್ಗಕ್ಕೆ ಸಮಾನ ಹಂಚಿಕೆಯಾಗಬೇಕೆಂದು ಈವಾದ ಪ್ರತಿಪಾದಿಸಿತು. ಹೀಗಾಗಿ ಸಮಾಜವಾದವು ದುಡಿಯುವ ಜನರ, ಶ್ರಮಜೀವಿಗಳ ಬೆಳವಣಿಗೆಗೆ ಪೂರಕವಾದ ಅತ್ಯಂತ ಮುಖ್ಯವಾದ ರಾಜಕೀಯ ಸಿದ್ಧಾಂತವಾಗಿದೆ.

ಬಾಬ್ಯೂಫ್, ಸ್ಟೆಂಟ್ ಸೈಮನ್, ಚಾರ್ಲ್ಸ್ ಫೌರಿಯರ್ ಈ ಫ್ರೌಧಾನ್, ಲೂಯಿಬ್ಲಾಂಕ್, ರಾಬರ್ಟ್ ಓವನ್, ಗಾಡ್ವಿನ್, ಜಾನ್ ಗ್ರೇ, ಸರ್ ಥಾಮಸ್ ಮೋರ್ ಮೊದಲಾದವರು ಸಮಾಜವಾದದ ತತ್ತ್ವಗಳನ್ನು ಪ್ರತಿಪಾದಿಸಿದ್ದಾರೆ. ನಂತರ ಬಂದ ಕಾರ್ಲ್ ಮಾರ್ಕ್ಸ್ ಸಮಾಜವಾದ ಸಿದ್ಧಾಂತಕ್ಕೆ ಚಾರಿತ್ರಿಕವಾದ

ಮತ್ತು ಅತ್ಯಂತ ವೈಜ್ಞಾನಿಕವಾದ ತಾತ್ವಿಕ ಚೌಕಟ್ಟನ್ನು ರೂಪಿಸಿದನು.

"ಪ್ರೊ॥. ಸಿ.ಇ.ಎಂ. ಜೋಡ್ " ಹೇಳಿರುವಂತೆ, ಸಮಾಜವಾದವನ್ನು ಬಹಳ ಮಂದಿ ಉಪಯೋಗಿಸಿ, ತನ್ಮೂಲಕ ತನ್ನ ಸ್ವರೂಪವನ್ನೇ ಕಳೆದು ಕೊಂಡಿರುವ ಟೋಪಿಗೆ (hat) ಹೋಲಿಸಬಹುದು, ಎನ್ನುತ್ತಾರೆ.

"ಪ್ರೋ ॥. ಪಿಗೋ" ಉತ್ಪಾದನೆಯಸಾಧನೆಗಳ ಮೇಲೆ ಹಕ್ಕೋಟಿ ಇದ್ದಲ್ಲಿ ಅದು ಬಂಡವಾಳಶಾಹಿ ಪದ್ಧತಿ. ಸಮಾಜದ ಹಕ್ಕೋಟಿ ಇದ್ದರೆ ಅದು ಸಮಾಜವಾದ ಎಂದು ಹೇಳುತ್ತಾರೆ.

"ಜೆ.ಡಿ.ಎಚ್. ಕೋಲ್ ಪ್ರಕಾರ'' ಸಮಾಜವಾದವೆಂದರೆ, ಈ ನಾಲ್ಕು ಅಂಶಗಳು ಸಂಯೋಗವಾಗಿರುತ್ತವೆ.- ವರ್ಗಭೇದಕ್ಕೆ ಎಡೆಕೊಡದ ಮಾನವ ಸಹಭಾಗಿತ್ವ, ಸಮಾನತ್ವ ತತ್ವದ ಮೇಲೆ ರೂಪಿತವಾದ ಸಮಾಜ ವ್ಯವಸ್ಥೆಯ, ಉತ್ಪಾದನೆಯ ಸಾಧನಗಳ ಮೇಲೆ ಸಾಮೂಹಿಕ ಹಕ್ಕೋಟಿ ಮತ್ತು ನಾಗರಿಕರಲ್ಲಿ ಪರಸ್ಪರ ಸಹಕಾರ ಮನೋಭಾವ".

ಸಮಾಜವಾದದಲ್ಲಿ ವ್ಯಕ್ತಿಗಿಂತ ಸಮಾಜ ಮುಖ್ಯವಾಗಿರುತ್ತದೆ. ಸಾಮಾಜಿಕ, ರಾಜಕೀಯ, ಆರ್ಥಿಕ ಸಮಾನತೆ ಸಾಧಿಸುವುದು ಇದರ ಮುಖ್ಯ ಗುರಿಯಾಗಿರುತ್ತದೆ. ಹೀಗಾಗಿ ಸಮಾಜವಾದವು ವ್ಯಕ್ತಿವಾದಕ್ಕೆ ವಿರುದ್ಧವಾಗಿ ಸಮಾಜದ ಹಿತವನ್ನು ಬಯಸುವುದರಿಂದ ಇದು ವ್ಯಕ್ತಿಗೆ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಡುವುದನ್ನು ವಿರೋಧಿಸುತ್ತದೆ.

ಇದು ಬಂಡವಾಳಶಾಹಿ ಪದ್ಧತಿಗೆ ವಿರುದ್ಧವಾದುದು. ದುಡಿಯುವ ಜನರ ಶತ್ರುವಾದ ಬಂಡವಾಳಶಾಹಿ ಪದ್ಧತಿಯನ್ನು ನಾಶಮಾಡುವುದು. ಇದರಿಂದ ಆರ್ಥಿಕ ಅಸಮಾನತೆ ಹೋಗಲಾಡಿಸುವುದು ಇದರ ಮುಖ್ಯ ಉದ್ದೇಶವಾಗಿದೆ. ಪೈಪೋಟಿಗಿಂತ ಹೆಚ್ಚಾಗಿ ಸಹಕಾರ ಮನೋಭಾವನ್ನು ಜನರಲ್ಲಿ ಬೆಳೆಸುವುದನ್ನು ಸಮಾಜವಾದ ಬಯಸುತ್ತದೆ. ಯಾಕೆಂದರೆ ದುಡಿಯುವ ವರ್ಗ ಶ್ರೀಮಂತ ವರ್ಗದವರೊಂದಿಗೆ, ಪೈಪೋಟಿ ನಡೆಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಈ ಪೈಪೋಟಿಗೆ ಬದಲಾಗಿ ಸಹಕಾರ ಮನೋಭಾವ ಬೆಳೆಸುವುದರಿಂದ ಸಹಯೋಗ ಸಂಬಂಧ ಬೆಳೆಸಲು ಪ್ರಯತ್ನಿಸುತ್ತದೆ. ಕಾನೂನು ಮತ್ತು ಸುಧಾರಣೆಗಳ ಮೂಲಕ ಅಸಮಾನತೆ ಹೋಗಲಾಡಿಸಲು ಬಂಡವಾಳಶಾಹಿಯಂತೆ ಇರದೆ ಇದು ಶ್ರಮಜೀವಿಗಳಿಗೆ ಆಡಳಿತ ಅಥವಾ ಅಧಿಕಾರ ಹಸ್ತಾಂತರಗೊಳಿಸಲು ಪ್ರಯತ್ನಿಸುತ್ತದೆ. ಭೂಮಿ, ಕಾರ್ಖಾನೆ, ಮತ್ತು ಇತರ ಉತ್ಪಾದನಾ ಸಾಧಾನೆಗಳನ್ನು ಖಾಸಗಿಯಾಗಿ ಒಡೆತನಕ್ಕೆ ಅವಕಾಶ ಕೊಡದೆ ಸಾಮೂಹಿಕ ಒಡೆತನಕ್ಕೆ ಒಳಪಡಿಸುವುದು ಈ ವಾದದ ಮುಖ್ಯ ಸೈದ್ಧಾಂತಿಕ ನೆಲೆಯಾಗಿದೆ.

ಸಮಾಜವಾದದಲ್ಲಿ ಮುಖ್ಯವಾಗಿ ಎರಡು ಪಂಥಗಳಿವೆ.

೧. ವಿಕಸನಶೀಲ ಪಂಥ

ಫೇಬಿಯನಿಝಮ್ ಮತ್ತು ಶ್ರೇಣಿ ಸಮಾಜವಾದ ಈ ಎರಡೂ ಪಂಗಡಗಳು ವಿಕಸನಶೀಲ ಸಮಾಜವಾದಿ ಪಂಥದಲ್ಲಿ ಸೇರ್ಪಡೆಯಾಗುತ್ತವೆ. ಸಮಾಜವಾದಿ ಸಮಾಜವನ್ನು ಸ್ಥಾಪಿಸುವ ದೃಷ್ಟಿಯಿಂದ ಸದ್ಯದ ಸಮಾಜದಲ್ಲಿ ಬದಲಾವಣೆಗಳನ್ನು ಮಾಡಲು ವಿಕಸನಶೀಲವಾದ ಮತ್ತು ಸಂವಿಧಾನಾತ್ಮಕವಾದ ಮಾರ್ಗಗಳನ್ನು ಅವಲಂಬಿಸಿರಬೇಕು, ಎಂದು ಈ ಪಂಥದವರು ಹೇಳುತ್ತಾರೆ.

೨. ಕ್ರಾಂತಿಕಾರಿ ಪಂಥ

ಕಮ್ಯುನಿಸ್ಟರು ಮತ್ತು ಸಿಂಡಿಕ್ಯಾಲಿಸ್ಟರು ಕ್ರಾಂತಿಕಾರಿ ಸಮಾಜ ವಾದಿಗಳಾಗಿದ್ದಾರೆ. ಸದ್ಯದ ದೋಷಪೂರಿತ ಸಮಾಜವನ್ನು ಬದಲಿಸಲು ಕ್ರಾಂತಿಕಾರಿಯಾದ ನೇರವಾದ ಕ್ರಿಯೆಯ ಏಕಮೇವ ಮಾರ್ಗ ಎಂದು ಇವರು ಹೇಳುತ್ತಾರೆ. ಉತ್ಪಾದನಾ-ಸಾಧನೆಗಳ ಮೇಲಿನ ಬಂಡವಳಿಗರ ಸ್ವಾಮಿತ್ವವನ್ನು ತಪ್ಪಿಸುವುದು ಬಲಪ್ರಯೋಗದಿಂದ ಮಾತ್ರ ಸಾಧ್ಯ ಎಂದು ಈ ಕ್ರಾಂತಿಕಾರಿಗಳ ಮತವಾಗಿದೆ.

ಉದಾರತಾವಾದ ಸಿದ್ಧಾಂತ

ಸ್ವಾತಂತ್ರ್ಯವನ್ನು ಗುರಿಯಾಗಿಸಿಕೊಂಡು "ಸಮಾಜ ಮತ್ತು ಸರಕಾರವನ್ನು" ರಚಿಸುವ ವಿಧಾನದ ಸಿದ್ಧಾಂತವನ್ನು ಉದಾರತಾವಾದ ಎಂದು ಕರೆಯ ಬಹುದು. ೧೯ನೇಯ ಶತಮಾನದ ಪೂರ್ವಾರ್ಧದಲ್ಲಿ ಸಮಾಜದ ಪ್ರಮುಖರೆಂದು ಪರಿಗಣಿತರಾಗಿದ್ದ ಶ್ರೀಮಂತ ಭೂಮಾಲೀಕರ ಪ್ರಭುತ್ವಕ್ಕೆ ಸವಾಲೆಸಗಬಲ್ಲ ಪುರೋಗಾಮಿ ಮಧ್ಯಮವರ್ಗಕ್ಕೆ ಸೇರಿದ ವರ್ತಕರು, ಕಾರ್ಖಾನೆ ಮಾಲೀಕರು ಮತ್ತು ವೃತ್ತಿ ನಿರತರಲ್ಲಿ ಈ ವಾದ ಜನಪ್ರಿಯತೆ ಪಡೆಯಿತು. ಉದಾರತಾವಾದ ಒಂದು ದಿನದಲ್ಲಾಗಲಿ, ಅಥವಾ ಒಬ್ಬ ವ್ಯಕ್ತಿಯಿಂದಾಗಲಿ ಪ್ರತಿಪಾದಿತವಾಗಿಲ್ಲ.

ಮುಕ್ತ ವ್ಯಾಪಾರ, ಊಳಿಗಮಾನ್ಯ ಸವಲತ್ತುಗಳ ರದ್ಧತಿ ಸ್ವಯಮಾಡಳಿತ ರಾಷ್ಟ್ರಗಳ ಸ್ಥಾಪನೆ, ಮೊದಲಾದ ಬೇಡಿಕೆಗಳನ್ನು ಉದಾರತಾವಾದ ಒಳಗೊಂಡಿದೆ. ಆಧುನಿಕ ಸಂಸದೀಯ ಪ್ರಜಾಪ್ರಭುತ್ವ ಕಲ್ಪನೆ, ರಾಷ್ಟ್ರೀಯ ಸಭೆಗಳಿಗೆ ಸ್ಪರ್ಧಿಸುವ ವಿವಿಧ ರಾಜಕೀಯ ಪಕ್ಷಗಳ ಅಸ್ತಿತ್ವ- ಮೊದಲಾದ ಚಳವಳಿ- ಇವುಗಳು ಉದಾರತಾವಾದಕ್ಕೆ ಋಣಿಯಾಗಿವೆ ಎಂದು ಹೇಳಬಹುದು. ರಾಜಕೀಯ ಉದಾರತಾವಾದ ೧೯ನೇಯ ಶತಮಾನದಲ್ಲಿ ಪಾಶ್ಚಾತ್ಯ ಯುರೋಪ್ ಮತ್ತು ಅಮೆರಿಕಾದಲ್ಲಿ ಏಳಿಗೆಗೆ ಬಂದಿತು. ಆದರೆ ಅದು ಗಮನಾರ್ಹ ಪ್ರಗತಿ ಕಂಡದ್ದು ಇಂಗ್ಲೇಂಡ್, ಸ್ಪೇನ್, ಮತ್ತು ಹಾಲೆಂಡ್ ಗಳಲ್ಲಿ ಮಾತ್ರ "ಉದಾರತಾವಾದ" ಎಂಬ ಪದವನ್ನು ಪ್ರಥಮ ಬಾರಿಗೆ ಬಳಸಿ ಅದರ, ತತ್ವಗಳನ್ನು ಅನುಷ್ಠಾನದಲ್ಲಿ ತಂದವರು ಸ್ಪ್ಯಾನಿಷ್ ಉದಾರತಾವಾದಿಗಳು.

ಇಂಗ್ಲೆಂಡಿನ ಮಿಲ್ಟನ್, ಲಾಕ್, ಹ್ಯೂಮ್, ಜೇಮ್ಸ್‌ಮಿಲ್, ಜೆರಮಿಬೆಂಥಾಮ್, ಜಾನ್ ಸ್ಟುಯರ್ಟ್‌ಮಿಲ್, ಟಿ.ಹೆಚ್.ಗ್ರೀನ್, ಎಲ್.ಟಿ.ಹಾಬ್ ಹೌಸ್, ಮತ್ತು ಹೆಚ್.ಜೆ.ಲಾಸ್ಕಿ, ಆಡಮ್ ಸ್ಮಿತ್, ಫ್ರಾನ್ಸಿನ ವಾಲ್ಟೇರ್, ರುಸೋ, ಡೈಡೊರೆಟ್, ಮಾಂಟೆಸ್ಕ್ಯೂ ಮತ್ತು ಬೆಂಜಮಿನ್ ಕಾನ್ ಸ್ಟೆಂಟ್, ಜರ್ಮನಿಯ ಕ್ಯಾಂಟ್, ಮತ್ತು ಗಯಟೆ, ಅಮೆರಿಕದ ಥಾಮಸ್ ಜಫರ್ ಸನ್ ಮತ್ತು ಬೆಂಜಮಿನ್ ಫ್ರಾಂಕ್ ಲಿನ್, ಮೊದಲಾದವರು ಉದಾರತಾವಾದ ತತ್ವಗಳನ್ನು ಪ್ರತಿಪಾದಿಸಿದ್ದಾರೆ.

ಅಮೆರಿಕಾದಲ್ಲಿ ಉದಾರತಾವಾದ ತತ್ವದ ನೀತಿ ಮತ್ತು ಕಾರ್ಯಕ್ರಮಗಳನ್ನು ಜನಪ್ರಿಯ ಗೊಳಿಸಿದವರೆಂದರೆ, ವುಡ್ರೋವಿಲ್ಸನ್, ಎಫ್.ಡಿ.ರೂಸ್ ವೆಲ್ಟ್ , ಹ್ಯಾರಿಟ್ರೂಮನ್ ಮತ್ತು ಜಾನ್.ಎಫ್.ಕೆನಡಿ. ಉದಾರತಾವಾದವು ಸಮಕಾಲೀನ ಚಳವಳಿಗಳಾದ ವ್ಯಕ್ತಿವಾದ ಸಿದ್ಧಾಂತ ಮತ್ತು ಪ್ರಯೋಜಕತಾವಾದ ಸಿದ್ಧಾಂತಗಳೊಡನೆ ಮಿಳಿತ ಕೊಂಡಂತಿದೆ. ಆದುದರಿಂದ ಈ ಸಿದ್ಧಾಂತದಲ್ಲಿನ ಕೆಲವು ಅಂಶಗಳು ಉಳಿದ ಸಿದ್ಧಾಂತಗಳಿಂದ ಬಂದಿರುವುದಾಗಿ ತೋರುವುದು ಸ್ವಾಭಾವಿಕ.

**ಉದಾರತಾವಾದ ಮೂಲತತ್ವಗಳು**

೧). ನಾಗರಿಕ ಸ್ವಾತಂತ್ರ್ಯ, ನಾಗರಿಕ ಸ್ವಾತಂತ್ರ್ಯವು ವ್ಯಕ್ತಿಗಳಿಗೆ ಪ್ರಾಮುಖ್ಯ ಕೊಡದೆ ಕಾನೂನುಗಳಿಗೆ ಪ್ರಾಮುಖ್ಯ ಕೊಡುತ್ತದೆ. ೨). ಹಣಕಾಸು ಸ್ವಾತಂತ್ರ್ಯ, ತೆರಿಗೆ ಕೊಡುವಾತನ ಒಪ್ಪಿಗೆ ಇಲ್ಲದೆ ಸರಕಾರವು ಯಾವುದೇ ತೆರಿಗೆ ವಿಧಿಸುವಂತಿಲ್ಲ. ೩). ವೈಯಕ್ತಿಕ ಸ್ವಾತಂತ್ರ್ಯ ವ್ಯಕ್ತಿಗೆ ಸಂಪೂರ್ಣ ಆಲೋಚನಾ ಸ್ವಾತಂತ್ರ್ಯವಿದೆ

ಇದಕ್ಕೆ ಸಂಬಂಧಿಸಿದಂತೆ, ಸರಕಾರವಾಗಲಿ, ಧಾರ್ಮಿಕ ಗುರುಗಳಾಗಲಿ ಹಸ್ತಕ್ಷೇಪ ಮಾಡಬಾರದು. ಈ ಸ್ವಾತಂತ್ರ್ಯದಲ್ಲಿ ಧಾರ್ಮಿಕ ನಂಬಿಕೆ ಮತ್ತು ಪೂಜೆಯ ಸ್ವಾತಂತ್ರ್ಯವೂ ಸೇರಿ ಕೊಂಡಿದೆ. ೪). ಸಾಮಾಜಿಕ ಸ್ವಾತಂತ್ರ್ಯ, ಜಾತಿ, ಅಂತಸ್ತು, ಇತ್ಯಾದಿ ಪರಿಗಣನೆಗೆ ತೆಗೆದು ಕೊಳ್ಳದೆ ಎಲ್ಲರಿಗೂ ಸಮಾಜದಲ್ಲಿ ಸಾಮಾಜಿಕ ಹಕ್ಕುಗಳು ಮತ್ತು ಸವಲತ್ತುಗಳನ್ನು ಅನುಭವಿಸಲು ಅವಕಾಶವಿರಬೇಕು. ೫). ಆರ್ಥಿಕ ಸ್ವಾತಂತ್ರ್ಯ, ಖಾಸಗಿ ಆಸ್ತಿಯ ಹಕ್ಕು. ಪ್ರತಿಯೊಬ್ಬ ವ್ಯಕ್ತಿಗೂ ಆಸ್ತಿ ಹೊಂದುವ, ಅನುಭವಿಸುವ ಹಕ್ಕು ಇರಬೇಕು. ೬). ಕೌಟುಂಬಿಕ ಸ್ವಾತಂತ್ರ್ಯ, ಪುರುಷರಿಗೂ , ಮಹಿಳೆಯರಿಗೂ ವಿಶೇಷವಾಗಿ ಆಸ್ತಿ ಮತ್ತು ವಿವಾಹಕ್ಕೆ ಸಮಾನಹಕ್ಕುಗಳಿರಬೇಕು.೭). ಆಡಳಿತಾತ್ಮಕ ಭೌಗೋಳಿಕ ಮತ್ತು ಬುಡಕಟ್ಟು ಸ್ವಾತಂತ್ರ್ಯ, ಉದಾರತಾವಾದಿಗಳು ಸ್ಥಳೀಯ ಮತ್ತು ಆಡಳಿತಾತ್ಮಕ ಸ್ವಾಯತ್ತತೆಯನ್ನು ಪ್ರತಿಪಾದಿಸಿದ್ದಾರೆ. ತಾನು ಇಚ್ಛಿಸಿದ ಪ್ರದೇಶಕ್ಕೆ ಸೇರಿಕೊಳ್ಳುವ ಹಾಗೂ ಬಯಸಿದ ಸರಕಾರವನ್ನು ಹೊಂದುವ ಸ್ವಾತಂತ್ರ್ಯ ಜನತೆಗೆ ಇರಬೇಕು. ೮). ಅಂತರರಾಷ್ಟ್ರೀಯ ಸ್ವಾತಂತ್ರ್ಯ, ಇದು ಬಲಪ್ರಯೋಗವನ್ನು ವಿರೋಧಿಸುತ್ತದೆ. ಅಂತರರಾಷ್ಟ್ರೀಯ ಶಾಂತಿ ಮತ್ತು ಭದ್ರತೆ ಇದ್ದು ವಿಶ್ವದ ವಿವಿಧ ರಾಷ್ಟ್ರಗಳ ನಡುವೆ ಪರಸ್ಪರ ಸಹಾಯ ಮತ್ತು ಸಹಕಾರ ಇರಬೇಕು ಎಂಬುದನ್ನು ಈ ಸ್ವಾತಂತ್ರ್ಯ ಎತ್ತಿ ಹಿಡಿಯುತ್ತದೆ. ೯). ರಾಜಕೀಯ ಸ್ವಾತಂತ್ರ್ಯ ಮತ್ತು ಜನತಾ ಪರಮಾಧಿಕಾರ, ಇವೆರಡನ್ನು ಹಾಬ್ ಹೌಸ್ ಉದಾರತಾವಾದ ಸಿದ್ಧಾಂತದ ಮಕುಟ ಮತ್ತು ದಿವ್ಯತೆ ಎಂದು ವರ್ಣಿಸಿದ್ದಾನೆ.

೨೦ನೇ ಶತಮಾನದಲ್ಲಿ ಈ ಸಿದ್ಧಾಂತದಲ್ಲಿ ಕ್ರಾಂತಿಕಾರಿ ಬದಲಾವಣೆಯಾಗಿದೆ. ಇಲ್ಲಿನವರೆಗೂ ಮಧ್ಯಮ ವರ್ಗದವರ ಏಳಿಗೆಯನ್ನು ಗುರಿಯಾಗಿಟ್ಟುಕೊಂಡ ಇದು, ಇಂದು ಇಡೀ ಮನುಕುಲದ ಏಳಿಗೆಯನ್ನು ಗುರಿಯಾಗಿಟ್ಟು ಕೊಂಡಿರುವ ಒಂದು ಚಳುವಳಿಯಾಗಿದೆ. ಆದ್ದರಿಂದ ಇದನ್ನು ಆಧುನಿಕ ಉದಾರತಾವಾದ ಎಂದು ಕರೆಯಲಾಗಿದೆ.

## ಪ್ರಜಾಪ್ರಭುತ್ವ ಸಿದ್ಧಾಂತ

ಪ್ರಜಾಪ್ರಭುತ್ವದ ತತ್ವಗಳನ್ನು ರೂಪಿಸಿ, ಅದನ್ನು ಮೊದಲು ಕಾರ್ಯಾಚರಣೆಗೆ ತಂದ ಕೀರ್ತಿ ಪ್ರಾಚೀನ ಗ್ರೀಕರಿಗೆ ಸೇರುತ್ತದೆ. ಪ್ರಾಚೀನ ಗ್ರೀಕ್ ನಗರ ರಾಜ್ಯಗಳಾದ ಅಥೆನ್ಸ್ , ಸ್ಪಾರ್ಟಾ ಇವುಗಳಲ್ಲಿ ಪ್ರತ್ಯಕ್ಷ ಪ್ರಜಾಪ್ರಭುತ್ವ ರೂಢಿಯಲ್ಲಿತ್ತು. ಪ್ರಾಚೀನ ಭಾರತದ ವೈಶಾಲಿ, ಲಿಚ್ಛವಿ, ಕುಶಾನ-ಮುಂತಾದ ಸಣ್ಣ ರಾಜ್ಯಗಳಲ್ಲಿ ಅಪ್ರತ್ಯಕ್ಷ ಪ್ರಜಾಪ್ರಭುತ್ವ ರೂಢಿಯಲ್ಲಿತ್ತು. ಪ್ರಜಾಪ್ರಭುತ್ವವೆಂದರೆ, ಜನತೆಯ ಆಳಿಕೆ. ಜನರು ಪ್ರತ್ಯಕ್ಷವಾಗಿ

ಇಲ್ಲವೆ ತಮ್ಮ ಪ್ರತಿನಿಧಿಗಳ ಮೂಲಕ, ಪ್ರತ್ಯಕ್ಷವಾಗಿ ತಮ್ಮನ್ನು ತಾವೇ ಯಾವ ಸರಕಾರದಲ್ಲಿ ಆಳಿಕೊಳ್ಳುತ್ತಾರೆಯೋ ಅಂಥ ಪದ್ಧತಿಯ ಸರಕಾರಕ್ಕೆ ಪ್ರಜಾಪ್ರಭುತ್ವ ಎಂದೆನ್ನುತ್ತಾರೆ.

**ಪ್ರಜಾಪ್ರಭುತ್ವದ ಅರ್ಥವಿವರಣೆ**

"ಡೆಮಾಕ್ರಸಿ'' ಎಂಬ ಇಂಗ್ಲೀಷ್ ಪದದ ಕನ್ನಡ ರೂಪಾಂತರವೇ ಪ್ರಜಾಪ್ರಭುತ್ವ ಅಥವಾ ಪ್ರಜಾರಾಜ್ಯ. ಈ ಪದ ಗ್ರೀಕ್ ಭಾಷೆಯ'ಡೆಮೋಸ್ (Demos) ಮತ್ತು "ಕ್ರಾಟಿಯ" (Kratia) ಎಂಬ ಎರಡು ಪದಗಳ ಸಂಯೋಗದಿಂದ ಬಂದಿದೆ.

ಡೆಮಾಸ್ ಎಂದರೆ ಜನತೆ, ಕ್ರಾಟಿಯ ಎಂದರೆ ಶಕ್ತಿ ಅಥವಾ ಪ್ರಜಾಸರಕಾರ. ಆದ್ದರಿಂದ ಡೆಮಾಕ್ರಸಿ ಎಂದರೆ ಪ್ರಜೆಗಳ ಶಕ್ತಿ.

ಅಬ್ರಾಹಿಂ ಲಿಂಕನ್ ಹೇಳುವಂತೆ, "ಪ್ರಜೆಗಳಿಗೋಸ್ಕರ, ಪ್ರಜೆಗಳಿಂದಲೇ ರಚಿತವಾದ, ಪ್ರಜೆಗಳ ಸರಕಾರವೇ ಪ್ರಜಾಪ್ರಭುತ್ವ".

ಪ್ರೋ॥ ಸಿಲಿ,"ಪ್ರಜಾಪ್ರಭುತ್ವವೆಂದರೆ, ಅನುಮತಿಯ ಮೇಲೆ ನಡೆಯುವ ಸರಕಾರ",

"ಯಾವ ರಾಜ್ಯದಲ್ಲಿ ಪರಮಾಧಿಕಾರ ಸಂಪೂರ್ಣವಾಗಿ ಪ್ರಜೆಗಳಿಗೆ ಸೇರಿರುತ್ತದೆಯೋ ಅದೇ ಪ್ರಜಾಪ್ರಭುತ್ವ " ಎಂದು ಕ್ರಿ.ಪೂ. ೫ನೇ ಶತಮಾನದಲ್ಲಿದ್ದ ಸುಪ್ರಸಿದ್ಧ ಇತಿಹಾಸಜ್ಞನಾದ ಹೆರೊಡೊಟಸ್ ಹೇಳಿದ್ದಾನೆ.

ಪೆರಿಕ್ಲೀಸ್ ನ ಪ್ರಕಾರ " ರಾಜ್ಯದ ಆಡಳಿತ ಕೆಲವೇ ಜನರ ವಶದಲ್ಲಿರದೆ ಜನ ಸಾಮನ್ಯರ ವಶದಲ್ಲಿದ್ದರೆ" ಅದೇ ಪ್ರಜಾಪ್ರಭುತ್ವ .

ಪ್ರೊ॥. ಡೈಯಸಿ" ಯಾವ ದೇಶದ ಜನತೆಯ ಬಹುಭಾಗ ರಾಜ್ಯಭಾರದ ಹೊಣೆಯನ್ನು ವಹಿಸಿರುತ್ತದೆಯೋ ಅದು ಪ್ರಜಾಪ್ರಭುತ್ವವಾದಿ ಸರಕಾರ".

ಲಾರ್ಡ್ ಬ್ರಾಯಿಸ್ " ಪ್ರಜಾಪ್ರಭುತ್ವದಲ್ಲಿ ಸರಕಾರದಲ್ಲಿ ಅಧಿಕಾರಗಳು ಇಡೀ ಸಮಾಜದ ಜನತೆಯ ಕೈಯಲ್ಲಿ ಇರುತ್ತದೆ".

ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ" ಪರಮಾಧಿಕಾರವು ಅಂತಿಮವಾಗಿ ಪ್ರಜೆಗಳಿಗೆ ಸೇರಿರುತ್ತದೆ. '' ಪ್ರಜಾಪ್ರಭುತ್ವವು ಎಲ್ಲಾ ಪರಿಸ್ಥಿತಿಗಳಿಗೆ ಹೊಂದಿಕೊಳ್ಳುವುದಿಲ್ಲ. ಅದು ಸುಗಮವಾಗಿ ನಡೆಯಬೇಕಾದರೆ, ಸಮಾಜದಲ್ಲಿ ಪ್ರೋತ್ಸಾಹದಾಯಕವಾದ ಕೆಲವು ಸನ್ನಿವೇಶಗಳಿರಬೇಕು. ಭಾರತದ ಪ್ರಜಾಪ್ರಭುತ್ವವು ಇಡೀ ಜಗತ್ತಿನಲ್ಲಿಯೇ ಅತ್ಯಂತ ದೊಡ್ಡ ಪ್ರಜಾಪ್ರಭುತ್ವವಾಗಿದೆ. ಏಕೆಂದರೆ ಇದರ ಮತದಾರರ ಸಂಖ್ಯೆಯೇ ಅತ್ಯಾಧಿಕ. ಆದರೆ ಪ್ರಜಾಪ್ರಭುತ್ವವನ್ನು ಬಿಟ್ಟರೆ ಅದಕ್ಕಿಂತ ಉತ್ತಮ ಸರಕಾರ ಪದ್ಧತಿ ಬೇರೊಂದಿಲ್ಲ. ಮನುಷ್ಯನ ಅನುಭವಕ್ಕೆ ಬಂದಿರುವ ಸರಕಾರ ಪದ್ಧತಿಗಳಲ್ಲಿ ಪ್ರಜಾಸತ್ತಾತ್ಮಕ ಸರಕಾರ ಪದ್ಧತಿಯೇ ಅತ್ಯುತ್ತಮವಾದದ್ದು, ಇದಕ್ಕಿಂತ ಸಮರ್ಪಕವಾದ ಸರಕಾರದ ಪದ್ಧತಿಯನ್ನು ಮನುಷ್ಯ ಇನ್ನೂ ಕಂಡು ಹಿಡಿದಿಲ್ಲ.

ಪ್ರಜಾಪ್ರಭುತ್ವದಲ್ಲಿ ಮುಖ್ಯವಾಗಿ ಎರಡು ವಿಧಗಳಿವೆ.

೧. ಪ್ರತ್ಯಕ್ಷ ಪ್ರಜಾಪ್ರಭುತ್ವ

ಪ್ರಜೆಗಳು ಸ್ವತಃ ತಾವೇ ನೇರವಾಗಿ ಸಾರ್ವಜನಿಕ ವ್ಯವಹಾರಗಳ ಬಗ್ಗೆ ತಮ್ಮ ಇಚ್ಛೆ-ಅಭಿಪ್ರಾಯಗಳನ್ನು ರೂಪಿಸಿ ಪ್ರಕಟಿಸಿದಲ್ಲಿ ಅಂತಹ ವ್ಯವಸ್ಥೆಯನ್ನು ಪ್ರತ್ಯಕ್ಷ ಅಥವಾ ಸರಳ ಪ್ರಜಾಪ್ರಭುತ್ವವೆಂದು ಕರೆಯಬಹುದು. ಪ್ರಾಚೀನ ಗ್ರೀಕ್ ನಗರ-ರಾಜ್ಯಗಳಲ್ಲಿ ಈ ವಿಧವಾದ ಪ್ರಜಾಪ್ರಭುತ್ವ ರೂಢಿಯಲ್ಲಿತ್ತು. ಆಧುನಿಕ ಯುಗದಲ್ಲಿ ಈ ವಿಧವಾದ ಪ್ರಜಾಪ್ರಭುತ್ವವನ್ನು ಕಾರ್ಯರೂಪಕ್ಕೆ ತರುವುದು ಅಸಾಧ್ಯ.

೨. ಪರೋಕ್ಷ ಅಥವಾ ಪ್ರತಿನಿಧಿ ಪ್ರಜಾಪ್ರಭುತ್ವ

ಆಧುನಿಕ ಪ್ರಜಾಪ್ರಭುತ್ವ ಅಪ್ರತ್ಯಕ್ಷ ರೂಪದ್ದು. ಅಪ್ರತ್ಯಕ್ಷ ಇಲ್ಲವೆ ಪ್ರಾತಿನಿಧಿಕ ಪ್ರಜಾಪ್ರಭುತ್ವ ಪದ್ಧತಿಯಲ್ಲಿ ನಿಯತ ಕಾಲಗಳಲ್ಲಿ ಚುನಾವಣೆಗಳನ್ನು ನಡೆಸಿ, ಜನರು ತಮ್ಮ ಪ್ರತಿನಿಧಿಗಳನ್ನು ಆರಿಸುತ್ತಾರೆ. ಈ ಪ್ರತಿನಿಧಿಗಳು ಕಾಲಕಾಲಕ್ಕೆ ಒಂದೆಡೆಗೆ ಸಭೆ ಸೇರಿಸಿ, ದೇಶಕ್ಕೆ ಅವಶ್ಯವಾದ ಕಾಯಿದೆಗಳನ್ನು ರಚಿಸುತ್ತಾರೆ. ಉದಾ: ಭಾರತದಲ್ಲಿ ಸಾರ್ವತ್ರಿಕ ಪ್ರೌಢ ಮತಧಾನ ಪದ್ಧತಿಯ ಮೇರೆಗೆ ಜನರು ತಮ್ಮ ಪ್ರತಿನಿಧಿಗಳನ್ನು

ಐದು ವರ್ಷಗಳ ಅವಧಿಗಾಗಿ ಆರಿಸುತ್ತಾರೆ. ಮತ್ತು ಈ ಪ್ರತಿನಿಧಿಗಳು ಶಾಸನಾಂಗಗಳ ಸದಸ್ಯರಾಗುತ್ತಾರೆ. ಲೋಕ ಸಭೆಯ ೫೪೫ ಸದಸ್ಯರು ಈ ರೀತಿಯಿಂದ ಆರಿಸಲ್ಪಟ್ಟವರು ಇರುತ್ತಾರೆ. ಈ ಪ್ರತಿನಿಧಿಗಳು ಸರಕಾರದ ಶಾಸನಾಂಗೀಯ, ಕಾರ್ಯಾಂಗೀಯ, ಹಾಗೂ ನ್ಯಾಯಾಂಗೀಯ ಕಾರ್ಯ ಕಲಾಪಗಳನ್ನು ನಿರ್ವಹಿಸುತ್ತಾರೆ. ದೇಶದ ಸರಕಾರವು ಜನತೆಯ ಪ್ರತಿನಿಧಿಗಳಿಂದ ನಡೆಸಲ್ಪಡುತ್ತದೆ. ಇಂಥ ಪದ್ಧತಿಗೆ ಪರೋಕ್ಷ ಅಥವಾ ಪ್ರಾತಿನಿಧಿಕ ಪ್ರಜಾಪ್ರಭುತ್ವಗಳು ಎಂದು ಕರೆಯುತ್ತಾರೆ.

ಇಂಗ್ಲೆಂಡ್, ಸಂಯುಕ್ತರಾಷ್ಟ್ರ, ಫ್ರಾನ್ಸ್ ಮತ್ತು ಭಾರತ ಮೊದಲಾದ ರಾಷ್ಟ್ರಗಳಲ್ಲಿ ಪ್ರತಿನಿಧಿ ಪ್ರಜಾಪ್ರಭುತ್ವ ಆಚರಣೆಯಲ್ಲಿದೆ. ಪ್ರತಿನಿಧಿ ಪ್ರಜಾಪ್ರಭುತ್ವದಲ್ಲೂ ಎರಡು ವಿಧ. ಸಂಸದೀಯ ಮತ್ತು ಅಧ್ಯಕ್ಷೀಯ ಸಂಯುಕ್ತರಾಷ್ಟ್ರ, ಇಂಗ್ಲೆಂಡ್, ಫ್ರಾನ್ಸ್ , ಸ್ವಿಟ್ಜರ್ಲೆಂಡ್, ಕೆನಡಾ, ಆಸ್ಟ್ರೇಲಿಯಾ ಮೊದಲಾದ ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವ ಸಂಪೂರ್ಣವಾಗಿ ಯಶಸ್ವಿಯಾಗಿದೆ. ಇದಕ್ಕೆ ಕಾರಣ ಆರಾಷ್ಟ್ರಗಳಲ್ಲಿರುವ ಸನ್ನಿವೇಶಗಳು.



ಅದಕ್ಕೆ ಪ್ರತಿಯಾಗಿ ಸಂಯುಕ್ತ ಅರಬ್ -ಗಣರಾಜ್ಯ, ಪಾಕಿಸ್ತಾನ, ಇಂಡೋನೇಷಿಯಾ, ಬರ್ಮಾ, ಆಫ್ರಿಕಾದ ಕೆಲವು ನೂತನ ರಾಜ್ಯಗಳು ಮೊದಲಾದವುಗಳಲ್ಲಿ ಪ್ರಜಾಪ್ರಭುತ್ವ ಯಶಸ್ವಿಯಾಗಿಲ್ಲ. ಭಾರತದ ಪ್ರಜಾಪ್ರಭುತ್ವವು ತೃಪ್ತಿಕರವಾಗಿ ನಡೆಯುತ್ತಿಲ್ಲ ಎಂದೇ ಹೇಳಬೇಕು. ಇದಕ್ಕೆ ಕಾರಣ ಸಮಾಜದಲ್ಲಿ ಪ್ರೋತ್ಸಾಹದಾಯಕವಾದ ಕೆಲವು ಸನ್ನಿವೇಶಗಳ ಅಭಾವದ ಪರಿಣಾಮ.

### ೨.೪ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರಜೆಗಳ ಪಾತ್ರ

ಪ್ರಜಾಪ್ರಭುತ್ವ ಸಿದ್ಧಾಂತಕ್ಕೆ ಒಳಪಟ್ಟಿರುವ ಭಾರತದಲ್ಲಿ " ಪ್ರಜಾಪ್ರಭುತ್ವ" ವು ರೂಪು ಪಡೆಯಲು ಪ್ರಜೆಗಳ ಮತ್ತು "ಅಭಿಪ್ರಾಯವೇ" ಮುಖ್ಯ ಜೀವಾಳವಾಗಿರುತ್ತದೆ. ಪ್ರಜಾಪ್ರಭುತ್ವ ಸರ್ಕಾರ ರಚನೆಗೊಂಡ ನಂತರ ಅದು ಪ್ರಜೆಗಳಿಗೆ ಪೂರಕವಾದ ಆಡಳಿತವನ್ನು ನೀಡುತ್ತದೆ. ಪ್ರಜಾಪ್ರಭುತ್ವದ "ಸಫಲತೆ" ಬರೀ ಪ್ರಜೆಗಳಿಂದಷ್ಟೇ ಅಲ್ಲ, ಜನರಿಂದ ಚುನಾಯಿತವಾಗಿ ರಚಿತಗೊಂಡ ಸರ್ಕಾರದಿಂದ ಮುಖ್ಯವಾಗಿರುತ್ತದೆ. ಇದಕ್ಕೆ ಕಾರಣ ಪ್ರಜಾಪ್ರಭುತ್ವ ಏಕ ವ್ಯಕ್ತಿಯದಲ್ಲ. ಇಲ್ಲಿ ಅಭಿಪ್ರಾಯ ಎಷ್ಟು ಮುಖ್ಯವೋ, ಭಿನ್ನಾಭಿಪ್ರಾಯವೂ ಅಷ್ಟೇ ಮುಖ್ಯವಾಗಿರುತ್ತದೆ. ಅದರಲ್ಲೂ ಅನೇಕ ಜಾತಿ, ಧರ್ಮ, ವರ್ಗದಿಂದ ಕೂಡಿದ ಭಾರತದಂತಹ

ದೇಶದಲ್ಲಿ" ಪ್ರಜಾಪ್ರಭುತ್ವ'' ಎಷ್ಟರ ಮಟ್ಟಿಗೆ ಪ್ರಸ್ತುತ ಎಂಬ ಪ್ರಶ್ನೆ ಉದ್ಭವಿಸುತ್ತದೆ?

ಡಾ|| ಬಿ.ಆರ್.ಅಂಬೇಡ್ಕರ್ ಹೇಳುವಂತೆ, "ಸಂವಿಧಾನವೊಂದು ತುಂಬ ಚೆನ್ನಾಗಿರಬಹುದು. ಆದರೆ ಕಾರ್ಯರೂಪಕ್ಕೆ ಇಳಿಸುವ ಜನರು ಕೆಟ್ಟವರಾಗಿದ್ದ ಪಕ್ಷದಲ್ಲಿ ಸಂವಿಧಾನವೂ ಕೆಟ್ಟದ್ದೇ ಆಗುವುದು. ಅದಕ್ಕೆ ಪ್ರತಿಯಾಗಿ ಒಂದು ಕೆಟ್ಟ ಸಂವಿಧಾನವೂ ಒಳ್ಳೆಯವರ ಕೈಯಲ್ಲಿ ಜನಹಿತಕಾರಿಯೇ ಆಗಬಹುದು.

ಹಾಗಾದರೆ, 'ಪ್ರಜಾಪ್ರಭುತ್ವ' ಮಾದರಿಯ ಆಡಳಿತದಿಂದ ಜನತೆಗೆ ಮೂಲಭೂತ ಅವಶ್ಯಕತೆಗಳಾದ ವಸತಿ, ನೀರು, ಅನ್ನ ಶಿಕ್ಷಣ, ಆರೋಗ್ಯ, ಒದಗಿಸುವಂತೆ ಪರಿಸ್ಥಿತಿ ನಿರ್ಮಾಣವಾಗಬೇಕು. ಆಗ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಹೊಂದಿರುವ ಭಾರತಕ್ಕೆ ನಮ್ಮ ಚಿಂತಕರು ನೀಡಿರುವ " ಪ್ರಜಾಪ್ರಭುತ್ವ ಸಿದ್ಧಾಂತ'' ಒಂದು ಕೊಡುಗೆ ಎಂದು ಹೇಳಬಹುದು.

ಸಾಮಾನ್ಯವಾಗಿ ಪ್ರಜಾಪ್ರಭುತ್ವದ ವ್ಯಾಖ್ಯೆಯನ್ನು ಅನೇಕ ರೀತಿಯಾಗಿ ಮಾಡಲಾಗುತ್ತಿದೆ. ನಾವಿಲ್ಲಿ ಕೈಕೊಂಡ ಅಭ್ಯಾಸದ ಮಟ್ಟಿಗೆ ಅದು ಜನತೆಗೆ ರಾಜಕೀಯ ವಿಧಾನದಲ್ಲಿ ಸ್ವತಂತ್ರ ಮತ್ತು ಸಮಾನ ನಾಗರಿಕರೆಂದು ಭಾಗವಹಿಸಲು ಸಂಪೂರ್ಣ ಹಕ್ಕು ಹಾಗೂ ಅವಕಾಶ ನೀಡುವ ರಾಜಕಿಯ ಪದ್ಧತಿ ಎಂದು ಪರಿಗಣಿಸಬಹುದು. ಪ್ರಜಾಪ್ರಭುತ್ವ ಹಾಗೂ ಇತರ ರಾಜಕೀಯ ಪದ್ಧತಿಗಳಲ್ಲಿ ಇರುವ ಮುಖ್ಯವಾದ ವ್ಯತ್ಯಾಸವೇ ಇದು. ಇತರ ರಾಜಕೀಯ ಪದ್ಧತಿಗಳಲ್ಲಿ ರಾಜಕೀಯ ವಿಧಾನಗಳಲ್ಲಿ ಜನತೆ ಭಾಗವಹಿಸುವ ಅವಕಾಶವಿಲ್ಲವೆಂದಲ್ಲ. ನಮ್ಮ ಹಿಂದಿನ ಕೆಲ ಸಂಸ್ಥಾನಗಳಲ್ಲಿ ನಾವಿದನ್ನು ಕಾಣಬಹುದಾಗಿತ್ತು. ಆದರೆ ಈ ಅವಕಾಶ ತುಂಬಾ ಪರಿಮಿತವಾದುದು . ಅಂದರೆ ಎಲ್ಲ ಪ್ರಸಂಗಗಳಲ್ಲಿಯೂ ಕೊನೆಯ ನಿರ್ಣಯ ಕೊಡುವ ಅಧಿಕಾರ ಸಂಸ್ಥಾನಿಕರಿಗೆ ಸೇರುತ್ತು. ನಿರಂಕುಶ ಸರ್ವಾಧಿಕಾರಿ ರಾಷ್ಟ್ರಗಳಂಥ ಪ್ರಜಾಸತ್ತಾತ್ಮಕವಲ್ಲದ ರಾಜಕೀಯ ಪದ್ಧತಿಗಳಲ್ಲಿಯೂ, ಜನರು ರಾಜಕೀಯ ವಿಧಾನದಲ್ಲಿ ಪಾಲ್ಗೊಳ್ಳುವುದುಂಟು. ಅವರೂ "ಮತದಾನ'' ಮಾಡುವರು. ಆದರೆ ಅವರು ಸ್ವತಂತ್ರ ನಾಗರಿಕರಾಗಿ ಭಾಗವಹಿಸುವುದಿಲ್ಲ. ಅನೇಕ ಸ್ಪರ್ಧಾಳುಗಳಿಂದ ಪ್ರತಿನಿಧಿಯನ್ನು ಆರಿಸುವ ಅವಕಾಶವಾಗಲಿ, ಸ್ವಾತಂತ್ರ್ಯವಾಗಲಿ, ಅವರಿಗಿರುವುದಿಲ್ಲ. ಪ್ರಜಾಪ್ರಭುತ್ವದಲ್ಲಿ ಮಾತ್ರ ಜನ ರಾಜಕೀಯ ವಿಧಾನದಲ್ಲಿ ಸ್ವೈಜವಾಗಿ ಮತ್ತು ದೊಡ್ಡ ಪ್ರಮಾಣದಲ್ಲಿ ಪಾಲ್ಗೊಳ್ಳುವರು. ಇಲ್ಲಿ ಮಾತ್ರ ಅವರಿಗೆ ಸಂಪೂರ್ಣ ಸ್ವಾತಂತ್ರ್ಯವಿರುವದು.

ದೇಶದ ಸಂವಿಧಾನ ಮತ್ತು ಅದಕ್ಕನುಗುಣವಾಗಿ ರೂಪುಗೊಂಡ ಕಾಯ್ದೆಗಳು ಸರಕಾರದ ವಿಧಾನದಲ್ಲಿ ಜನತಪಾಲ್ಗೊಳ್ಳುವ ಹಕ್ಕಿಗೆ ಅವಕಾಶ ಮಾಡಿಕೊಡುವವು. ಆದರೆ ಇಷ್ಟು ಮಾತ್ರಕ್ಕೆ ಅವರು ತಮಗೆ ನೀಡಲಾದಹಕ್ಕನ್ನು ಸಂಪೂರ್ಣವಾಗಿ ಉಪಯೋಗಿಸಿ ಕೊಳ್ಳುವರೆಂದು ಹೇಳಲಾಗುವುದಿಲ್ಲ. ಕಾಯ್ದೆಯಿಂದ ಇಂಥ ಹಕ್ಕೇನೋದೊರೆಯುಬಹುದು. ಆದರೆ ಎಲ್ಲ ಕಾಲಕ್ಕೆ ಈ ಹಕ್ಕನ್ನು ಪ್ರತ್ಯಕ್ಷವಾಗಿ ಉಪಯೋಗಿಸಿಕೊಳ್ಳುವಲ್ಲಿ ರಾಷ್ಟ್ರ ರಾಷ್ಟ್ರಗಳಲ್ಲಿ ತುಂಬ ಅಂತರವುಂಟು. ಕೆಲವರ್ಗದವರು ಇನ್ನಿತರರಿಗಿಂತ ಇದರ ಉಪಯೋಗವನ್ನು ಸಂಪೂರ್ಣವಾಗಿಮಾಡಿಕೊಳ್ಳಬಹುದು. ಇದನ್ನು ಉಪಯೋಗಿಸಿಕೊಂಡ ಉದ್ದೇಶದಲ್ಲಿಯೂ ಅಂತರವಿರಬಹುದು. ಇಂಥ ಕೆಲವು ಅಂಶಗಳು ಸಂವಿಧಾನದ ತಾತ್ವಿಕತೆ ಮತ್ತು ರೂಢಿ ಇವುಗಳಲ್ಲಿ ಭೇದವನ್ನು ಕಲ್ಪಿಸುವುದು.

ಭಾರತದಲ್ಲಿ ರಾಜಕೀಯ ವಿಧಾನಗಳಲ್ಲಿ ಭಾಗವಹಿಸುವಿಕೆ ಪ್ರಮುಖ್ಯವಾಗಿ ಎರಡು ರೂಪಗಳನ್ನು ತಳೆದಿದೆ. ಒಂದನ್ನು ಸಂವಿಧಾನಾತ್ಮಕವೆಂದೂ, ಇನ್ನೊಂದನ್ನು ಸಂವಿಧಾನೇತರವೆಂದೂ ಹೇಳಬಹುದು. ಸಂವಿಧಾನದಲ್ಲಿ ಹೇಳಿದ ಕಾರ್ಯವಿಧಾನ ಅದಕ್ಕನುಗುಣವಾಗಿ ರಚಿತವಾದ ಕಾಯ್ದೆಗಳು, ಅದರ ಅನುಷ್ಠಾನದ ಕಾಲಕ್ಕೆ ಬೆಳೆದು ಬಂದ ಸಂಪ್ರದಾಯಗಳು, ಇವುಗಳನ್ನನುಸರಿಸಿ, ಭಾಗವಹಿಸುವಿಕೆಯನ್ನೂ ಸಂವಿಧಾನಾತ್ಮಕವೆಂದು ಹೇಳಬೇಕು. ಚುನಾವಣೆ ಕಾಯ್ದೆ ಮೇರೆಗೆ ಮತದಾರರು, ಚುನಾವಣೆಯಲ್ಲಿ ಭಾಗವಹಿಸುವದು, ಭಿನ್ನಭಿನ್ನ ರಾಜಕೀಯ ಪಕ್ಷಗಳ ಸದಸ್ಯರು ಕಾಯ್ದೆಗಳ ಮೇರೆಗೆ ಶಾಸನಿಕ ಕಾರ್ಯದಲ್ಲಿ ಭಾಗವಹಿಸುವುದು, ಕಾರ್ಯವಿಧಾನದ ನಿಯಮಗಳು ಮತ್ತು ಈ ಉದ್ದೇಶಕ್ಕಾಗಿ ರಚಿತವಾದ ನಿಯಮಾವಳಿ ಈ ಬಗೆಯವು. ಈ ಬಗೆಯ ಕಾರ್ಯ ವಿಧಾನಗಳನ್ನು ಅತಿಕ್ರಮಿಸಿ, ಮೇಲಿಂದ ಮೇಲೆ ಕಾಯ್ದೆ ಬದ್ಧವಲ್ಲದ ಅಕ್ರಮ ವಿಧಾನಗಳನ್ನು ಅನುಸರಿಸಿದಲ್ಲಿ ಅದನ್ನು ಸಂವಿಧಾನೇತರ ಭಾಗವಹಿಸುವಿಕೆಯ ಪದ್ಧತಿಯಗಳೆಂದು ಬಗೆಯಬೇಕು.

ಹರತಾಳ, ಬಹಿಷ್ಕಾರ, ಮತ್ತು ಸಂಪುಗಳು, ಉಪವಾಸ, ಪ್ರತಿಬಂಧ, ಸತ್ಯಗ್ರಹ ಮತ್ತು ಪ್ರಜಾಸತ್ತಾತ್ಮಕ ವಿಧಾನದಿಂದ ಅಮಲಿನಲ್ಲಿ ಬಂದ ಕಾಯ್ದೆಗಳ ಭಂಗ ಮತ್ತು ಬಹುಮಟ್ಟಿಗೆ ಹಿಂಸಾಚಾರದಲ್ಲಿ ಪರ್ಯಾವಸನಗೊಳ್ಳುವ ಮತ ಪ್ರದರ್ಶನ -ಇವು ಸಾಮಾನ್ಯವಾಗಿ ಕಂಡು ಬರುವ ಸಂವಿಧಾನೇತರ ವಿಧಾನಗಳು. ಇವನ್ನೇಲ್ಲ ಪ್ರತ್ಯಕ್ಷಕ್ರಮಗಳೆನ್ನಬಹುದು. ನಮ್ಮ ರಾಷ್ಟ್ರದ ಪ್ರಜಾಸತ್ತಾತ್ಮಕ ರಾಜಕಾರಣದಲ್ಲಿ ಪ್ರತ್ಯಕ್ಷ ಕ್ರಮಗಳು ಸಾಮಾನ್ಯವಾಗಿವೆ. ನಮ್ಮಲ್ಲಿಂದು ಸಂವಿಧಾನಾತ್ಮಕ ಕ್ರಮ ಹಾಗೂ ಪ್ರತ್ಯಕ್ಷ ಕ್ರಮ- ಎರಡು ವಿಧದ ರಾಜಕಾರಣಗಳೊಂದಿಗೆ ನಾವು ವ್ಯವಹರಿಸ ಬೇಕಾಗಿರುವದು.

ಈ ರೀತಿ ಭಾಗವಹಿಸುವ ವಿವಿಧ ಪದ್ಧತಿಗಳಿರುವದರೊಂದಿಗೆ, ಭಾಗವಹಿಸುವ ಜನರ ವರ್ಗಗಳಲ್ಲಿಯೂ, ಅವರ ಉದ್ದೇಶಗಳಲ್ಲಿಯೂ, ವಿವಿಧತೆಯಿರುವುದುಂಟು. ಪ್ರಥಮತಃ ಜನತೆ ಇಡಿಯಾಗಿ ಭಾಗವಹಿಸುವದು. ಅವರು ಮತದಾರರಾಗಿ ಸಾರ್ವತ್ರಿಕ ಚುನಾವಣೆ ಮೂಲಕ ದೇಶವನ್ನು, ಯಾರು ಆಳಬೇಕೆಂದು ನಿರ್ಧರಿಸುವರು. ಆಧುನಿಕ ಪ್ರಜಾಸತ್ತೆ ಪ್ರಾಚೀನ ಗ್ರೀಸದಲ್ಲಿರುವಂತೆ, ಸಣ್ಣಪುಟ್ಟ ಪಟ್ಟಣ ನಗರದಲ್ಲಿ ನಿರ್ವಹಿಸುತ್ತಿರದೇ ಆಕಾರ- ಜನಸಂಖ್ಯೆ ಹೆಚ್ಚು ವಿಶಾಲವಾಗಿರುವ ರಾಷ್ಟ್ರಗಳಲ್ಲಿ ನಿರ್ವಹಿಸುತ್ತಿರುವದು. ಹೀಗಾಗಿ ಅಕ್ಷರಶಃ ಪ್ರಜಾಸತ್ತೆ, ಅಂದರೆ ನೇರವಾದ ಜನತಾ ಸರಕಾರ ಸಾಧ್ಯವೇ ಇಲ್ಲ. ಇಷ್ಟವೂ ಅಲ್ಲ. ಅದಕ್ಕಾಗಿ ಜನ ಮಾಡಬಹುದಾದುದು ಮತ್ತು ಮಾಡುವದು ತಮ್ಮನ್ನಾಳುವವರನ್ನು ನಿಯಂತ್ರಿಸುವುದು. ಈ ಬಗೆಯ ನಿಯಂತ್ರಣವಿರುವದರಿಂದಲೇ ಈ ರಾಜಕೀಯ ಪದ್ಧತಿ ಪ್ರಜಾಸತ್ತೆಯೆನಿಸಿ ಕೊಂಡಿದೆ. ಅದೇ ಪ್ರಜಾಸತ್ತೇತ್ತರ ಪದ್ಧತಿಯಲ್ಲಿ ಸರಕಾರ ಜನತೆಯನ್ನು ನಿಯಂತ್ರಿಸುವುದು. "ಆಧುನಿಕ ಪ್ರಜಾಸತ್ತೆಯಲ್ಲಿ ಸರಕಾರದ ಮೇಲೆ ಜನತಾ ನಿಯಂತ್ರಣವಿರಿಸಿಕೊಳ್ಳಲು ಆಳುವವರನ್ನು ನಿಯತಕಾಲಿಕ ಚುನಾವಣೆಗಳಿಂದ ಆರಿಸುವ ವಿಧಾನವನ್ನು ಅನುಸರಿಸಲಾಗುತ್ತಿದೆ.ಸ್ವತಂತ್ರ ಮತ್ತು ನಿಷ್ಪಕ್ಷಪಾತ ಚುನಾವಣೆಗಳು ಅಧಿಕಾರದಲ್ಲಿರುವವರಿಗೆ ತಮ್ಮ ಅಧಿಕಾರ ಜನತೆಯಿಂದ ಬಂದುದು, ಅದನ್ನು ಸರಿಯಾಗಿ ಉಪಯೋಗಿಸದಿದ್ದರೆ, ಅವರ ವಿಶ್ವಾಸಕ್ಕೆರವಾಗಬಹುದು. ಮತ್ತೊಮ್ಮೆ ಜನ ತಮ್ಮನ್ನು ಆರಿಸಲಿಕ್ಕಿಲ್ಲ, ಎಂದು ಅರಿಕೆ ಮಾಡುವುದು.

ಇಂದಿನ ಪ್ರಜಾಸತ್ತಾತ್ಮಕ ರಾಜಕಾರಣದಲ್ಲಿ ಚುನಾವಣೆಗಳು ತುಂಬಾ ಮಹತ್ವದ ಪಾತ್ರವನ್ನು ವಹಿಸುವವು. ಜನತೆಗೆ ಮಾತ್ರ ಈ ಚುನಾವಣೆಗಳಲ್ಲಿ ಭಾಗವಹಿಸುವ ಹಕ್ಕುಂಟು. ಜನತೆಗೆ ರಾಜಕೀಯ ವಿಧಾನಗಳಲ್ಲಿ ಮತ್ತಿತರ ಅನೇಕ ರೀತಿಯಲ್ಲಿ ಪಾಲ್ಗೋಳ್ಳುವ ಅವಕಾಶವಿದೆಯಾದರೂ ಅವೆಲ್ಲ ತೀರ ಸಾಮಾನ್ಯವಾದುವು. ಆದರೆ ಮತದಾರರಾಗಿ ಇಂದಿನ ರಾಜಕೀಯ ವಿಧಾನಗಳಲ್ಲಿ ಅವರು ವಹಿಸುವ ಪಾತ್ರ ತುಂಬಾ ಪ್ರಾಮುಖ್ಯವಾದುದು.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಚುನಾವಣೆ ಎಂದರೆ, ವ್ಯಕ್ತಿ-ವ್ಯಕ್ತಿಗಳ ನಡುವಿನ ಹೋರಾಟವಲ್ಲ. ಪಕ್ಷಗಳ ತತ್ವ,ಸಿದ್ಧಾಂತಗಳ ನಡುವಿನ ಹೋರಾಟವಾಗಿದೆ. ಚುನಾವಣೆಯಲ್ಲಿ ಮತ ಚಲಾವಣೆಯಾದರೆ, ನಾಗರಿಕರ ಕರ್ತವ್ಯ ಮುಗಿಯಿತು ಎಂದೇ ತಿಳಿಯಲಾಗುತ್ತಿದೆ. ನಿಜವಾದ ಪ್ರಜಾಪ್ರಭುತ್ವದಲ್ಲಿರ ಬೇಕಾದ, ಜನರ ಪಾಲ್ಗೊಳ್ಳುವಿಕೆ ಭಾರತದಲ್ಲಿ ಸಾಧ್ಯವಿರುವಾಗಲೇ ಇಲ್ಲ. ಅದಕ್ಕೇ ಭಾರತದಲ್ಲಿ ಪ್ರಜಾಪ್ರಭುತ್ವ ಹುಟ್ಟಿಕೊಂಡಾಗ ಇದ್ದ ಪರಿಸ್ಥಿತಿಯೂ ಸ್ವಲ್ಪಮಟ್ಟಿಗೆ ಕಾರಣ. ಬಹಳಷ್ಟು ಜನ ಅನಕ್ಷರಸ್ಥರಿರುವ ಭಾರತದಲ್ಲಿ,

ಪ್ರಜಾಪ್ರಭುತ್ವವೆಂದರೇನು? ಎಂದು ತಿಳಿಯದ ಜನರಿರುವಾಗ, ಅವರನ್ನು ನಿಜವಾದ ಪ್ರಜಾಪ್ರಭುತ್ವದಲ್ಲಿ ಪಾಲ್ಗೊಳ್ಳುವಂತೆ ಮಾಡಬೇಕಾದರೆ, ಅವರಿಗೆ "ಶಿಕ್ಷಣ'' ಕೊಡಿಸುವುದು ಅತ್ಯವಶ್ಯಕ.

ಅಜ್ಞಾನವೇ ಪ್ರಜಾಪ್ರಭುತ್ವದ ಶತ್ರು ಎಂದು ಹೇಳಿರುವುದು ಸಮರ್ಥಕವಾಗಿದೆ. ಅಜ್ಞಾನದಲ್ಲಿರುವ ಪ್ರಜೆಗಳು ರಾಜಕೀಯ ವಿಷಯಗಳ ಬಗ್ಗೆ ಸಾಕಷ್ಟು ಉತ್ಸಾಹ ತೋರಿಸುವುದಿಲ್ಲ. ಚುನಾವಣೆಯ ಮೂಲಕ ಪ್ರಜೆಗಳು ತಮ್ಮ ಸರಕಾರವನ್ನು ತಾವೇ ಆರಿಸಿಕೊಳ್ಳುತ್ತಾರೆ. ಓಟು ಪ್ರಜೆಗಳ ಕೈಯಲ್ಲಿ ಒಂದು ಮುಖ್ಯವಾದ ಆಯುಧವಿದ್ದಂತೆ. ಅಜ್ಞಾನದಿಂದ ಅದನ್ನು ಸರಿಯಾಗಿ ಬಳಸದಿದ್ದರೆ, ಅಯೋಗ್ಯ ಪ್ರತಿನಿಧಿಗಳು ಆರಿಸಿ ಬಂದು ಅವರು ನಿರ್ಮಿಸುವ ಸರಕಾರದಿಂದ ಅನೇಕ ವಿಧಾವಾದ ತೊಂದರೆಗಳು ಉದ್ಭವಿಸುತ್ತವೆ. ಹಾಗೆಯೇ ಸ್ವಾರ್ಥಪರರಾದ ಕೆಲವು ಮುಂದಾಳುಗಳು ಇಂತಹ ಪ್ರಜೆಗಳನ್ನು ದುರುಪಯೋಗ ಪಡಿಸಿಕೊಳ್ಳುವರು. ಈ ದೋಷಗಳನ್ನು ಹೋಗಲಾಡಿಸಬೇಕಾದರೆ, ಪ್ರತಿಯೊಬ್ಬರಿಗೂ ಚಿಕ್ಕಂದಿನಿಂದಲೇ ಸರಿಯಾದ ಶಿಕ್ಷಣ ದೊರೆಯುವಂತೆ ವ್ಯವಸ್ಥೆ ಮಾಡಬೇಕು. ಪ್ರಜೆಗಳಲ್ಲಿ ರಾಜಕೀಯ ಜ್ಞಾನವಿರಬೇಕಾದರೆ, 'ಶಿಕ್ಷಣ'ಅನಿವಾರ್ಯ. ಪ್ರಜಾಪ್ರಭುತ್ವದಲ್ಲಿ ಶಿಕ್ಷಣದ ಮಹತ್ವವನ್ನು ಒತ್ತಿ ಹೇಳುತ್ತಾ ಜಾನ್ ಸ್ಟೂಯರ್ಟ್ ಮಿಲ್ ಹೀಗೆ ಹೇಳಿದ್ದಾನೆ " ವಯಸ್ಕರ ಮತದಾನ ಹಕ್ಕನ್ನು ಕೊಡುವುದಕ್ಕೆ ಮೊದಲು ನಿಮ್ಮನ್ನಾಳುವ ಪ್ರಜೆಗಳಿಗೆ ಶಿಕ್ಷಣವನ್ನು ಕೊಡಿ".

ನಿರಂತರ ಜಾಗರೂಕತೆಯೇ ಪ್ರಜಾಪ್ರಭುತ್ವಕ್ಕೆ ತೆರಬೇಕಾದ ಬೆಲೆ ಎಂದು ಹೇಳಲಾಗಿದೆ. ಪ್ರಜಾಪ್ರಭುತ್ವ ಯಶಸ್ವಿಯಾಗ ಬೇಕಾದರೆ, ಪ್ರಜೆಗಳು ಅದರ ಮಹತ್ವವನ್ನು ಅರಿತು ಅದನ್ನು ಕಾಪಾಡಬೇಕು. ತಮ್ಮ ಹಕ್ಕುಗಳನ್ನು ಕಾಪಾಡಿಕೊಂಡು ಕರ್ತವ್ಯಗಳನ್ನು ಪಾಲಿಸಲು ಸಿದ್ಧರಾಗಿರಬೇಕು.

ಪ್ರಜೆಗಳೇ ಪ್ರಜಾಪ್ರಭುತ್ವದ ಜೀವದುಸಿರು. ಈ ಪ್ರಜೆಗಳಿಗೆ ಪ್ರಜಾಪ್ರಭುತ್ವ ಸಿದ್ಧಾಂತದಲ್ಲಿ ನಂಬಿಕೆ ಮತ್ತು ಶ್ರದ್ಧೆ ಇರಬೇಕು. ಪ್ರಜಾಪ್ರಭುತ್ವ ಯಶಸ್ವಿಯಾಗ ಬೇಕಾದರೆ, ಪ್ರಜೆಗಳ ಜೀವನಮಟ್ಟವೂ ತೃಪ್ತಿಕರವಾಗಿರಬೇಕು.ದೇಶದ ಬಹುಸಂಖ್ಯಾತ ಜನರು ದಾರಿದ್ರ್ಯದಲ್ಲಿ ಮುಳುಗಿದ್ದರೆ ಅವರಿಗೆ ಪ್ರಜಾಸತ್ತಾತ್ಮಕ ತತ್ತ್ವಗಳ ವಿಷಯದಲ್ಲಿ ಉತ್ಸಾಹವಿರುವುದಿಲ್ಲ. ಅಂತಹ ಸಂದರ್ಭಗಳಲ್ಲಿ ಸರಕಾರವು ಶ್ರೀಮಂತ ವಶವಾಗುವುದರಲ್ಲಿ ಸಂದೇಹವಿಲ್ಲ. ಬಡತನದ ಬವಣೆಯನ್ನು ಸಹಿಸಲಾರದೆ ಜನತೆಯೇ ಹಿಂಸಾತ್ಮಕ ಮಾರ್ಗಗಳ ಮೂಲಕ ಸರಕಾರವನ್ನೇ ಕಿತ್ತೊಗೆಯುವ ಸಾಧ್ಯತೆಗಳನ್ನೂ ತಳ್ಳಿ ಹಾಕುವಂತಿಲ್ಲ. ದೇಶದ ಬಹುಸಂಖ್ಯಾತ ಪ್ರಜೆಗಳು ದಾರಿದ್ರ್ಯದಲ್ಲಿ ಮುಳಿಗಿದ್ದರೆ, ಅವರಿಗೆ ಸ್ವಾತಂತ್ರ್ಯ ಮತ್ತು ಸಮಾನತ್ವ ಮೊದಲಾದವು ಅರ್ಥವಿಲ್ಲದ

ಪದಗಳಾಗುತ್ತವೆ. ಆದ್ದರಿಂದ ಪ್ರಜಾಪ್ರಭುತ್ವವು ಸಾರ್ಥಕ ಗೊಳ್ಳಬೇಕಾದರೆ, ಅಲ್ಲಿನ ಆರ್ಥಿಕ ಪರಿಸ್ಥಿತಿ ಒಂದು ಮಟ್ಟದವರೆಗಾದರೂ ತೃಪ್ತಿಕರವಾಗಿರಬೇಕು. ಆದ್ದರಿಂದಲೇ ಪ್ರಜಾಸತ್ತಾತ್ಮಕ ಸರಕಾರ ಪ್ರಪಜೆಗಳ ಆರ್ಥಿಕ ಪರಿಸ್ಥಿತಿಯನ್ನು ಉತ್ತಮ ಪಡಿಸುವ ಉದ್ದೇಶದಿಂದ ಅನೇಕ ಸಮಾಜ ಕಲ್ಯಾಣ ಮತ್ತು ಆರ್ಥಿಕ ಕಾರ್ಯಗಳನ್ನು ಕೈಗೊಳ್ಳುತ್ತದೆ. ಈ ರೀತಿ ಆಧುನಿಕ ಪ್ರಜಾಪ್ರಭುತ್ವದ ಉದ್ದೇಶ ಸಮಾಜ ಕಲ್ಯಾಣ.

ಪ್ರಜಾತಂತ್ರದಲ್ಲಿ ಪ್ರತಿಪ್ರಜೆಗೂ ಇರುವ ಪ್ರಾಧಾನ್ಯ ಇನ್ನು ಯಾವ ರಾಜಕೀಯ ಪದ್ಧತಿಯ ಮೇರೆಗೂ ಇಲ್ಲ. ಅರ್ಥಾತ್ ಶ್ರೀಸಾಮಾನ್ಯನಿಗೆ ಪ್ರಾಧಾನ್ಯವನ್ನು ನೀಡುವ ಪರಂಪರೆಯೇ ಪ್ರಜಾತಂತ್ರ. ಯಾರೂ ಇತರರಿಗಿಂತ ಮೇಲಲ್ಲ.ಕೀಳಲ್ಲ.

## ೨.೫ ರಾಜಕೀಯ ಸಿದ್ಧಾಂತಗಳು- ತೌಲನಿಕ ಅಧ್ಯಯನ

ಒಂದು ಸಮಾಜದಲ್ಲಿ ಆಡಳಿತ ವ್ಯವಸ್ಥೆ ರೂಪುಗೊಳ್ಳುವುದು ಅಲ್ಲಿನ ಜನರಿಂದ. ಆದರೆ ಆ ಆಡಳಿತ ವ್ಯವಸ್ಥೆಯು ಬಳಸಿ ಕೊಳ್ಳುವ ರಾಜಕೀಯ ಸಿದ್ಧಾಂತಗಳು ರೂಪುಗೊಳ್ಳುವುದು ಆ ನಾಡಿನ ಬುದ್ಧಿ ಜೀವಿಗಳಿಂದ. ಹೀಗಾಗಿ ಬುದ್ಧಿ ಜೀವಿಗಳು ಮತ್ತು ಸಾಮಾನ್ಯ ಜನರಲ್ಲಿನ ಅಂತರವಿದ್ದೆ, ಇರುತ್ತದೆ.ಇದರಿಂದಾಗಿ ಯಾವುದೇ ಆಡಳಿತ ವ್ಯವಸ್ಥೆಯು ಬಳಸಿಕೊಳ್ಳುವ ರಾಜಕೀಯ ಸಿದ್ಧಾಂತಗಳಿಗೆ ದೋಷಗಳು ಇದ್ದೇ ಇರುತ್ತವೆ. ಯಾವುದೇ ರಾಜಕೀಯ ಸಿದ್ಧಾಂತ ಪರಿಪೂರ್ಣವಲ್ಲ, ಮತ್ತು ಆ ಸಿದ್ಧಾಂತ ಎಲ್ಲ ಜನರಿಗೂ, ಎಲ್ಲ ವಿಧದಲ್ಲೂ ನೆಮ್ಮದಿ ತರುವಂತಹದ್ದು ಎಂಬುದೂ ಕೂಡ ಪೂರ್ಣಸತ್ಯವಾಗಿರುವುದಿಲ್ಲ. ಆದರೆ ಪ್ರತಿಯೊಂದು ರಾಜಕೀಯ ಸಿದ್ಧಾಂತಕ್ಕೂ ತನ್ನದೇ ಆದ ಲಕ್ಷಣಗಳಿರುತ್ತವೆ. ಹಾಗೆಯೇ ಗುಣ, ದೌರ್ಬಲ್ಯ ಮತ್ತು ವಿಶಿಷ್ಟತೆಗಳಿರುತ್ತವೆ.

ಈ ರಾಜಕೀಯ ಸಿದ್ಧಾಂತಗಳು ಮೊದಲು ಅದು ಒಬ್ಬ ವ್ಯಕ್ತಿಯ ಮನಸ್ಸಿನಿಂದ ಮೊಳಕೆಯೊಡೆದು, ಬೆಳೆದು ಬಂದರೂ ನಂತರ ಅದು ಹಲವು ವ್ಯಕ್ತಿಗಳ ಚಿಂತನೆಯ ಫಲದಿಂದ ಗಟ್ಟಿಯಾಗುತ್ತ ಹೋಗುತ್ತದೆ. ಮತ್ತು ಆ ಬಗೆಗಿನ ಪರ, ವಿರೋಧವಾದಗಳು ನಡೆಯುತ್ತಲೇ ಇರುತ್ತವೆ. ಎಲ್ಲ ಸಿದ್ಧಾಂತಗಳೂ ಒಂದು ಸಮಾಜದ ಸರ್ವತೋಮುಖ ಅಭಿವೃದ್ಧಿಯನ್ನು ಬಯಸಿ ಹುಟ್ಟಿಕೊಂಡಿರುತ್ತವೆ. ಆದರೆ ಅವುಗಳ ಯಶಸ್ಸಿರುವುದು ಬರೀ ಸೈದ್ಧಾಂತಿಕವಾಗಿ ಅಲ್ಲ. ಅವುಗಳ ಪ್ರಯೋಗದ ನೆಲೆಯಲ್ಲಿ ಮತ್ತು ರಾಜಕೀಯ ಸಿದ್ಧಾಂತಗಳ ದೋಷಗಳು ಕಂಡು ಬರುವುದು ಒಂದು ಆಡಳಿತ ವ್ಯವಸ್ಥೆ ಅದನ್ನು ಬಳಸಿಕೊಂಡು, ಆಡಳಿತ ನಡೆಸಿದಾಗ ಮಾತ್ರ.

ಈವರೆಗೆ ಚೀನಾ, ರಷ್ಯಾ, ಜರ್ಮನಿ, ಇಂಗ್ಲೇಂಡ್, ಅಮೇರಿಕಾ, ಇರಾನ್, ಇರಾಕ್, ಸೌದಿ ಅರೇಬಿಯಾ, ಭಾರತದಂತಹ ಅನೇಕ ರಾಷ್ಟ್ರಗಳಲ್ಲಿ ಆಡಳಿತ ವ್ಯವಸ್ಥೆಗಳು ಅನೇಕ ರೀತಿಯ ರಾಜಕೀಯ ಸಿದ್ಧಾಂತಗಳನ್ನು ಅಳವಡಿಸಿಕೊಂಡು ಆಡಳಿತ ನಡೆಸಿ, ಅವುಗಳ ಪರವಿರೋಧಗಳನ್ನು ಈಗಲೂ ಎದುರಿಸುತ್ತವೆ. ಕೆಲವೊಮ್ಮೆ ಯಶಸ್ವಿಯಾಗಿ, ಕೆಲವೊಮ್ಮೆ ವಿಫಲವಾಗಿರುವ ಉದಾಹರಣೆಗಳು ಉಂಟು.

"ಸಮಾಜವಾದ" ವನ್ನು ಮುಖ್ಯವಾಗಿ ಚೀನಾ, ಮತ್ತು ರಷ್ಯಾ, ಕ್ಯೂಬಾ ಆಡಳಿತ ವ್ಯವಸ್ಥೆಯಲ್ಲಿ ಬಳಸಿಕೊಳ್ಳಲಾಯಿತು. "ಸಮಾಜವಾದ'' ರೂಪುಗೊಂಡಿದ್ದು. ಅದು ಬೆಳೆದದ್ದು ಅಲ್ಲಿ ಬಂಡವಾಳ ಶಾಹಿಗಳನ್ನು ವಿರೋಧಿಸಿ, ಅಲ್ಲದೆ ಅದು ಕಾರ್ಮಿಕ ಚಳುವಳಿಯಾಗಿ ಬೆಳೆಯಿತು. ಅದು ಇಲ್ಲದವರ ಆಶಾಕಿರಣವಾಗಿ ಉಳ್ಳವರ ಶೋಷಣೆಯನ್ನು ಕೊನೆಗಾಣಿಸಲು ಪ್ರಯತ್ನಿಸಲು ರೂಪ ತಾಳಿತು. ಹಾಗೆಯೇ ಅದು ಕಾರ್ಮಿಕರನ್ನು ಒಂದೆಡೆಗೆ ಸೇರಿಸುವ ಸಂಘಟಿಸಲು ಕಾರಣವಾಯಿತು. ಇದರ ಮೂಲ ಬೇರುಗಳು ಮೊಳಕೆಯೊಡೆದದ್ದು ಬಂಡವಾಳ ಶಾಹಿಯಿಂದಲೇ ಎಂದರೆ ತಪ್ಪಾಗಲಾರದು. ಕಾಲ್ ರ್ಮಾರ್ಕ್ಸ್ ೯, ಲೆನಿನ್, ಏಂಗೆಲ್ಸ್ ರು ಸಮಾಜವಾದದ ಬುನಾದಿಯ ಮೇಲೆ ಸಂಘಟನೆ ಕಟ್ಟುವ, ಬೆಳೆಸುವ ದಿಕ್ಕಿನಲ್ಲಿ ತಮ್ಮ ಜೀವನವನ್ನು ಸಮರ್ಪಿಸಿದರು.

ಒಂದು ನಾಡಿನ ಎಲ್ಲ ಜನರಿಗೆ ಸಾಮಾಜಿಕ, ಆರ್ಥಿಕ , ರಾಜಕೀಯವಾದ ಎಲ್ಲ ಸಮಾನತೆಗಳನ್ನು ತರುವ ಉದ್ದೇಶದಿಂದ ಹೊರಟ ಸಮಾಜವಾದ ಅಲ್ಲಿನ ಆಡಳಿತ ವ್ಯವಸ್ಥೆಗಳು ಅಳವಡಿಸಿಕೊಂಡು ಅನೇಕ ವರ್ಷಗಳ ಕಾಲ ಆಡಳಿತ ನಡೆಸಿದವು. ಇದರಿಂದಾಗಿ ಜಗತ್ತಿನ ಉಳಿದ ರಾಷ್ಟ್ರಗಳಿಗಿಂತ 'ಸಮಾಜವಾದ' ಅಳವಡಿಸಿಕೊಂಡ ರಾಷ್ಟ್ರಗಳಲ್ಲಿ ಅದ್ಭುತವಾದ ಬೆಳವಣಿಗೆ, ಪ್ರಗತಿ ಕಂಡವು. ಹಾಗೆಯೇ ಆ 'ಸಮಾಜವಾದ'ದ ಬಗೆಗಿನ ಒಲವು ಇತ್ತೀಚಿಗೆ ಅಲ್ಲಿ ಕಡಿಮೆಯಾಗುತ್ತಿದೆ ಎಂಬ ಧ್ವನಿಗಳೂ ಕೇಳ ಬರುತ್ತಿದೆ.

ಸಮಾಜವಾದಕ್ಕೆ ವಿಶಿಷ್ಟತೆಯಿರುವ ಹಾಗೆ ಅದಕ್ಕೆ ಅದರದೇ ಆದ ದೌರ್ಬಲ್ಯವೂ ಕೂಡ ಇದೆ. ಇದು ಬಂಡವಾಳ ಶಾಹಿಗಳಿಗೆ ಎಂದೂ ಹಿತವಾಗುವುದಿಲ್ಲ, ಎಂಬುದು ಸರ್ವವಿದಿತ. ಇದು ಒಂದು ನಾಡಿನ ಸಾಮಾನ್ಯ ಜನರಿಗೆ, ಎಷ್ಟೇ ಅನುಕೂಲ ಒದಗಿಸಿದರೂ ಅದು ವ್ಯಕ್ತಿಯ ವ್ಯಕ್ತಿತ್ವಕ್ಕೆ ಹೆಚ್ಚಿನ ಒತ್ತು ನೀಡುವುದಲ್ಲದೆ, ವ್ಯಕ್ತಿಗೆ ಎಲ್ಲ ವಿಧವಾದ ಹಕ್ಕುಗಳನ್ನು ದೊರಕಿಸಿ ಕೊಡುತ್ತದೆ ಮತ್ತು ಖಾಸಗಿ ಆಸ್ತಿಯ ದುರುಪಯೋಗವನ್ನು ತಡೆಯುತ್ತದೆ. ಇಷ್ಟಲ್ಲದೆ,ಖಾಸಗಿ ಸಂಸ್ಥೆಗಳಲ್ಲಿ ಇರುವ ದಕ್ಷತೆ, ಶ್ರದ್ಧೆ ಸಾರ್ವಜನಿಕ

ಆಡಳಿತದಲ್ಲಿ ಇರುವುದಿಲ್ಲ. ಇದರಿಂದಾಗಿ ಸಹಜವಾಗಿಯೇ ಉತ್ಪಾದನೆಯಲ್ಲಿ ಪೈಪೋಟಿ ಕಡಿಮೆಯಾಗಿ ಅದಕ್ಷತೆ ತಲೆದೂರುತ್ತದೆ.

ಉತ್ಪಾದನೆಯ ಸಾಧನೆಗಳು ಸರ್ಕಾರದ ಹತೋಟಿಯಲ್ಲಿರುವುದರಿಂದ ರಾಜ್ಯದ ಅಧಿಕಾರ ಅಧಿಕವಾಗಿ ನೌಕಾರ ಶಾಹಿಯ ಪ್ರಭಾವ ಹೆಚ್ಚಾಗಿ ಭ್ರಷ್ಟಚಾರಕ್ಕೆ ಎಡೆ ಮಾಡಿಕೊಡುತ್ತದೆ. ಮತ್ತು ಎಲ್ಲಾ ಕೆಲಸಗಳನ್ನು ಸರ್ಕಾರವೇ ಮಡುವುದರಿಂದ ಇಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆಯಾಗುತ್ತದೆ. ಮುಖ್ಯವಾಗಿ ಗ್ರಾಹಕರ ಮಹತ್ವವನ್ನು ಕಳೆದು ಕೊಂಡು ಉತ್ಪಾದನೆಯ ಕ್ರಮ, ದಾರಿ ತಪ್ಪುವ ಸಾಧ್ಯತೆ ಹೆಚ್ಚಾಗಿರುತ್ತದೆ. ಇಂತಹ ಸಂದರ್ಭದಲ್ಲಿ ಗ್ರಹಕರ ಬೇಡಿಕೆಗಳು ಅನೇಕ ವೇಳೆ ಈಡೇರುವುದಿಲ್ಲ. ಶ್ರಮ ಜೀವಿಗಳಿಗೆ ಹೆಚ್ಚಿನ ಮಹತ್ವ ನೀಡುವುದರಿಂದ ಕಲೆ, ಸಂಸ್ಕೃತಿ, ಸಾಹಿತ್ಯ, ತತ್ವಶಾಸ್ತ್ರಗಳ ಬೆಳವಣಿಗೆ ಕುಂಠಿತವಾಗುತ್ತದೆ. ಈ ಎಲ್ಲಾ ಕಾರಣಗಳಿಂದ "ಸಮಾಜವಾದ" ಇತ್ತೀಚೆಗೆ ಆಡಳಿತ ವ್ಯವಸ್ಥೆಯಲ್ಲಿ ತನ್ನ ಮೊದಲಿನ ಪ್ರಾಬಲ್ಯ ಕಳೆದು ಕೊಳ್ಳತೊಡಗಿದೆ.

೧೮೧೫ರಲ್ಲಿ ಇಂಗ್ಲಂಡ್, ಜರ್ಮನಿ ಮತ್ತು ಸ್ವಿಡ್ಜರ್ ಲೆಂಡ್ ಗಳಲ್ಲಿ ತಲೆಯೆತ್ತಿದ ಉದಾರತಾವಾದ ಚಳುವಳಿ "ರಾಜಕೀಯ ಪಕ್ಷಗಳ" ಮೇಲೆ ಪ್ರಭಾವಬೀರಿ, ಮಧ್ಯಮ ವರ್ಗದ ಬೇಡಿಕೆ, ಅಶೋತ್ತರಗಳನ್ನು ಈಡೇರಿಸಲು ಪ್ರಯತ್ನಿಸಿತು. ಬಲ ಪ್ರಯೋಗವನ್ನು ವಿರೋಧಿಸಿ ರಾಜಶಾಹಿ ವ್ಯವಸ್ಥೆಯ ಅಧಿಕಾರವನ್ನು ಪ್ರಶ್ನಿಸುವ ಮತ್ತು ಜನರಿಗೆ ರಾಜಕೀಯ ಸ್ವಾತಂತ್ರ್ಯವನ್ನು ಮತ್ತು ಜನತಾ ಪರಮಾಧಿಕಾರವನ್ನು ನೀಡಬೇಕೆಂಬ ಹಿನ್ನೆಲೆಯಲ್ಲಿ ಅನೇಕ ರೀತಿಯ ಬದಲಾವಣೆಗಳನ್ನು ತಂದಿತು.

ಆ ಹೊತ್ತು ಅತ್ಯಂತ ಸಾಂಪ್ರದಾಯಿಕವಾದ, ಕೇವಲ ಮಧ್ಯಮ ವರ್ಗದವರ ಚಳುವಳಿಯಾಗಿದ್ದ, ಉದಾರತಾವಾದ ಚಳುವಳಿಯು ಇಂದು ಜಗತ್ತಿನಾದ್ಯಂತ, ಪ್ರಭಾವ ಬೀರುತ್ತಿದೆ. ಮಾನವ ಜನಾಂಗದ ಏಳಿಗೆಯೇ ಇದರ ಮುಖ್ಯ ಗುರಿಯಾಗಿತ್ತು. ಆದರೆ,ಮಿಲಿಟರಿ ಆಡಳಿತವನ್ನು ಇದು ತೀರ್ವವಾಗಿ ವಿರೋಧಿಸುತ್ತದೆ.

ರಾಜಕೀಯ ಸಿದ್ಧಾಂತಗಳಲ್ಲಿ ಉಳಿದ ಎಲ್ಲಾ ಸಿದ್ಧಾಂತಗಳಿಗಿಂತ "ಪ್ರಜಾಪ್ರಭುತ್ವ" ಕ್ಕೆ ಹೆಚ್ಚಿನ ಮಾನ್ಯತೆ ಮತ್ತು ವಿಶಿಷ್ಟತೆಯಿದೆ. "ಪ್ರಜಾಪ್ರಭುತ್ವ" ಆಡಳಿತ ವ್ಯವಸ್ಥೆ ಕೇವಲ ಇಂದಿನದಲ್ಲ. ಅದು ಪ್ರಾಚೀನ ಕಾಲದಿಂದಲೂ ಬೇರೆ, ಬೇರೆ ರೂಪಗಳಿಂದ ಅಸ್ತಿತ್ವದಲ್ಲಿತ್ತೆಂದು ಹೇಳಲಾಗಿದೆ. ಆದರೂ ಸಹ ಪ್ರಜಾಪ್ರಭುತ್ವ ಅಳವಡಿಸಿಕೊಂಡ ಎಲ್ಲಾ ದೇಶಗಳಲ್ಲೂ ಅದು ಯಶಸ್ವಿಯಾಗಿಲ್ಲ. ಆದರೆ ಇದರ ಪ್ರಾಮುಖ್ಯತೆ ಇರುವುದೆಂದರೆ,

ಮುಖ್ಯವಾಗಿ ಇದು ಪ್ರಜೆಗಳ ಉಸಿರು, ಮತ್ತು ಜೀವನಾಡಿಯಾಗಿರುವುದಾಗಿದೆ. ಇದು ಮುಖ್ಯವಾಗಿ ಬಹುಮತ ತತ್ವವನ್ನು ಪ್ರತಿಪಾದಿಸುತ್ತದೆ. ಒಂದು ರಾಷ್ಟ್ರದ ಪ್ರಗತಿ ಮತ್ತು ಆಗು-ಹೋಗುಗಳಿಗೆ-ಪ್ರಜೆಗಳೇ ಕಾರಣರು ಆಗಿರುತ್ತಾರೆ. ನಾಯಕತ್ವ ಎನ್ನುವುದು ಆನಾಡಿನ ಪ್ರಜೆಗಳ ತೀರ್ಮಾನವಾಗಿರುತ್ತದೆ. ಒಂದು ಸರ್ಕಾರವನ್ನು ತಮಗೆ ಇಷ್ಟಬಂದಂತೆ ನಿರ್ಮಿಸಬಹುದು. ಇಲ್ಲಿ ಪ್ರಜೆಗಳ ಅಪೇಕ್ಷೆಯೇ ಅಂತಿಮ ತೀರ್ಮಾನವಾಗಿರುತ್ತದೆ. ಅದರೂ ಕೂಡಾ ಇದರಲ್ಲಿಯೂ ಅನೇಕ ದೌರ್ಬಲ್ಯಗಳಿರುವುದು ಅಷ್ಟೇ ಸತ್ಯವಾಗಿರುತ್ತದೆ.

ಪ್ರಜಾಪ್ರಭುತ್ವವನ್ನು ಹೀನ ಸರಕಾರ ಎಂದು ಅರಿಸ್ಟಾಟಲ್ ಟೀಕಿಸಿದ್ದರೆ,ಕಾರ್ಲೈಲ್ ಅದನ್ನು "ಹುಚ್ಚರಶಾಸನ" ಎಂದು ಕರೆದಿದ್ದಾನೆ. "ಪ್ರಜಾಪ್ರಭುತ್ವವು ತುಂಬಾ ದರಿದ್ರರು, ವಿವೇಕಶೂನ್ಯರು, ಅಸಮರ್ಥರು ಮೊದಲಾದವರೇ ಅಧಿಕ ಸಂಖ್ಯೆಯಲ್ಲಿರುವ ಆಡಳಿತ ಪದ್ಧತಿ"- ಇದು ಲೆಕಿಯವರ ಟೀಕೆ. "ಪ್ರಜಾಪ್ರಭುತ್ವವು ಬುದ್ಧಿಹೀನರ ಮತ್ತು ಅಜ್ಞಾನಿಗಳ ಸರಕಾರವಾದ್ದರಿಂದ ಅದು ದೇಶದ ಬೌದ್ಧಿಕ ಮತ್ತು ವೈಜ್ಞಾನಿಕ ಪ್ರಗತಿಗೆ ಅಡಚಣೆಯಾಗಿರುವುದು."- ಎಂದು ಹೆಚ್.ಜಿ. ವೆಲ್ಸ್ ಮತ್ತು ಹೆನ್ರಿ ಮೇನ್ ಅವರ ಅಭಿಪ್ರಾಯ.

ಪ್ರಜಾಸತ್ತೆಯ ವೈಶಿಷ್ಟ್ಯವನ್ನು ಪ್ರಸಿದ್ಧ ಆಂಗ್ಲ ಚಿಂತಕ ಬರ್ಟ್ರಂಡ್ ರಸೆಲ್ ಹೀಗೆ ವ್ಯಕ್ತಪಡಿಸಿದ್ದಿದೆ."ವ್ಯಕ್ತಿಯು ಮುಖ್ಯವಲ್ಲ, ಸಂಸ್ಥಾನವೇ ಮುಖ್ಯವೆಂದು ಕಮ್ಯುನಿಸಮ್ ಬಗೆಯುತ್ತಿದ್ದರೆ, ಕೆಲ ಅಸಾಮಾನ್ಯ ವ್ಯಕ್ತಿಗಳು ಮಾತ್ರ ಮುಖ್ಯವೆಂದು ಫ್ಯಾಸಿಸಮ್ ಬಗೆಯುತ್ತಿದ್ದರೆ, ಶ್ರೀ ಸಾಮಾನ್ಯನು ಮುಖ್ಯವೆಂದು ಬಗೆಯುವುದು ಪ್ರಜಾಸತ್ತೆ ಮಾತ್ರ.

ಶ್ರೀ ಸಾಮಾನ್ಯನು ಮುಖ್ಯವೆಂಬ ನೆಲೆಯ ರಾಜಕೀಯ ವ್ಯವಸ್ಥೆಯು ಇದಾಗಿರುವುದರಿಂದ, ರಾಷ್ಟ್ರದ ಆಳಿಕೆಗೆ ಬೇಕಾಗುವ ಅಧಿಕಾರದ ಒಂದಂಶವು (ಅದೆಷ್ಟೇ ಅಲ್ಪಾಂಶವಿರಲಿ) ಪ್ರತಿ ಪ್ರಜೆಯ ಕೈಯಲ್ಲಿಯೂ ಇರುವುದು. ಅಂತೆಯೇ ರಾಷ್ಟ್ರದ ಆಳಿಕೆಯ ಬಗೆಗೆ ವೈಯಕ್ತಿಕವಾದ ಹೊಣೆಗಾರಿಕೆಯ ಒಂದಂಶವು ಪ್ರತಿ ಪ್ರಜೆಯ ಹೆಗಲ ಮೇಲೆ ಬಂದು ಕೂರುವುದು. ಆಳಿಕೆಯ ಬಗ್ಗೆ ತನಗಿರುವ ವೈಯಕ್ತಿಕವಾದ ಹೊಣೆಯ ಪ್ರಜ್ಞೆಯು ಪ್ರತಿಪ್ರಜೆಗೂ ಸದಾಕಾಲವೂ ಇರಲೇಬೇಕು. ಈ ಹೊಣೆಯಲ್ಲು ಅತಿ ಉಲ್ಲಾಸದಿಂದ, ನಿಷ್ಠೆಯಿಂದ ಪೂರ್ಣ ಪ್ರಜ್ಞೆಯಿಂದ ಮತ್ತು ತನ್ನ ಕೂಲಾಗುವಷ್ಟು ಪರಿಣಾಮಕಾರಿಯಾಗಿ ಪ್ರತಿ ಪ್ರಜೆಯೂ ನಿರ್ವಹಿಸಿಕೊಂಡು ಬರಲೇಬೇಕು.

ಪ್ರತಿ ಪ್ರಜೆಗೆ ಆಳಿಕೆಯ ಬಗ್ಗೆ ತನ್ನ ವೈಯಕ್ತಿಕವಾದ ಹೊಣೆಯ ಪ್ರಜ್ಞೆಯಷ್ಟೇ ಇದ್ದರೆ ಸಾಲದು. ಹೆರವರು ತಂತಮ್ಮ ಕೈಗೆ ಬಂದಿರುವ ಅಂಶಿಕವಾದ ಅಧಿಕಾರದ ಸದುಪಯೋಗವನ್ನೊ, ದುರುಪಯೋಗವನ್ನೋ ಮಾಡಿಕೊಂಡು ಬರುತ್ತಿರುವ ಬಗೆ, ತಂತಮ್ಮ ಹೆಗಲ ಮೇಲೆ ಬಂದು ಕೂತಿರುವ ಅಂಶಿಕವಾದ ಹೊಣೆಯನ್ನು ನಿರ್ವಹಿಸುತ್ತಿರುವ ಅಥವಾ ನಿರ್ವಹಿಸದಿರುವ ಬಗೆ ಮತ್ತು ಇವುಗಳ ಪರಿಣಾಮಗಳು-ಇಷ್ಟಲ್ಲದರ ಪ್ರಜ್ಞೆಯೂ ಬೇಕು. ಅರ್ಥಾತ್ ದೇಶದ ರಾಜಕೀಯದಲ್ಲಿಯ ಸಮಸ್ತ ಆಗು-ಹೋಗುಗಳ ತಿಳುವಳಿಕೆ ಮತ್ತು ನಿರಂತರ ಅಧ್ಯಯನ ಬೇಕು. ಎಲ್ಲ ಆಗು-ಹೋಗುಗಳಿಗೆ ತಕ್ಕಂತೆ ಸ್ಪಂದಿಸುತ್ತ ತನ್ನ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುವುದು ಬೇಕು. ಇಂಥ ಸ್ಪಂದನದಿಂದ ಮತ್ತು ಪ್ರತಿಕ್ರಿಯೆಯಿಂದ ಆಳಿಕೆಯ ಮೇಲೆ, ಆಡಳಿತದ ಮೇಲೆ ಪರಿಣಾಮವು ಆಗುತ್ತಿರಲ್ಲೂ ಬೇಕು. ಆಗುತ್ತಿರುವುದು ಸರ್ವಗೋಚರವಾಗುತ್ತಿರಲೂ ಬೇಕು. ಸರ್ವ ವಿದಿತವಾಗುತ್ತಿರಲೂ ಬೇಕು.

ಪ್ರಜೆಯು ಆಳಿಕೆ, ಆಡಳಿತಗಳ ಬಗ್ಗೆ ತನ್ನ ಸಮ್ಮತಿಯನ್ನು ಮತ್ತು (ಅದಕ್ಕಿಂತಲೂ ಮುಖ್ಯವಾಗಿ) ತನ್ನ ಅಸಮ್ಮತಿಯನ್ನು ಸ್ಪಷ್ಟಪಡಿಸಬೇಕು. ತನ್ನ ಅಸಮ್ಮತಿಯನ್ನಂತು ಮರೆಸಲೇಬಾರದು. ಅಸಮ್ಮತಿಯನ್ನು ರಾಜಾರೋಷವಾಗಿ ಕೆಚ್ಚೆದೆಯಿಂದ, ಬಿಚ್ಚು ಮನಸ್ಸಿನಿಂದ, ಮುಕ್ತಕಂಠದಿಂದ, ಕೆಲವೊಮ್ಮೆ ನಿಷ್ಠುರ ವಚನಗಳಿಂದ, ಕೆಲವೊಮ್ಮೆ ಆವೇಶ ಆಕ್ರೋಶಗಳಿಂದ ಸಹ (ಆದರೆ ಎಂದೂ ಹಿಂಸಾತ್ಮಕವಾಗಿ ಅಲ್ಲ) ವ್ಯಕ್ತಪಡಿಸುತ್ತಿರಲೇಬೇಕು." ನಿರಂತರ ಎಚ್ಚರಿಕೆಯೇ ಸ್ವಾತಂತ್ರ್ಯಕ್ಕೆ ತೆರಬೇಕಾದ ಬೆಲೆ"- ಎಂಬ ಅರ್ಥದ ಮಾತನ್ನು ಆಂಗ್ಲ ಕವಿಮಿಲ್ಟನ್ ಮೂರು ಶತಮಾನಗಳಷ್ಟು ಹಿಂದೆಯೇ ಹೇಳಿದ್ದು ತುಂಬಾ ಗಮನಾರ್ಹ.

ಪ್ರಜಾತಂತ್ರದ ಆರೋಗ್ಯಕ್ಕೆ ಮುಖ್ಯವಾದ ಜನಶಕ್ತಿಯು ಮೂಡುವುದು ಜನಾಭಿಪ್ರಾಯ ಮೂಡಿದಾಗ ಮಾತ್ರವೇ. ಕಮ್ಯುನಿಸ್ಟ್ ಅಥವಾ ಫ್ಯಾಸಿಸ್ಟ್ ರಾಷ್ಟ್ರದಲ್ಲಿಯ ಸಾಮನ್ಯನಿಗಿಂತ ಹೆಚ್ಚಾಗಿ ಪ್ರಜಾಸತ್ತಾತ್ಮಕ ರಾಷ್ಟ್ರದಲ್ಲಿಯ ಸಾಮಾನ್ಯನು ಆಳಿಕೆ, ಆಡಳಿತಗಳ ಬಗ್ಗೆ ವೈಯಕ್ತಿಕ ಹೊಣೆಯನ್ನು ಹೊಂದಿರುವುದರಿಂದಲೇ ಮತ್ತು ಪ್ರಜಾತಂತ್ರದಲ್ಲಿ ಜನಾಭಿಪ್ರಾಯವು ಮೂಡಿರುವುದು ಮುಖ್ಯವಾಗಿರುವುದರಿಂದಲೇ, ಪ್ರಜಾಸತ್ತೆಯಲ್ಲಿ ಶಿಕ್ಷಣದ ಪಾತ್ರವು ಬಹಳ ಮಹತ್ವವುಳ್ಳದ್ದು. ಆಳಿಕೆ ಆಡಳಿತಗಳ ಬಗ್ಗೆ ಪ್ರಜೆಯ ವೈಯಕ್ತಿಕ ಹೊಣೆಯ ಪ್ರಜ್ಞೆಯನ್ನು ಅವನಲ್ಲಿ ಕೆರಳಿಸಿ, ಅರಳಿಸಿ, ಬೆಳೆಯಿಸಿ, ಅವನು ಪ್ರಜಾಪ್ರಭುತ್ವಕ್ಕೆ ತಕ್ಕವಂತನಾಗುವಂತೆ ಮಾಡಬೇಕು.

ನಮ್ಮಲ್ಲಿ ಪತ್ರಿಕೆಗಳಿಗೆ ಪತ್ರ ಬರೆಯುವವರಲ್ಲಿ "ಸ್ವಯಂವರದ ಸಂದರ್ಭದಲ್ಲಿ ಸೀತೆಯ ವಯಸ್ಸೆಷ್ಟಾಗಿತ್ತು"? ಅಥವಾ "ಕವಿ ಮುದ್ದಣ ಸ್ಥಾನಿಕ ಬ್ರಾಹ್ಮಣನಾಗಿದ್ದನೆ"? ಅಥವಾ "ಮಧ್ವಾಚಾರ್ಯರಿಗೆ ಸೋದರಿಯಿದ್ದರೆ"? ಎಂಬಂಥ ವಿಷಯಗಳ ಕುರಿತು ಬರೆಯುವವರು ಇರುವಷ್ಟು ಆಳಿಕೆ, ಆಡಳಿತಗಳ ಕುರಿತು ಬರೆಯುವವರು ಇರುವುದಿಲ್ಲ.

ನಮ್ಮಲ್ಲಿ ಆಕಾಶವಾಣಿಯು ಸರಕಾರದ ಸೆರೆಯಲ್ಲಿದೆ. ಆದ್ದರಿಂದ ಆಳಿಕೆ, ಆಡಳಿತಗಳ ಕುರಿತು ಆಕಾಶವಾಣಿಗೆ ಪತ್ರ ಬರೆಯುವ ರೂಢಿ ಇರಲ್ಲಿಲ್ಲ. "ಭಾನುವಾರದ ಯಕ್ಷಗಾನ ಕಾರ್ಯಕ್ರಮ ಚೆನ್ನಾಗಿತ್ತು ಮಂಗಳವಾರದ ನಾಟಕ ಬರೇ ಕಳಪೆ" -ಎಂದೆನ್ನುವಂಥ 'ನಿರಪಾಯ'ದ ಪತ್ರಗಳನ್ನು ಮಾತ್ರ ಆಕಾಶವಾಣಿಗೆ ಬರೆಯಬಹುದಾಗಿದೆ. ದೂರದರ್ಶನವೂ ಸರಕಾರದ ಸೆರೆಯಲ್ಲೇ ಇದೆ. ಶ್ರೀ.ವಿ.ಪಿ.ಸಿಂಗ್ ರವರು ಇವುಗಳ ಸ್ವಾಯತ್ತತ್ತೆಯ ಬಗ್ಗೆ ಭಾರತದ ಪ್ರಧಾನಿಯಾಗಿದ್ದಾಗ ನಿರ್ಧಾರ ತೆಗೆದುಕೊಂಡಿದ್ದರು. ಆದರೆ ನಿರ್ಧಾರ ಕಾರ್ಯರೂಪಕ್ಕೆ ಬರುವ ಮೊದಲು ಇವರ ಸರಕಾರ ಬಿದ್ದು ಹೋದದ್ದು ಒಂದು ದುರಂತ.

ಭಾರತದಂತ ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಜನಾಭಿಪ್ರಾಯದ ಕೊರತೆಗೆ ಇನ್ನೊಂದು ಕಾರಣವೆಂದರೆ, ಬುದ್ಧಜೀವಿಗಳು, ವಿದ್ಯಾವಂತರು ಎಂದು ಕರೆಯಲ್ಪಡುವ ಮಂದಿ ಜನಾಭಿಪ್ರಾಯವು (ನಿರಕ್ಷರರ ಮತ್ತು ಸಾಕಷ್ಟು ವಿದ್ಯಾವಂತರಲ್ಲದವರ ಬಾಹುಳ್ಯದಿಂದಾಗಿ) ಮೂಡಿಬಾರದ ನಾಡಿನಲ್ಲಿ ಅದರ ನಿರ್ಮಾಣವಾಗಬೇಕು. ಈ ನಿರ್ಮಾಣವನ್ನು 'ಬುದ್ಧಿಜೀವಿ'ಗಳೆಂದೋ 'ವಿದ್ಯಾವಂತ'ರೆಂದೋ ಕರೆಯಲ್ಪಡುವ ಮಂದಿ ಮಾಡಬೇಕು. ಆದರೆ ದುರ್ದೈವವಶಾತ್ ಈ ಮಂದಿಯಲ್ಲಿ ಹಲವರು ರಾಜಕೀಯಕ್ಕೆ ಬೆನ್ನು ಹಾಕಿರುವವರು. ಉಳಿದವರು ಗಣ್ಯರನ್ನು ವಿಮರ್ಶಾರಹಿತವಾಗಿ ಹೊಗಳುವವರು ಮತ್ತು ಪೂಜಿಸುವವರು.

ಮೂಲಭೂತವಾಗಿ ಪ್ರಜಾಪ್ರಭುತ್ವ ಒಂದು ನಾಡಿನ ಸರ್ವತೋಮುಖ ಬೆಳವಣಿಗೆಗೆ ಎಷ್ಟು ಪೂರಕವೋ, ಹಾಗೆಯೇ ಮಾರಕವೂ ಆಗಬಲ್ಲದು, ಎಂಬುದಕ್ಕೆ ಅನೇಕ ಉದಾಹರಣೆಗಳು ನಮ್ಮ ಕಣ್ಣಮುಂದಿವೆ. ಇಂಗ್ಲೇಂಡ್, ಭಾರತ; ಎರಡು ದೇಶಗಳಲ್ಲಿ ಪ್ರಜಾಪ್ರಭುತ್ವವನ್ನು ಆಡಳಿತ ವ್ಯವಸ್ಥೆಯಲ್ಲಿ ರೂಢಿಸಿಕೊಂಡಿದ್ದರೂ ಒಂದೇ ರೀತಿಯಾಗಿ ಪ್ರಗತಿ ಹೊಂದಿಲ್ಲ. ಅದಕ್ಕೆ ಕಾರಣಗಳು ಕೂಡ ಅನೇಕ.

ಜನರ ಮತ ಚಲಾವಣೆಯ ಆಧಾರದ ಮೇಲೆ ಅಸ್ತಿತ್ವ ಪಡೆಯುವ 'ಪ್ರಜಾಪರಭುತ್ವ' ಆಡಳಿತ ವ್ಯವಸ್ಥೆಯು, ಜನರೇ ನಿರ್ಮಿಸಿಕೊಂಡ ಪ್ರಭುತ್ವವಾಗಿದೆ. ಆದರೆ, ಬಹುಪಾಲು ಸಾಮಾನ್ಯ ಜನರಿಗೆ ಆಡಳಿರತದ ಬಗ್ಗೆ ಅಭಿಪ್ರಾಯ, ಅಭಿವೃದ್ಧಿಯ ಬಗ್ಗೆ ಸ್ಪಷ್ಟ ತಿಳುವಳಿಕೆಯಿಲ್ಲದಿದ್ದಾಗ ಆ ಸರ್ಕಾರ ಯಶಸ್ವಿಯಾಗುವ ಸಾಧ್ಯತೆಗಳು ಬಹಳ ಕಡಿಮೆ ಉದಾ: ಭಾರತ, ಇಲ್ಲಿ ಬಹುಪಾಲು ಸಾಮನ್ಯ ಜನರು ಅನಕ್ಷರಸ್ಥರು ಮತ್ತು ಆಳುವವರ್ಗದ ಆಶೋತ್ತರಗಳ ಅರಿವಿಲ್ಲದ್ದರಿಂದ ಇವರ ಹಕ್ಕುಗಳು ದುರುಪಯೋಗವಾಗಿರುವುದೇ ಹೆಚ್ಚು. ಕಳೆದ ೬೫ ವರ್ಷಗಳಿಂದಲೂ ಜನರೇ ಆರಿಸಿರುವ ಆಡಳಿತದ ಪ್ರತಿನಿಧಿಗಳಿಂದ ಎಲ್ಲ ಸಮಸ್ಯೆಗಳು ಬಗೆಹರಿಯದೆ, ಹಳೆಯದರ ಜೊತೆಗೆ ಹೊಸ ಸಮಸ್ಯೆಗಳು ಸೇರ್ಪಡೆಯಾಗುತ್ತಿವೆ.

'ಪ್ರಜಾಪ್ರಭುತ್ವ' ಆಡಳಿತ ವ್ಯವಸ್ಥೆಯಲ್ಲಿ ವಿಳಂಬತೆ, ದುಂದುಗಾರಿಕೆ, ಮುಖ್ಯವಾಗಿ ರಾಷ್ಟ್ರದ ಹಿತ ಕಾಪಾಡುವಲ್ಲಿ ವಿಫಲವಾಗಿರುವುದೇ ಹೆಚ್ಚು. ಇದಕ್ಕಿಂತ ಮುಖ್ಯವಾಗಿ ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯಲ್ಲಿ ಪಕ್ಷಕ್ಕೆ ಪ್ರಾಧಾನ್ಯತೆ ಕೊಟ್ಟಷ್ಟು, ಜನರ ಹಿತದ ಬಗ್ಗೆ ಗಮನ ನೀಡುವುದಿಲ್ಲ. ಯಾಕೆಂದರೆ, ಭಾರತದಲ್ಲಿ ವ್ಯಕ್ತಿಗಿಂತ ಪಕ್ಷವೇ ಮುಖ್ಯವಾಗಿ, ಒಂದು ಪಕ್ಷವೇ ಹೆಚ್ಚು ಕಾಲ ಆಡಳಿತ ನಡೆಸಿ, ವಂಶ ಪಾರಂಪರ್ಯ ಆಡಳಿತ ವ್ಯವಸ್ಥೆಗೂ ಇದು ದಾರಿ ಮಾಡಿಕೊಟ್ಟಿದೆ. ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯಲ್ಲಿ ಸರ್ಕಾರದ ಪ್ರತಿನಿಧಿಗಳ ಸಂಖ್ಯೆ ಹೆಚ್ಚಾಗಿದ್ದು, ಬಹುಜನರ ದಬ್ಬಾಳಿಕೆ ಅಧಿಕವಾಗುತ್ತದೆ. ಒಮ್ಮತದ ಅಭಿಪ್ರಾಯವೂ ಕಡಿಮೆ ಇದ್ದು, ವಿರೋಧ ಅಭಿಪ್ರಾಯಗಳು ಯಾವಾಗಲೂ ಇದ್ದೇ ಇರುತ್ತವೆ.

ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯಲ್ಲಿ, ಚುನಾವಣೆಯಿಂದ ಅಧಿಕಾರಕ್ಕೆ ಬರುವುದರಿಂದ, ಇಲ್ಲಿ ಕೇವಲ ಭರವಸೆಗಳ ಮಹಾಪೂರವೇ ಹರಿದು, ಅಭಿವೃದ್ಧಿ ಕಾರ್ಯಗಳು ಕುಂಠಿತವಾಗುತ್ತವೆ. ಗೆಲ್ಲುವುದೇ ಮುಖ್ಯಗುರಿಯಾಗಿ, ಸಾಮಾಜಿಕ ಪ್ರಗತಿ ಎನ್ನುವುದು ಬರೀಮಾತಾಗುತ್ತದೆ. ಹೀಗಾಗಿ ಅನಕ್ಷರಸ್ಥರು, ಬಡವರು, ಹೆಚ್ಚಿರುವ ಭಾರತದಂತಹ ದೇಶಗಳಿಗೆ ಪ್ರಜಾಪ್ರಭುತ್ವ ಎಷ್ಟು ಮುಖ್ಯ ಎಂಬುದು ಪ್ರಶ್ನೆಯಾಗುತ್ತದೆ.

ಯಾವುದೇ ರಾಜಕೀಯ ಸಿದ್ಧಾಂತವನ್ನು, ಯಾವದೇಶದ ಆಡಳಿತ ವ್ಯವಸ್ಥೆಯೇ ಬಳಸಿಕೊಳ್ಳಲಿ, ಅಲ್ಲಿನ ಆಡಳಿತಶಾಹಿಯಲ್ಲಿ ಸ್ವಾರ್ಥದುರಾಚಾರ,ಭ್ರಷ್ಟಚಾರ, ಲಂಚ, ದೌರ್ಜನ್ಯಗಳು, ಅಧಿಕವಾದರೆ, ತಾನು ಬಳಸಿಕೊಂಡ ರಾಜಕೀಯ ಸಿದ್ಧಾಂತವೆ ಬರೀಶಾಸ್ತ್ರೀಕವಾಗಿಯಷ್ಟೇ ಇರುತ್ತದೆ. ಅದು ಪ್ರಯೋಗಿಕವಾಗಿ ಯಶಸ್ವಿಯಾಗುವುದಿಲ್ಲ. ರಾಜಕೀಯ, ಸಾಮಾಜಿಕ, ಆರ್ಥಿಕ ಸಮಾನತೆಗಳನ್ನು ಒಂದು ಆಡಳಿತ ವ್ಯವಸ್ಥೆ

ಒದಗಿಸಿಕೊಡಬೇಕು. ದೇಶದ ಎಲ್ಲ ಜನರಿಗೆ ಮೂಲಭೂತ ಅವಶ್ಯಕತೆಗಳಾದ ಅನ್ನ. ನೀರು, ಆರೋಗ್ಯ, ಶಿಕ್ಷಣ, ಒದಗಿಸುವಲ್ಲಿ ಪ್ರಯತ್ನಿಸಬೇಕು. ಆಗ ಮಾತ್ರ ಆಡಳಿತ ವ್ಯವಸ್ಥೆ ಬಳಸಿಕೊಳ್ಳುವ ಯಾವುದೇ ರಾಜಕೀಯ ಸಿದ್ಧಾಂತ ಯಶಸ್ವಿಯಾಗುತ್ತದೆ. ಅಲ್ಲದೇ ಆ ದೇಶವೂ ಪ್ರಗತಿಯಲ್ಲಿ ಮುಂದುವರೆಯುತ್ತದೆ.

ಆದರೆ ದೋಷರಹಿತವಾದ ಸರಕಾರ ಯಾವುದೂ ಇಲ್ಲ. ಪ್ರತಿಯೊಂದು ಸರಕಾರ ಪದ್ಧತಿಯಲ್ಲೂ ಒಂದಲ್ಲ ಒಂದು ದೋಷ ಇದ್ದೇ ಇರುತ್ತದೆ. ಇದಕ್ಕೆ ಪ್ರಜಾಪ್ರಭುತ್ವ ಹೊರತಾಗಿಲ್ಲ. ಪ್ರಜಾಪ್ರಭುತ್ವದಲ್ಲಿ ದೋಷಗಳಿರುವುದೇನೋ ನಿಜ. ಆದರೆ ಇತರ ಸರಕಾರ ಪದ್ಧತಿಯಲ್ಲಿ ಕಂಡು ಬರುವ ದೋಷಗಳಿಗಿಂತ ಪ್ರಜಾಸತ್ತಾತ್ಮಕ ಸರಕಾರದಲ್ಲಿರುವ ದೋಷಗಳು ಕಡಿಮೆ ಎಂದು ಹೇಳಬಹುದು. ಪ್ರಜಾಪ್ರಭುತ್ವದ ದೋಷಗಳನ್ನು ಪರಿಶೀಲಿಸಿದಲ್ಲಿ ಅವು ಕೇವಲ ಮಾನವೀಯ ಎಂಬುದು ಸ್ಪಷ್ಟವಾಗುವುದು ತಪ್ಪಿರುವುದು ಪ್ರಜಾಪ್ರಭುತ್ವದಲ್ಲಲ್ಲ. ಅದನ್ನು ನಡೆಸುತ್ತಿರುವ ಜನರಲ್ಲಿ ಈ ಮಾನವೀಯ ದೋಷಗಳಿಗೆ ಪ್ರಜಾಪ್ರಭುತ್ವವನ್ನೇ ದೂಷಿಸುವುದು ಸರಿಯಲ್ಲ. ಬ್ರೈಸ್ ಹೇಳಿರುವಂತೆ, ಇವುಗಳು ಪರಿಹರಿಸಲಾಗದ ದೋಷಗಳೇನೂ ಅಲ್ಲ. ಈ ದೋಷಗಳನ್ನು ಹೋಗಲಾಡಿಸಿದಲ್ಲಿ ಪ್ರಜಾಪ್ರಭುತ್ವ ಯಶಸ್ವಿಯಾಗುವುದರಲ್ಲಿ ಸಂದೇಹವಿಲ್ಲ. ಈ ದೋಷಗಳನ್ನು ಹೋಗಲಾಡಿಸುವುದಕ್ಕೆ ಬದಲಾಗಿ ಪ್ರಜಾಪ್ರಭುತ್ವವೇ ಬೇಡ. ಎಂದರೆ ಅದಕ್ಕಿಂತ ಶ್ರೇಷ್ಠವಾದ ಸರಕಾರವನ್ನು ಸ್ಥಾಪಿಸಬೇಕಾಗುತ್ತದೆ. ಆದರೆ ಪ್ರಜಾಪ್ರಭುತ್ವವನ್ನು ಬಿಟ್ಟರೆ ಅದಕ್ಕಿಂತ ಉತ್ತಮ ಸರಕಾರ ಪದ್ಧತಿ ಬೇರೊಂದಿಲ್ಲ. ಮನುಷ್ಯನ ಅನುಭವಕ್ಕೆ ಬಂದಿರುವ ಸರಕಾರ ಪದ್ಧತಿಗಳಲ್ಲಿ ಪ್ರಜಾಸತ್ತಾತ್ಮಕ ಸರಕಾರ ಪದ್ಧತಿಯೆ ಅತ್ಯುತ್ತಮವಾದದ್ದು. ಇದಕ್ಕಿಂತ ಸಮರ್ಪಕವಾದ ಸರಕಾರದ ಪದ್ಧತಿಯನ್ನು ಮನಷ್ಯ ಇನ್ನು ಕಂಡು ಹಿಡಿದಿಲ್ಲ.

ಹೀಗಾಗಿ ರಾಜಕೀಯ ಸಿದ್ಧಾಂತಗಳಿಗೆ ತಮ್ಮದೇ ಗುಣದೋಷಗಳು, ಇರುವ ಹಾಗೆ ಪ್ರತಿಯೊಂದು ಆಡಳಿತ ವ್ಯವಸ್ಥೆಗೂಗುಣ-ದೋಷಗಳಿವೆ. ಒಂದು ರೀತಿಯಲ್ಲಿ ಆಡಳಿತ ವ್ಯವಸ್ಥೆ ಮತ್ತು ರಾಜಕೀಯ ಸಿದ್ಧಾಂತಗಳು, ಒಂದೇ ನಾಣ್ಯದ ಎರಡು ಮುಖಗಳು, ಎಂದು ಹೇಳಿದರೆ ತಪ್ಪಾಗಲಾರದು.

# ಅಧ್ಯಾಯ-೩

# ಭಾರತದ ಪ್ರಜಾಪ್ರಭುತ್ವ ಮತ್ತು ಅಭಿವೃದ್ಧಿಯನ್ನು ಕುರಿತು ನಮ್ಮ ಪ್ರಮುಖ ನಾಯಕರ ಚಿಂತನೆಗಳು

ಭಾರತ ಈವರೆಗೆ ಅನೇಕ ರೀತಿಯ ಆಡಳಿತ ಮತ್ತು ಅನೇಕ ಜನರ ಆಡಳಿತಕ್ಕೆ ಒಳಪಟ್ಟಿದೆ. ಭಾರತವನ್ನು ದೇಶಿಯರು ಹಾಗೂ ವಿದೇಶಿಯರು ಆಳಿದ್ದಾರೆ. ಭಾರತವು ಮುಸ್ಲಿಮರು, ಡಚ್ಚರು, ಪೋರ್ಚುಗೀಸರು, ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿದೆ. ಆದರೆ ಭಾರತದ ಬಹುಭಾಗ ಪ್ರದೇಶವನ್ನು ಆಳಿದ ವಿದೇಶಿಯರಲ್ಲಿ ಬ್ರಿಟಿಷರು ಮುಖ್ಯರಾಗಿದ್ದಾರೆ. ಇದಕ್ಕಿಂತ ಮೊದಲು ಭಾರತ ಅನೇಕ ವಿಭಾಗಗಳಾಗಿ, ಆಡಳಿತಕ್ಕೆ ಒಳಪಟ್ಟಿತ್ತು. ಮುಖ್ಯವಾಗಿ ಅದು ರಾಜಶಾಹಿ ವ್ಯವಸ್ಥೆಯ ಆಡಳಿತಕ್ಕೆ ಒಳಪಟ್ಟಿತ್ತು.

ಈ ರಾಜಶಾಹಿ ಆಡಳಿತ ವ್ಯವಸ್ಥೆ ವಂಶಪಾರಂಪರ್ಯವಾಗಿತ್ತು. ಕೆಲವು ಬಾರಿ ಪರಾಕ್ರಮವುಳ್ಳ ಯುದ್ಧ ಚತುರನಾದ, ಧೈರ್ಯಶಾಲಿಯೊಬ್ಬನ ಆಡಳಿತಕ್ಕೆ ಒಳಪಟ್ಟಿತ್ತು. ಇಲ್ಲಿ ಬೌದ್ಧಿಕ ಶಕ್ತಿಗಿಂತ ದೈಹಿಕಶಕ್ತಿಯೇ ಮುಖ್ಯವಾಗಿರುತ್ತಿತ್ತು. ಒಬ್ಬ ಚಕ್ರವರ್ತಿಗೆ ಅನೇಕ ಸಾಮಂತ ರಾಜರಿರುತ್ತಿದ್ದರು. ರಾಜನಿಗೆ ಸಲಹೆಗಾರಾಗಿ ಮಂತ್ರಿಮಂಡಲವಿರುತ್ತಿತ್ತು. ಪ್ರಜೆಗಳಿಗೆ ರಾಜನೇ ಪ್ರತ್ಯಕ್ಷ ದೇವನಾಗಿರುತ್ತಿದ್ದ. ಇಲ್ಲಿ ರಾಜನ ನಿರ್ಧಾರವೇ ಅಂತಿಮ ನಿರ್ಣಯವಾಗಿರುತ್ತಿತ್ತು. ಈ ರಾಜಶಾಹಿ ಆಡಳಿತ ವ್ಯವಸ್ಥೆ ಪಲ್ಲಟಗೊಂಡಿದ್ದು, ಬ್ರಿಟಿಷರ ಆಕ್ರಮಣದಿಂದ, ಬ್ರಿಟಿಷರು ಹಂತ, ಹಂತವಾಗಿ, ಭಾರತದ ಭೂ ಪ್ರದೇಶಗಳನ್ನು ಆಕ್ರಮಿಸಿಕೊಂಡು ಆಡಳಿತ ನಡೆಸಿದರು. ಸತತವಾಗಿ ಭಾರತವನ್ನು ಸುಮಾರು ಇನ್ನೂರು ವರ್ಷಗಳ ಕಾಲ ಆಳಿದರು. ಹೀಗಾಗಿ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಹಾಗೂ ಆಡಳಿತಾತ್ಮಕವಾಗಿ ಪ್ರಭಾವ ಬೀರಿದರು. ಹೀಗಾಗಿ ಬ್ರಿಟಿಷರು ನಡೆಸಿದ ಆಡಳಿತದ ವ್ಯವಸ್ಥೆ ಭಾರತಕ್ಕೆ ಮಾದರಿಯಾಯಿತು.

ಸ್ವಾತಂತ್ರ್ಯನಂತರ ಭಾರತದಲ್ಲಿ ಪ್ರಜಾಸತ್ತಾತ್ಮಕ ಆಡಳಿತ ವ್ಯವಸ್ಥೆಯನ್ನು ಜಾರಿಗೊಳಿಸಲಾಯಿತು. ಈ ಪ್ರಜಾಸತ್ತಾತ್ಮಕ ಆಡಳಿತ ವ್ಯವಸ್ಥೆ ಜನರನ್ನು ರಾಜಕೀಯದಲ್ಲಿ ನೇರವಾಗಿ ಭಾಗವಹಿಸಲು ಅವಕಾಶ ಕಲ್ಪಿಸಿತು. ಈ ಆಡಳಿತ ವ್ಯವಸ್ಥೆಯಲ್ಲಿ ಪಾಲ್ಗೊಳ್ಳಲು ಸಿದ್ಧಾಂತಗಳನ್ನೊಳಗೊಂಡ ಅನೇಕ ರೀತಿಯ ಪಕ್ಷಗಳು ಹುಟ್ಟಿಕೊಂಡವು. ಕಾಂಗ್ರೆಸ್ ಪಕ್ಷ ಸ್ವಾತಂತ್ರ್ಯ ಪೂರ್ವದಲ್ಲಿಯೇ ಸ್ಥಾಪಿತಗೊಂಡು ಆ ಹೊತ್ತಿಗೆಯೇ ಬಹುಪಾಲು

ಜನಮನ್ನಣೆಯನ್ನು ಗಳಿಸಿತ್ತು.

ಇಷ್ಟಲ್ಲದೇ ಅನೇಕ ಪಕ್ಷಗಳು ಹುಟ್ಟಿಕೊಂಡವು. ನಮ್ಮ ದೇಶದ ಪಕ್ಷ ಪದ್ಧತಿಯು, ಬಹುಪಕ್ಷ ಪದ್ಧತಿಯಾಗಿದೆ. ಚುನಾವಣೆಯಲ್ಲಿ ಬಹುಮತ ಪಡೆದ ಪಕ್ಷವು ಆಡಳಿತದ ಸೂತ್ರವನ್ನು ಹಿಡಿಯುತ್ತದೆ. ಆ ಪಕ್ಷ ಪ್ರಜಾಸತ್ತಾತ್ಮಕ ರೀತಿಯಲ್ಲಿ ಆಡಳಿತವನ್ನು ನಡೆಸುತ್ತದೆ. ಪ್ರಜಾಪ್ರಭುತ್ವದ ಪ್ರಮುಖ ಅಂಗಗಳು ಮೂರು. ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗ. ಈ ಮೂರು ಅಂಗಗಳು ಪ್ರಜಾಪ್ರಭುತ್ವದ ಆಧಾರಸ್ತಂಭಗಳು. ಇವುಗಳ ಕಾರ್ಯದಕ್ಷತೆ, ಯಶಸ್ಸು, ಮತ್ತು ಜನರ ಕಲ್ಯಾಣ, ಆಡಳಿತ ವ್ಯವಸ್ಥೆಯ ಸಫಲತೆಗೆ ಕಾರಣವಾಗಿರುತ್ತವೆ. ಈ ಮೂರು ಅಂಗಗಳಿಗೆ ಪೂರಕ ಸಂಬಂಧಗಳಿದ್ದರೂ, ಅವು ಪ್ರತ್ಯೇಕ ಅಂಗಗಳೇ ಆಗಿವೆ. ಈ ಮೂರು ಅಂಗಗಳು ಪ್ರಜಾಸತ್ತಾತ್ಮಕವಾದ ಸಂವಿಧಾನದ ಬದ್ಧತೆಗೆ ಅನುಗುಣವಾಗಿ ಕಾರ್ಯನಿರ್ವಹಿಸುತ್ತವೆ. ಈ ಮೂರು ಅಂಗಗಳ ಕಾರ್ಯದಲ್ಲಿ ದೋಷವುಂಟಾದರೆ, ಪ್ರಜಾಪ್ರಭುತ್ವ ಯಶಸ್ವಿಯಾಗುವುದಿಲ್ಲ. ಇಲ್ಲಿ ಪ್ರಾಮಾಣಿಕತೆ, ದಕ್ಷತೆ, ಕರ್ತವ್ಯ ನಿಷ್ಠೆ ಮುಖ್ಯವಾಗುತ್ತದೆ. ಈ ಮೂರು ಅಂಗಗಳ ಕಾರ್ಯಗಳು, ಒಂದು ದೇಶದ ಜನರನ್ನು ಅಭಿವೃದ್ಧಿ ಪಥದತ್ತ ನಡೆಸಲು ಸಾಧ್ಯ.

ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯ ಜೀವನಾಡಿ ಪ್ರಜೆಗಳು. ಪ್ರಜೆಗಳಿಂದ ಆಡಳಿತ ವ್ಯವಸ್ಥೆ ಚುನಾವಣೆಯ ಮೂಲಕ ಐದು ವರ್ಷಕ್ಕೊಮ್ಮೆ ರಚಿತವಾಗುತ್ತದೆ. ಜಾರಿಗೆ ಬಂದ ಆಡಳಿತ ವ್ಯವಸ್ಥೆಯು ಪ್ರಜಾಪ್ರಭುತ್ವದಲ್ಲಿ ಬಹುಪಾಲು ಪಕ್ಷ ಕೇಂದ್ರಿತವಾಗಿರುತ್ತದೆ. ಇದು ಜನರ ಆಶೋತ್ತರಗಳಿಗೆ ಸ್ಪಂದಿಸದಿದ್ದಾಗ, ಅಸಮಾನತೆ, ಹಿಂಸೆ, ಅಸಮಾಧಾನಗಳಿಗೆ ಎಡೆಮಾಡಿ ಕೊಡುತ್ತದೆ. ಹೀಗಾಗಿ ಗುಂಪುಗಾರಿಕೆ ಬೆಳೆಯುತ್ತದೆ. ಇದರಿಂದ ಒಟ್ಟು ಆಡಳಿತ ವ್ಯವಸ್ಥೆ ಸಡಿಲಗೊಳ್ಳುವ ಸಾಧ್ಯತೆ ಹೆಚ್ಚು. ಹೀಗಾದಾಗ ಆಡಳಿತ ರೂಢ ರಾಜಕೀಯ ಪಕ್ಷದ ಬಗ್ಗೆ ಜನರಲ್ಲಿ ನಂಬಿಕೆ ಕಡಿಮೆಯಗುತ್ತದೆ. ರಾಜಕೀಯ ಪಕ್ಷಗಳ ಪೈಪೋಟಿ ಹೆಚ್ಚುತ್ತದೆ. ಇದರಿಂದ ಯಾವುದೇ ಬಹುಮತ ಪಡೆದ ರಾಜಕೀಯ ಪಕ್ಷ ಎಲ್ಲ ಜನರ ಅಭಿಪ್ರಾಯದಿಂದ ಆಡಳಿತ ನಡೆಸುವುದಿಲ್ಲ. ಅದು ಕೆಲವು ಗುಂಪುಗಳ ವರ್ಗ ಹಿತಾಸಕ್ತಿಯನ್ನು ಮಾತ್ರ ಕಾಪಾಡುತ್ತದೆ. ಇದರಿಂದ ಪ್ರದೇಶ, ಜನಾಂಗ, ಜಾತಿ ಮತ್ತು ಧಾರ್ಮಿಕ ಸಮಸ್ಯೆಗಳು ಬಗೆಹರಿಯಲಾರದೆ, ಉಳಿಯುತ್ತವೆ. ಆದುದರಿಂದ ಯಾವುದೇ ದೇಶದ ಅಭಿವೃದ್ಧಿಗೆ ಆ ದೇಶದ ಸಂಪನ್ಮೂಲಗಳ ಬಳಕೆ ಮತ್ತು ಹಂಚಿಕೆಯನ್ನು ಆಡಳಿತ ವ್ಯವಸ್ಥೆ ಸರಿಯಾದ ಕ್ರಮದಲ್ಲಿ ಮಾಡಿದಾಗ, ಸಾಧ್ಯವಾಗುತ್ತದೆ. ಈ ದೃಷ್ಟಿಯಿಂದ ಭಾರತದ ಆಡಳಿತ ವ್ಯವಸ್ಥೆಗೆ ತನ್ನದೇ ಆದ ವಿಶಿಷ್ಟತೆ ಇರುವ ಹಾಗೆ, ಅದರ ಸೈದ್ಧಾಂತಿಕ ಮತ್ತು ಪ್ರಾಯೋಗಿಕ ದೋಷಗಳು ಸಹ ಇವೆ.

ಭಾರತ ಇಡೀ ವಿಶ್ವದಲ್ಲಿ ಅತಿ ದೊಡ್ಡ ಪ್ರಜಾಪ್ರಭುತ್ವ ದೇಶ. ಪ್ರಜೆಗಳು ಸುಶಿಕ್ಷಿತರಾದಷ್ಟು ಪ್ರಜಾಪ್ರಭುತ್ವ ವ್ಯವಸ್ಥೆ ಒಳ್ಳೆಯ ರೀತಿಯ ಆಡಳಿತವನ್ನು ನೀಡುತ್ತದೆ. ಪ್ರಜಾಪ್ರಭುತ್ವದ ನಿಜವಾದ ಸಫಲತೆ ಗೊತ್ತಾಗುವುದು ಸುಶಿಕ್ಷಿತ ಜನರಿಂದ, ಜನರಿದ್ದಾಗ ಮಾತ್ರ. 'ಪ್ರಜಾಪ್ರಭುತ್ವದ ಯಶಸ್ಸು ಪ್ರಜಾಸಂಖ್ಯೆಯಲಿಲ್ಲ. ಪ್ರಜಾಪ್ರಜ್ಞೆಯಲ್ಲಿದೆ, ಪರಿಜ್ಞಾನದಲ್ಲಿದೆ' ಎಂಬುದಾಗಿ ತತ್ವವೇತ್ತನಾದ ಎಡ್ಮಂಡ್ ಬರ್ಕ್ ಹೇಳಿದ್ದಾನೆ. ಪ್ರಜಾಪ್ರಜ್ಞೆಯನ್ನು ಪರಿಜ್ಞಾನವನ್ನು ಅರಳಿಸಲು ಯೋಗ್ಯವಾದ ಸಾಧನವೆಂದರೆ, ಶಿಕ್ಷಣ, ಅನಕ್ಷರತೆ ಪ್ರಜಾಪ್ರಭುತ್ವದ ವೈರಿ, ಎಂದೇ ಹೇಳಬೇಕಾಗುತ್ತದೆ. ಅನಕ್ಷರತೆಯಿಂದ ಪ್ರಜಾಪ್ರಭುತ್ವ ಯಶಸ್ವಿಯಾಗಲಾರದು. ಪ್ರಜಾಪ್ರಭುತ್ವ ರಾಷ್ಟ್ರವಾದ ಭಾರತದಲ್ಲಿ ಅನಕ್ಷರತೆಯನ್ನು ಹೋಗಲಾಡಿಸಲು ಸತತ ಪ್ರಯತ್ನ ಮಾಡಲಾಗುತ್ತಿದೆ. ಭಾರತದಲ್ಲಿ ಪ್ರಜಾಪ್ರಭುತ್ವ ಭದ್ರವಾದ ನೆಲೆಯನ್ನು ಕಂಡಿದೆ. ಭಾರತ ಪ್ರಜಾಸತ್ತಾತ್ಮಕ ಸಮಾಜವಾದೀ ರಾಷ್ಟ್ರವಾಗಿ ರೂಪುಗೊಂಡದ್ದು ಜವಾಹರಲಾಲ್ ನೆಹರೂ, ಮಹಾತ್ಮಾಗಾಂಧೀಜಿ ಹಾಗೂ ಡಾ:ಬಿ.ಆರ್. ಅಂಬೇಡ್ಕರ್ ರಂತಹ ಪ್ರಜಾಪ್ರಭುತ್ವವಾದಿಗಳಿಂದ. ಭಾರತ ಸ್ವತಂತ್ರಗೊಂಡು, ಪ್ರಜಾಸತ್ತಾತ್ಮಕ ರಾಜ್ಯಭಾರ ವಿಧಾನವನ್ನು ಅಳವಡಿಸಿಕೊಳ್ಳುತ್ತದೆ ಎಂದು ರಾಷ್ಟ್ರಪಿತ ಮಹಾತ್ಮಾಗಾಂಧೀಜಿ ಐವತ್ತು ವರ್ಷಗಳ ಹಿಂದೆ ಐತಿಹಾಸಿಕ ಪಟ್ಟು ಹಿಡಿದಾಗ ಜಗತ್ತಿನ ಬಹುತೇಕ ಎಲ್ಲಾ ದೇಶಗಳು ಅಣಕವಾಡಿದ್ದವು. ಭಾರತದಂತಹ ಕಡುಬಡತನದ, ಅನಕ್ಷರತೆಯ, ವಿಭಿನ್ನ ಜನಾಂಗದ, ವೈವಿಧ್ಯದ ಸಂಸ್ಕೃತಿಯ, ನಾನಾ ಧರ್ಮಗಳ ಪ್ರಾದೇಶಿಕ ತಾರಾತಮ್ಯದ ರಾಷ್ಟ್ರವು ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳಲಾರದು ಪ್ರಜಾಪ್ರಭುತ್ವದ ರಾಜ್ಯಾಡಳಿತದ ವ್ಯವಸ್ಥೆ ಉಳಿಯಲಾರದು ಎಂದೇ ಅಪಸ್ವರ ಹಾಡಿದ್ದವು.

ಜಗತ್ತಿನ ಅತೀ ಪ್ರಾಚೀನ ನಾಗರೀಕತೆಗಳಲ್ಲಿ ಅಗ್ರಮಾನ್ಯವಾದ, ಚಾರಿತ್ರಪೂರ್ವದಲ್ಲಿ ಮಧ್ಯ ಪ್ರಾಚ್ಯದ ಜನರಿಂದ ಹಿಡಿದು ಕ್ರಿಸ್ತಶಕ ಹದಿನಾರನೇ ಶತಮಾನದ ಐರೋಪ್ಯದ ತನಕ ನಾನಾ ರೀತಿಯ ಪರಕೀಯರ ಆಕ್ರಮಣಕ್ಕೆ ಒಳಪಟ್ಟು ಎಲ್ಲಾ ಕಷ್ಟ-ನಷ್ಟಗಳನ್ನು ಸುಲಿಗೆ, ಹಿಂಸೆಗಳನ್ನು ಕಂಡುಂಡಿರುವ ಭಾರತ ಈ ವಿನೂತನ ರಾಜ್ಯಭಾರ ಪದ್ಧತಿಯನ್ನು ಕಾಯಾ, ವಾಚಾ, ಮನಸಾ ಸ್ವೀಕರಿಸಿದೆ. ಪ್ರತಿ ಚುನಾವಣೆಯಲ್ಲೂ ಪ್ರಜಾಪ್ರಭುತ್ವದ ನಡವಳಿಕೆಯ ಬೇರು ಆಳವಾಗುತ್ತಿದೆ. ಗಾಢವಾಗುತ್ತಿದೆ. ಅದರಿಂದಾಗಿ ಅಂದು ಯಾವ ಯಾವ ದೇಶಗಳು ಭಾರತವು ಸ್ವತಂತ್ರಗೊಂಡು ಪ್ರಜಾಪ್ರಭುತ್ವ ಪದ್ಧತಿ ಅಳವಡಿಸಿಕೊಳ್ಳುವ ವಿಷಯದಲ್ಲಿ ಅಣಕ, ಅಪಸ್ವರ ಹಾಡಿದ್ದವೋ ಅವೇ ಇಂದು ಪ್ರೀತಿಯಾಗಿ ಪ್ರಶಂಸಿಸುವಂತಾಗಿದೆ. ಜಗತ್ತಿನ ಕಿರಿಯ ಪ್ರಜಾಸತ್ತಾತ್ಮಕ ಸ್ವಾತಂತ್ರ್ಯ ನಮ್ಮದಾದರೂ ಅತೀ ದೊಡ್ಡ ಜನಸತ್ತಾದೇಶವೆಂಬ ಅಭಿಮಾನ ನಮ್ಮದಾಗಿದೆ.

ಭಾರತ ಸ್ವತಂತ್ರಗೊಂಡ ನಂತರ ನಡೆದ ಪ್ರಥಮ ಚುನಾವಣೆಯಲ್ಲಿ ಎರಡು ಪಕ್ಷ ಪದ್ಧತಿ ಅಳವಡಿಸಬಹುದೆಂದು ಭಾವಿಸಲಾಗಿತ್ತು. ಆದರೆ ಹಾಗಾಗಲಿಲ್ಲ. ಬಹುಪಕ್ಷ ಪದ್ಧತಿ ಈ ವಿಶಾಲ ದೇಶದ ರಾಜಕೀಯ ಲಕ್ಷಣವಾಗುತ್ತಾ ಬಂದಿತು. ಹೊಸ ಪಕ್ಷಗಳು ಹುಟ್ಟುವುದು ದಿನನಿತ್ಯದ ಮಾತಾಗಿದೆ. ಹೊಸದಾಗಿ ಪಡೆದುಕೊಂಡ ಪ್ರಜಾಸತ್ತಾತ್ಮಕ ಆಡಳಿತ ಪದ್ಧತಿಯನ್ನು ಭದ್ರವಾಗಿ ಜತನ ಮಾಡಿಕೊಂಡಿರುವುದು ಭಾರತದ ಸಾಧನೆ. ಭಾರತದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆಯು ಆಳವಾಗುತ್ತಾ ಬಂದಿರುವುದು ಗಮನಿಸಬೇಕಾದ ಅಂಶವಾಗಿದೆ.

ಭಾರತ ದೇಶವು ಸ್ವಾತಂತ್ರ್ಯವನ್ನು ಪಡೆದ ಕೂಡಲೇ ಪ್ರಜಾಪ್ರಭುತ್ವದ ರಾಜ್ಯಭಾರ ಅಳವಡಿತವಾಗಿದ್ದು ಉನ್ನತ ಹಂತದಲ್ಲಿ ಅಂದರೆ, ರಾಜ್ಯ ಮತ್ತು ಗಣರಾಜ್ಯ ವ್ಯವಸ್ಥೆಗೆ ಅದು ಮಾಧ್ಯಮವಾಯಿತು. ಸುಮಾರು ಎರಡು-ಮೂರು ದಶಕಗಳ ಕಾಲ ಗ್ರಾಮಾಡಳಿತ ವ್ಯವಸ್ಥೆಗೆ ಪ್ರಜಾಪ್ರಭುತ್ವದ ನಡವಳಿಕೆ ಅನ್ವಯವಾಗಲಿಲ್ಲ. ರಾಷ್ಟ್ರಪಿತನು ಆರಂಭದಲ್ಲೇ ಬಯಸಿದ ಗ್ರಾಮ ಸ್ವರಾಜ್ಯ ಈಗ ಸಾಕಾರದತ್ತ ಸಾಗಿದೆ. ಅಬ್ರಹಾಂಲಿಂಕನ್ ಮಹಾಶಯನ ಮಾತು 'ಪ್ರಜೆಗಳಿಗಾಗಿ, ಪ್ರಜೆಗಳೇ ನಡೆಸುವ ಸರ್ಕಾರ'- ಈಗ ಭಾರತದಲ್ಲಿ ಅಕ್ಷರಶಃ ನಿಜವಾಗುತ್ತಿದೆ. ಮತದಾರನಿಗೆ ರಾಜಕೀಯ ಪ್ರಜ್ಞೆ ತರುವಲ್ಲಿ ಭಾರತದ ಚುನಾವಣಾ ಆಯೋಗದ ಪಾತ್ರ ಈಗೀಗ ಚುರುಕಾಗಿದೆ. ಮತದಾರನಿಗೆ ಆಸೆ-ಆಮಿಷಗಳನ್ನೊಡ್ಡಿ ಅವನ ಪ್ರಜ್ಞೆಗೆ ಮಂಕುಗವಿಯದಂತೆ ಜಾಗ್ರತವಾಗಿಸುವಲ್ಲಿ ಅದರ ಕಾರ್ಯ ವೈಖರಿ ಪ್ರಶಂಸನೀಯವಾಗಿದೆ. ಚುನಾವಣಾ ಆಯೋಗದ ಶಕ್ತಿ ಸಾಮರ್ಥ್ಯಗಳು ತೀರಾ ಒಳಪ್ರದೇಶದ ಹಳ್ಳಿಗರಿಗೂ ತಿಳಿದಿವೆ. ರಾಜಕೀಯ ಹಿಡಿತದಿಂದ ಹೊರತಾದ ಸಮರ್ಥ ವ್ಯಕ್ತಿ ಈ ಆಯೋಗದ ನೇತೃತ್ವದಲ್ಲಿ ಇರಬೇಕೆಂದು ಭಾರತೀಯ ಮತಪುರುಷ ಬಯಸುತ್ತಿದ್ದಾನೆ. ಚುನಾವಣಾ ವೆಚ್ಚವನ್ನು ನಿಯಂತ್ರಿಸಿ, ಹಣಬಲದಿಂದಲೇ ಗೆಲ್ಲಬಹುದೆಂಬ ರಾಜಕೀಯ ನೇತಾರರ ದುರಾಸೆಗೆ ಅದು ಕಡಿವಾಣ ಹಾಕಿದೆ. ರಾಜಕೀಯದಲ್ಲಿ ಧರ್ಮವನ್ನು ಬೆರೆಸಿ, ಕೋಮು ಭಾವನೆಗಳಿಗೆ ನಾಂದಿ ಹಾಡುವುದನ್ನು ನಿಷೇಧಿಸುವ ಮೂಲಕ ಸಾಮರಸ್ಯದ ಬದುಕಿನ ಮಹತ್ವವನ್ನು ಮತದಾರನಿಗೆ ವಿವರಿಸಿದೆ. ಚುನಾಯಿತ ಪ್ರತಿನಿಧಿಗಳು ತಮ್ಮನ್ನು ಆರಿಸಿ ಕಳಿಸಿದವರ ಹಿತವನ್ನು ಕಡೆಗಣಿಸುವ, ಸಮಾಜದ್ರೋಹ, ದೇಶದ್ರೋಹ ಎಸಗುತ್ತಿರುವ ಘಟನೆಗಳು ಮೇಲಿಂದ ಮೇಲೆ ನಡೆಯುತ್ತಲೇ ಇವೆ. ಶ್ರೀಸಾಮಾನ್ಯ ಮತದಾರರು ಅಂಥವರನ್ನು, ಅಂಥವರ ಪಕ್ಷಗಳನ್ನು ತೀವ್ರವಾಗಿ ಪರಿಗಣಿಸುವ ಬೆಳವಣಿಗೆಯೂ ಆಗಿದೆ. ಕಾರ್ಯಾಂಗ, ಶಾಸಕಾಂಗಗಳಲ್ಲಿ ವಿಧಿಬದ್ಧರಾದವರು ತಮ್ಮ ಕರ್ತವ್ಯ, ಧರ್ಮವನ್ನು ಬದಿಗೊತ್ತಿ ಪರಸ್ಪರ ಶಾಮೀಲಾಗುತ್ತಿರುವುದು ಹೆಚ್ಚಿದೆ. ನ್ಯಾಯಾಂಗ ಈಗ ತನ್ನ

ಸಂವಿಧಾನಿಕ ಕರ್ತವ್ಯವನ್ನು ಮರೆಯುತ್ತಿದೆ. ಶಾಸಕಾಂಗ ಮತ್ತು ಕಾರ್ಯಾಂಗ ನಿಷ್ಕ್ರಿಯ ಅಥವಾ ನಿರ್ಜೀವವಾಗಿರುವ ಕ್ಷೇತ್ರಗಳಲ್ಲಿ ನ್ಯಾಯಾಂಗ ಸಾರ್ವಜನಿಕ ಮೌಲ್ಯಗಳನ್ನು ಎತ್ತಿ ಹಿಡಿಯಲು ಮುಂದಾಗಿರುವುದು ದೇಶ ಹೆಮ್ಮೆಪಡುವ ವಿಚಾರವಾಗಿದೆ. ಪತ್ರಿಕಾರಂಗದ ಜಾಗೃತಿ ಹರಿತವಾಗುತ್ತಿದೆ.

ಭಾರತದಲ್ಲಿ ಸಾಮಾಜಿಕ ಶೈಕ್ಷಣಿಕ, ಆರ್ಥಿಕ ಔದ್ಯೋಗಿಕ ಕ್ರಾಂತಿಯಾಗಬೇಕಾಗಿದೆ. ಕಡುಬಡತನ, ದಾರಿದ್ರ್ಯ ಜೀವನ ಶೋಷಣೆ ಕೆಳವರ್ಗದವರ ತುಳಿತಕ್ಕೆ ಕಾರಣವಾಗಿದೆ. ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯೋತ್ಸವದ ಬೆಳ್ಳಿ ಹಬ್ಬದ ಪ್ರಯುಕ್ತ ಬಂಗಾಳಿ ಕವಿಯೊಬ್ಬ ಬರೆದಿದ್ದ ಹನಿಗವಿತೆಯೊಂದು ಹೀಗಿದೆ,

"ನನ್ನ ದೇಶಕ್ಕೆ ನಡುರಾತ್ರಿ
ಸ್ವಾತಂತ್ರ್ಯ ಬಂದಿತು
ಆದರಿನ್ನೂ ಬೆಳಕೇ ಹರಿದಿಲ್ಲ"(ಕರ್ಮವೀರ, ಅಕ್ಟೋಬರ್ ೧೩,೧೯೯೭)

ಕೇವಲ ಮೂರು ಸಾಲುಗಳಲ್ಲಿ ಸಮಗ್ರ ಭಾರತದ ಚಿತ್ರಣವನ್ನು ಕವಿತೆ ಒಳಗೊಂಡಿದೆ. ಆದುದರಿಂದ ಪ್ರತಿಯೊಬ್ಬರಿಗೂ ಸಮಾನ ಅವಕಾಶ ಮತ್ತು ರಾಜಕೀಯ ಪ್ರಜ್ಞೆ ಅವಶ್ಯಕ. ಜನರ ಜೀವನ ಮಟ್ಟ ಹೆಚ್ಚಬೇಕಾದರೆ, ದುಡಿಮೆಗೆ ತಕ್ಕ ಪ್ರತಿಫಲ ದೊರೆಯಬೇಕಾಗಿದೆ. ಮಹಾತ್ಮಾಗಾಂಧೀಜಿಯವರ 'ರಾಮರಾಜ್ಯ'ದ ಕನಸ್ಸು ನನಸಾಗಬೇಕಾದರೆ, ಪ್ರತಿಯೊಬ್ಬರ ಜೀವನ ಮಟ್ಟವು ಸುಧಾರಿತವಾಗಬೇಕಾಗಿದೆ. ಪ್ರತಿಯೊಬ್ಬರ ಜೀವನ ಅವಶ್ಯಕಗಳಾದ ಅಥವಾ ಮೂಲಭೂತ ಸಮಸ್ಯೆಗಳಾದ ವಸತಿ, ಆಹಾರ, ನೀರು ಇತ್ಯಾದಿ ಸೌಲಭ್ಯಗಳನ್ನು ಕಲ್ಪಿಸುವುದು ಅಧಿಕಾರ ರೂಢ ಸರಕಾರದ ಕರ್ತವ್ಯವಾಗಿದೆ. ದಿನದಿಂದ ದಿನಕ್ಕೆ ಸಮಸ್ಯೆಗಳು ಹೆಚ್ಚಗುತ್ತಿವೆ. "ಬಿಳಿಯರ ದೊರೆತನವನ್ನು ತೊಲಗಿಸಿದ್ದರಿಂದಲೇ ಎಲ್ಲವು ಮುಗಿದ ಹಾಗಲ್ಲ. ನಾವೆಲ್ಲರೂ ನಿರಾಂತಕವಾಗಿ ಉಸಿರಾಡುವ ತನಕ, ಸಮಸ್ಯೆಗಳೆಲ್ಲಾ ತೀರಿ ಹೋಗುವ ತನಕ ನಮ್ಮ ಕರ್ತವ್ಯ ಅಪೂರ್ಣವಾಗಿಯೇ ಇದ್ದು ಹೋಗುತ್ತದೆ"- ಎಂದು ಸ್ವಾತಂತ್ರ್ಯ ಬಂದನಂತರ ಕೆಲವೇ ಕ್ಷಣಗಳಲ್ಲಿ ಜವಾಹರಲಾಲ್ ನೆಹರೂ ಹೇಳಿರುವ ಮಾತುಗಳು ಮಹತ್ವಪೂರ್ಣವಾಗಿವೆ. ಸ್ವಾತಂತ್ರ್ಯ, ಪ್ರಜಾಸತ್ತೆಗಳ ಮೌಲ್ಯ, ಅರ್ಥವಂತಿಕೆಗಳಿರುವುದು ಅವು ಜನ ಜೀವನದಲ್ಲಿ ನಿಜವಾದಾಗ ಎಂದೇ ಪ್ರತಿಯೊಂದು ಸ್ವಾತಂತ್ರ್ಯೋತ್ಸವವೂ ಜನ ಜೀವನವನ್ನು ಮತ್ತಷ್ಟು ಹಸನುಗೊಳಿಸಲು ದೊರೆತ ಮತ್ತೊಂದು ಅವಕಾಶ. ಪ್ರಜಾಪ್ರಭುತ್ವದ ಪ್ರತಿಕ್ಷಣವೂ ನಾವು ಹೆಚ್ಚು ಹೆಚ್ಚು ಪಾರದರ್ಶಕವಾಗಿ ನಮ್ಮ ಸ್ವಾತಂತ್ರ್ಯವನ್ನೂ ಸಾರ್ವಭೌಮತ್ವನ್ನು ಕಾಪಾಡಿಕೊಳ್ಳುತ್ತಾ ಕಡುಬಡವರಿಗೆ ಅಭಿವೃದ್ಧಿಯ ಫಲದೊರೆಯುವಂತೆ ಮಾಡುವುದು ಅತ್ಯಗತ್ಯ.

ಜವಾಹರಲಾಲ್ ನೆಹರು, ಮಹಾತ್ಮಾಗಾಂಧೀಜಿ ಹಾಗೂ ಡಾ. ಬಿ.ಆರ್. ಅಂಬೇಡ್ಕರ್ ರಂತಹ ಮಹಾನಾಯಕರು ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯ ಬಗ್ಗೆ ವಿಶ್ವಾಸ ಹೊಂದಿದ್ದರು. ಅವರುಗಳ ದೃಷ್ಟಿಯಲ್ಲಿ ಪ್ರಜಾಪ್ರಭುತ್ವ ಒಂದು ಸುವ್ಯವಸ್ಥೆಯ ಸಿದ್ಧಾಂತವಾಗಿತ್ತು. ಜನರ ಅಗತ್ಯಗಳನ್ನು ಪೂರೈಸುವ ಮತ್ತು ಜನರಿಂದಲೇ ಆಡಳಿತವನ್ನು ನಡೆಸುವ ಈ ಸಿದ್ಧಾಂತ ನಮ್ಮ ಮಹಾನ್ ನಾಯಕರುಗಳ ಪ್ರೀತಿಗೆ ಪಾತ್ರವಾಗಿದೆ. ಅಂತೆಯೇ ಭಾರತದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಜಾರಿಗೊಳಿಸಿದರು. ಅದರ ವಿಫಲತೆಗಿಂತ ಅದರ ಸಫಲತೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಾ ನಡೆದಿದೆ.

ಇಪ್ಪತ್ತನೆಯ ಶತಮಾನದ ಮೊದಲ ಭಾಗ ನಮ್ಮ ದೇಶದ ಇತಿಹಾಸದಲ್ಲಿ ಒಂದು ಉಜ್ವಲ ಕಾಲವಾಗಿದೆ. ಭಾರತದ ಪ್ರಜಾಪ್ರಭುತ್ವವಾದಿಗಳಾದ ಜವಾಹರಲಾಲ್ ನೆಹರೂ, ಮಹಾತ್ಮಾಗಾಂಧೀಜಿ,ಹಾಗೂ ಡಾ.ಬಿ.ಆರ್. ಅಂಬೇಡ್ಕರ್ ರಂತಹ ಮಹಾನ್ ನಾಯಕರು ಭಾರತದಲ್ಲಿ ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯ ಸಿದ್ಧಾಂತಕ್ಕೆ ಭದ್ರ ಬುನಾದಿಯನ್ನು ಹಾಕಿದರು. ಜೊತೆಗೆ ಭಾರತದ ಭವಿಷ್ಯದ ಬಗ್ಗೆ ಸಮಗ್ರ ಚಿಂತನೆ ನಡೆಸಿದರು. ಇವರ ಚಿಂತನೆಯ ತತ್ವಗಳು ಫಲಪ್ರದವಾಗಿ ರೂಪುಗೊಂಡಿವೆ. ಅಭಿವೃದ್ಧಿಯ ಜೊತೆಗೆ ಜನ ಕಲ್ಯಾಣವೇ ಮುಖ್ಯವಾಗಿದೆ. ಭಾರತದ ಮಹಾನ್ ನಾಯಕರಾದ ಮಹಾತ್ಮಾಗಾಂಧೀಜಿಯ ವ್ಯಕ್ತಿತ್ವ ವಿಶಿಷ್ಟವಾದದ್ದು. ಗಾಂಧೀಜಿ ಲಕ್ವ ಹೊಡೆದಂತಾಗಿ, ಜಡತ್ವದಲ್ಲಿ ಬಿದ್ದಿದ್ದ ಲಕ್ಷಾಂತರ ಭಾರತೀಯರನ್ನು ಬಡಿದೆಬ್ಬಿಸಿ, ಅವರಲ್ಲಿ ಆತ್ಮ ವಿಶ್ವಾಸವನ್ನು ತುಂಬಿ, ಸ್ವಾತಂತ್ರ್ಯ ಸಂಗ್ರಾಮಕ್ಕೆ ಅಣಿಗೊಳಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಬಡತನ, ಅಜ್ಞಾನ, ಅಸಮಾನತೆ, ಅಸ್ಪೃಶ್ಯತೆ,-ಶೋಷಣೆ, ಇತ್ಯಾದಿಗಳ ವಿರುದ್ಧ ಸಮರವನ್ನೇ ಸಾರಿದರು. ಸಾಮಾಜಿಕ, ರಾಜಕೀಯ, ಆರ್ಥಿಕ, ಹಾಗೂ ಧಾರ್ಮಿಕ ಪರಿವರ್ತನೆಯ ಹರಿಕಾರರಾಗಿ ಅಭೂತಪೂರ್ವ ಯಶಸ್ಸನ್ನುಗಳಿಸಿ, ಇತಿಹಾಸ ನಿರ್ಮಿಸಿದರು.

ಜವಾಹರಲಾಲ ನೆಹರೂ ಸ್ವತಂತ್ರ ಭಾರತದ ಮೊದಲ ಪ್ರಧಾನ ಮಂತ್ರಿಯಾಗಿದ್ದರು. ತಮ್ಮ ಆಡಳಿತದ ಅವಧಿಯಲ್ಲಿ ಅವರು 'ನವ ಭಾರತದ' ನಿರ್ಮಾಣಕ್ಕೆ ಸರ್ವ ಪ್ರಯತ್ನ ನಡೆಸಿದರು. ಜವಾಹರಲಾಲ್ ನೆಹರೂ ಯುದ್ಧವನ್ನು ಎಂದೂ ಬಯಸಿರಲಿಲ್ಲ. ಪ್ರಜಾತಂತ್ರ ಮತ್ತು ಶಾಂತಿ ಅವರ ಮೂಲ ಮಂತ್ರವಾಗಿತ್ತು. ಡಾ.ಬಿ.ಆರ್.ಅಂಬೇಡ್ಕರ್ ಭಾರತ ಕಂಡ ಒಬ್ಬ ಮಹಾನ್ ಚಿಂತಕ. ಹಿಂದುಳಿದ ವರ್ಗದ ಜನತೆಯಗೆ ಬದುಕಿನ ಬಗ್ಗೆ ಆಶಾಭಾವನೆ ಮೂಡಿಸಿ, ಅವರ ಉನ್ನತಿಗಾಗಿ ಹಗಲಿರುಳು ಶ್ರಮಿಸಿದ ದಿವ್ಯ ಚೇತನ. ಭಾರತದ "ಸಂವಿಧಾನ ಶಿಲ್ಪಿ" ಯಾಗಿ ವಿಶ್ವದ ಅತ್ಯಂತ ದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರಕ್ಕೆ ಅವರು ನೀಡಿದ ಕೊಡುಗೆ

ಪ್ರಶಂಸನೀಯವಾದುದು. ಡಾ.ಬಿ.ಆರ್. ಅಂಬೇಡ್ಕರ್ ಪ್ರಜಾಪ್ರಭುತ್ವ ಹಾಗೂ ಸಮಾಜವಾದದಂತ ವಿಷಯಗಳ ಬಗ್ಗೆ ಆಳವಾದ ಚಿಂತನೆ ಮಾಡಿದ್ದಾರೆ. ಅವರ ಅಭಿಪ್ರಾಯಗಳು ತುಂಬಾ ಮನನೀಯವಾಗಿವೆ. ಅವರಿಗೆ ಒಂದು ಉದ್ದೇಶವಿತ್ತು. "ವ್ಯಕ್ತಿ ಸ್ವಾತಂತ್ರ್ಯ ಮತ್ತು ಸಮಾನತೆಯನ್ನಾಧರಿಸಿದ ವರ್ಗ ರಹಿತ ವರ್ಣ ರಹಿತ ಸಮಾಜ" ಸ್ಥಾಪನೆ ಎಂಬುವುದಾಗಿತ್ತು.

ಜವಾಹರಲಾಲ್ ನೆಹರೂ ಅವರು ಅತ್ಯಂತ ಉದಾರವಾದಿ ಪ್ರಜಾಪ್ರಭುತ್ವವಾದಿಗಳಾಗಿದ್ದರು. ಭವ್ಯ ಭಾರತದ ಕನಸು ಕಂಡ ಅವರು " ಸ್ವಾತಂತ್ರ್ಯವು ನವದಿಗಂತದ ಕದ ತೆರೆದಾಗ ಭಾರತ ತನ್ನನ್ನು ತಾನು ಮತ್ತೆ ಕಂಡು ಕೊಳ್ಳಲಿದೆ, ಆಗ ನಿಕಟ ಪೂರ್ವ ಹತಾಶೆ ಹಾಗೂ ಅಪಮಾನಗಳಿಗಿಂತ ಭವಿತವ್ಯವೇ ಅದಕ್ಕೆ ಅಪ್ಯಾಯ ಮಾನವಾಗಲಿದೆ", ಎಂದು ಭಾರತದ ಭವಿಷ್ಯದ ಬಗ್ಗೆ ನೆಹರೂರವರು ಅತ್ಯಂತ ಭಾವುಕರಾಗಿದ್ದರು. ಅದರಿಂದಲೇ ಡಾ.ರಾಧಾಕೃಷ್ಣನ್ ನೆಹರೂ ಬಗ್ಗೆ ಹೇಳುತ್ತಾ"ಗತ ಕಾಲವನ್ನು ವೈಭವೀಕರಿಸಲು ಅವರು ಕಾಲ ವ್ಯಯಿಸುವುದಿಲ್ಲ. ಆದರೆ ಭವಿಷ್ಯದ ಸವಾಲುಗಳನ್ನೆದುರಿಸಲು ಅವರು ಸದಾ ಕ್ರಿಯಾಶೀಲರಾಗಿರುತ್ತಾರೆ", ಎಂದು ಹೇಳಿದ್ದಾರೆ.(ಕೃತಿ: ಬಹುಮುಖ ಶಿಕ್ಷಣ, ಮಹಾಬಲೇಶ್ವರ ರಾವ್ )

ಪ್ರಜಾಪ್ರಭುತ್ವದಲ್ಲಿ ಜನ ಸಂಕಲ್ಪವೇ ಮುಖ್ಯವಾಗಬೇಕು ಎಂದು ಒತ್ತಿ ಹೇಳಿದ ಜವಾಹರಲಾಲ್ ನೆಹರೂರವರು ೧೭ ವರ್ಷಗಳ ಕಾಲ ಭಾರತದ ಪ್ರಧಾನ ಮಂತ್ರಿಯೂ, ಸ್ವಾತಂತ್ರ್ಯ ಹೋರಾಟಗಾರರೂ, ಅಂತರರಾಷ್ಟ್ರೀಯ ಮನ್ನಣೆ ಪಡೆದ ಮುತ್ಸದ್ದಿಯೂ, ಆಗಿದ್ದ ಅವರು ಜಾತ್ಯಾತೀತತೆ, ಸಮಾಜವಾದ, ಮತ್ತು ಪ್ರಜಾಸತ್ತೆ ಮೌಲ್ಯಗಳಿಗೆ ಮನ್ನಣೆ ನೀಡುತ್ತಿದ್ದರು. ಎಲ್ಲ ಜಾತಿಧರ್ಮಗಳ ಜನರಿಗೆ ಸ್ವತಂತ್ರವಾಗಿ ಬಾಳುವ ಬದುಕುವ ಹಕ್ಕಿದೆ-ಎಂಬುದು ಅವರ ಅಭಿಪ್ರಾಯವಾಗಿತ್ತು. ಭಾರತದ ಜನರ ಏಕತಾ ಮನೋಭಾವದ ಬಗ್ಗೆ ನೆಹರೂರವರಿಗೆ ಹೆಮ್ಮೆಯಿತ್ತು.ಸ್ವಾತಂತ್ರ್ಯ ಮತ್ತು ಏಕತೆಯನ್ನು ಕಾಪಾಡಿಕೊಳ್ಳಬೇಕು ಎಂದು ಸದಾ ಹೇಳುತ್ತಿದ್ದರು.

ಜವಾಹರಲಾಲ್ ನೆಹರೂರವರು ಪ್ರಜಾಪ್ರಭುತ್ವದಲ್ಲಿ ಅಚಲನಂಬಿಕೆ ಇಟ್ಟಿದ್ದರು. 'ತನ್ನಲ್ಲಿರುವ ಸಾಮರ್ಥ್ಯ ಮತ್ತು ಪ್ರತಿಭೆಯನ್ನು ಉಪಯೋಗಿಸಿಕೊಂಡು ಮುಂದೆ ಬರುವ ಸ್ವಾತಂತ್ರ್ಯ ಪ್ರತಿಯೊಬ್ಬ ವ್ಯಕ್ತಿಗೂ ಇದೆ' ಎಂದು ನೆಹರೂರವರು ಹೇಳಿದ್ದಾರೆ. ಅಲ್ಲದೇ ಕೆಲವು ರಾಜ್ಯಗಳಲ್ಲಿ ಚುನಾವಣೆ ನಡೆದಾಗ ಕಾಂಗ್ರೆಸ್ ಪಕ್ಷ ಸೋಲು ಅನುಭವಿಸಿತು. ಇದರಿಂದ ಅವರ ಮನಸ್ಸಿಗೆ ಸ್ವಲ್ಪ ಅಸಮಾಧಾನವಾಗಿತ್ತಾದರೂ ಅವರು

ಸಂಪೂರ್ಣವಾಗಿ ಅಸಂತುಷ್ಟವಾಗಿರಲಿಲ್ಲ. ಸ್ವತಂತ್ರ ಭಾರತದಲ್ಲಿ ಜನರು ಸ್ವತಂತ್ರವಾಗಿ ತಮ್ಮ ಅಭಿಮತವನ್ನು ವ್ಯಕ್ತಪಡಿಸಿದ ರೀತಿಯನ್ನು ಕಂಡು ಅವರು ತುಂಬ ಸಂತೋಷಪಟ್ಟರು. ಜವಾಹರಲಾಲರು ನಿಜವಾದ ಪ್ರಜಾಪ್ರಭುತ್ವವಾದಿಯಾಗಿದ್ದರು. ಪಾರ್ಲಿಮೆಂಟರಿ ಸಂಸ್ಥೆಗಳಲ್ಲಿ ಅವರಿಗೆ ತುಂಬಾ ಗೌರವವಿತ್ತು. ಆದ್ದರಿಂದ ಈ ಸಂಸ್ಥೆಗಳನ್ನು ಅತ್ಯುತ್ತಮವಾಗಿ ಪೋಷಿಸಲು ಅವರು ಶ್ರಮಿಸಿದರು. ಪಾರ್ಲಿಮೆಂಟಿನಲ್ಲಿ ಮುಕ್ತ ಚರ್ಚೆ ನಡೆಯಬೇಕೆಂದು ಅವರು ಬಯಸಿದರು.ಬೇರೆ ದೇಶಗಳು ಸರ್ವಾಧಿಕಾರಿಗಳ ಜಾಲಕ್ಕೆ ಸಿಕ್ಕಿ ನಲುಗುತ್ತಿದ್ದವು. ಆದರೆ ಭಾರತವು ಮಾತ್ರ ಸತ್ವಭರಿತ ಪ್ರಜಾಪ್ರಭುತ್ವವಾಗಿ ಪ್ರವರ್ಧಮಾನಕ್ಕೆ ಬಂದಿತು. ಜವಾಹರಲಾಲ ನೆಹರೂರವರು ಪ್ರಜಾಸತ್ತೆಯ ನಿರ್ಮಾಣಕ್ಕೆ ಬಲವಾದ ತಳಪಾಯ ಹಾಕಿದರು.

ನೆಹರೂ ಅವರ ಮಟ್ಟಿಗೆ ರಾಜಕೀಯ ಪ್ರಜಾಸತ್ತೆಯೆಂದರೆ, ಆರ್ಥಿಕ ಪ್ರಜಾಸತ್ತೆ ಅದನ್ನು ಸಾಧಿಸುವುವಕ್ಕಾಗಿ ಯೋಜನೆಯ ಆಧಾರದ ಮೇಲೆ ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿಯ ತೀವ್ರವಾದ ಕಾರ್ಯಕ್ರಮ ಅಗತ್ಯವಾಯಿತು. "ಪ್ರಜಾಸತ್ತೆಯೆಂದರೆ ಸಾಮಾನ್ಯವಾಗಿ ರಾಜಕೀಯ ಪ್ರಜಾಸತ್ತೆ, ಪ್ರತಿಯೊಬ್ಬ ವ್ಯಕ್ತಿಗೂ ಮತದಾನದ ಹಕ್ಕನ್ನು ಕೊಡುವುದು. ಮತದಾನದ ಹಕ್ಕು ಒಳ್ಳೆಯದು ಮತ್ತು ಉಪಯುಕ್ತವಾದುದು. ಆದರೆ ಅದರ ಜೊತೆಗೇ ಹಸಿವು ಉಪವಾಸವೂ ಬರುವುದಾದರೆ ಅದರಿಂದ ಏನು ಪ್ರಯೋಜನವಿಲ್ಲ. ರಾಜಕೀಯ ಪ್ರಜಾಸತ್ತೆಯು ಆರ್ಥಿಕ ಪ್ರಜಾಸತ್ತೆಗೆ ದಾರಿ ಮಾಡಿಕೊಡಬೇಕಾದುದು ಅನಿವಾರ್ಯ"-ಎಂದು ನೆಹರೂರವರು ಹೇಳಿದ್ದಾರೆ. (ನೆಹರೂ ಮತ್ತು ವಿಜ್ಞಾನ. ಶ್ರೀಮತಿ ಹರಿಪ್ರಸಾದ್ (ಸಂ)

ಆರ್ಥಿಕ ಮತ್ತು ಸಾಮಾಜಿಕ ಸುಧಾರಣೆಗಳಿಗೆ ಮಾಡುವ ಪ್ರಯತ್ನಕ್ಕೂ, ರಾಜಕೀಯ ಪ್ರಜಾಸತ್ತೆಗೂ ಯಾವ ಬಗೆಯ ಘರ್ಷಣೆಯೂ ಇಲ್ಲವೆಂಬ ತಮ್ಮ ದೃಷ್ಟಿಯನ್ನು ನೆಹರೂ ಅವರು ಪಾಲಿಸಿಕೊಂಡು ಬಂದರು. ಯೋಜಿತ ಕಾರ್ಯಾಚರಣೆಯು ಅನಿವಾರ್ಯವಾಗಿ ಸ್ವಲ್ಪಮಟ್ಟಿನ ಕಟ್ಟುಪಾಡಿಗೆ ಮತ್ತು ಬಲವಂತಕ್ಕೆ ಎಡೆಮಾಡಿಕೊಡುವುದರಿಂದ ಅದು ಪ್ರಜಾಸತ್ತೆಗೆ ವಿರೋಧಿ. ಯೋಜನೆ ಮತ್ತು ಪ್ರಜಾಸತ್ತೆಗಳನ್ನು ಜೊತೆ, ಜೊತೆಗೆ ನಡೆಸಿಕೊಂಡು ಹೋಗುವುದು ಸಾಧ್ಯವಿಲ್ಲ, ಎಂಬ ಒಂದು ವಿಚಿತ್ರವಾದವನ್ನು ಕೆಲವು ವೇಳೆ ಮಂಡಿಸುತ್ತಾರೆ. ಆದರೆ ನೆಹರೂ ಅವರ ದೃಷ್ಟಿಯಲ್ಲಿ ಇದು ಅರ್ಥಹೀನ. 'ಭಾರತದಲ್ಲಿ ಉತ್ಸಾಹಭರಿತ ಪ್ರಜಾಸತ್ತೆ ಇದೆ. ಆದರೆ ಸಂಪನ್ಮೂಲಗಳು ಸಾಲದು. ಆದ್ದರಿಂದ ಜನರ ಬೇಡಿಕೆಗಳನ್ನು ಪೂರೈಸಬೇಕಾದರೆ, ಸಂಪನ್ಮೂಳಗಳನ್ನು ಸಾಧ್ಯವಾದಷ್ಟು ಕ್ಷಿಪ್ರವಾಗಿ ಅಭಿವೃದ್ಧಿಗೊಳಿಸುವುದೊಂದೇ ಮಾರ್ಗ. ವ್ಯಾವಹಾರಿಕ ಪರಿಗಣನೆ ಅಥವಾ ಬೇರಾವ ಪರಿಗಣನೆಯೇ ಇರಲಿ ಕ್ಷಿಪ್ರವಾಗಿ ನಾವು ಮುನ್ನಡೆಯುವುದು ಅಗತ್ಯ ಎಂಬ

ತೀರ್ಮಾನಕ್ಕೆ ಬರಬೇಕು. ಇದು ಯೋಜಿತ ಕಾರ್ಯಾಚರನೆಯಿಂದ ಮಾತ್ರ ಸಾಧ್ಯ ಎಂದು ನೆಹರೂರವರು ಹೇಳಿದ್ದಾರೆ.

ಅನಕ್ಷರಸ್ಥರು ಮತ್ತು ಹಸಿದ ಹೊಟ್ಟೆಯ ಜನರ ಬಗ್ಗೆ ನೆಹರೂ ಕಳಕಳಿ ಹೊಂದಿದ್ದರು. ದುಡಿಮೆ ಮತ್ತು ಸಹಭಾಗಿತ್ವ, ಪ್ರಜಾಸತ್ತಾತ್ಮಕ ಸ್ವಾವಲಂಬನೆ ಮತ್ತು ಪ್ರಗತಿಪರ ರಾಷ್ಟ್ರವೊಂದರ ಅಭ್ಯುದಯಕ್ಕೆ ಅವಶ್ಯಕವಾದ ಮಾರ್ಗ ಕಂಡು ಹಿಡಿದಿದ್ದರು. ವೈಜ್ಞಾನಿಕ ವಿಧಾನದಿಂದ ವ್ಯವಸಾಯದ ಪ್ರಗತಿಯನ್ನು ಸಾಧಿಸಬೇಕಾದರೆ, ಬಹುತೇಕ ಜನರು ಗ್ರಾಮಗಳಲ್ಲಿ ಅಲ್ಪಸ್ವಲ್ಪ ಜಮೀನಿನ ಆಧಾರದ ಮೇಲೆ ಬದುಕಿರುವುದನ್ನು ತಪ್ಪಿಸಲು ನಗರಗಳಲ್ಲಿ ಬೃಹತ್ ಪ್ರಮಾಣದ ಕೈಗಾರಿಕೆಗಳನ್ನು ಸ್ಥಾಪಿಸಿ, ಗ್ರಾಮೀಣಾ ಜನರನ್ನು ಇತ್ತ ಆಕರ್ಷಿಸಬೇಕು-ಎಂದು ನೆಹರೂ ಹೇಳುತ್ತಿದ್ದರು. ನೆಹರೂ ಅವರ ಬಗ್ಗೆ ಬರೆಯುತ್ತಾ ಪ್ರೊ. ಮಹಾಲನೊಬಿಸ್ ಅವರು,"ಜಗತ್ತನ್ನು ಪರಿವರ್ತಿಸುತ್ತಿರುವ ವೈಜ್ಞಾನಿಕ ಕ್ರಾಂತಿಯ ಅರಿವನ್ನೂ ಮಾನವೀಯ ಮೌಲ್ಯಗಳ ಮತ್ತು ಸಾಂಸ್ಕೃತಿಕ ಪರಂಪರೆಯ ಸಂವೇಧನೆಯನ್ನೂ, ಪ್ರಜಾಸತ್ತೆ ಹಾಗೂ ಅಂತರ ರಾಷ್ಟ್ರೀಯ ಮನೋಭಾವದ ಪ್ರಜ್ಞೆಯನ್ನೂ ಅವರು ಭಾರತದ ಯೋಜನಾ ಕಾರ್ಯಕ್ಕೆ ಅನ್ವಯಿಸಿದರು"- ಎಂದು ನೆಹರೂರವರ ಬಗ್ಗೆ ಹೇಳಿದ್ದಾರೆ.

ನೆಹರೂ ಅವರಂಥ ಸಂಕೀರ್ಣವಾದ ವ್ಯಕ್ತಿತ್ವ ಒಂದರಲ್ಲಿ ಮೇಲುನೋಟಕ್ಕೆ ಪರಸ್ಪರ ವಿರುದ್ಧವಾಗಿ ಕಾಣುವ ಅನೇಕ ವಿಷಯಗಳನ್ನು ಎಳೆಗಳನ್ನೂ ಕಾಣಬಹುದು. ಪ್ರಜಾತಂತ್ರವಾದಿಯಾಗಿದ್ದು, ಆಧುನಿಕತಾವಾದಿಯೂ ಅಗಿರುವುದರಲ್ಲಿ ಯಾವ ಬಗೆಯ ಅಸಾಂಗತ್ಯವೂ ನೆಹರೂ ಅವರಿಗೆ ಕಾಣಿಸುತ್ತಿರಲಿಲ್ಲ. ವಾಸ್ತವವಾಗಿ ಅವರ ದೃಷ್ಟಿಯಲ್ಲಿ ಅವೆರಡಕ್ಕೂ ನಿಕಟವಾದ ಸಂಬಂಧವಿತ್ತು. ಒಂದು ರೀತಿಯಲ್ಲಿ ಅವು ಪರಸ್ಪರಾವಲಂಬಿಗಳಾಗಿದ್ದವು. ಸ್ವಾತಂತ್ರ್ಯದ ಸಂದರ್ಭದಲ್ಲಿ ಕಾನ್ಸ್ ಟಿಟ್ಯು ಎಂಟ್ ಆಸೆಂಬ್ಲಿಯಲ್ಲಿ ಮಾಡಿದ ಅವರ ಎರಡು ಭಾಷಣಗಳು ರಾಜಕೀಯ ಪ್ರಜಾಸತ್ತೆ ಮತ್ತು ಭಾರತದ ಜನರ ಆರ್ಥಿಕ ಮತ್ತು ಸಾಮಾಜಿಕ ಹಿತದ ಬಗ್ಗೆ ಅವರಿಗಿದ್ದ ಕಳಕಳಿಯನ್ನು ತೋರಿಸುತ್ತವೆ. ನೆಹರೂ ಅವರ ದೃಷ್ಟಿಯಲ್ಲಿ ಯೋಜನೆ ಎಂದರೆ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿ. ನೆಹರೂ ಅವರು ಆಧುನಿಕತಾವಾದಿ ಹಾಗೂ ಪ್ರಜಾತಂತ್ರವಾದಿ. ಆದರೆ ಮೊದಲನೆಯದಕ್ಕಿಂತ ಎರಡನೆಯದು. ಆದುದರಿಂದ ಯೋಜನೆಯು 'ಪ್ರಜಾಸತಾತ್ಮಕವಾಗಿ ರೂಪುಗೊಳ್ಳಬೇಕೆಂಬುದಕ್ಕೆ ಅವರು ತೀವ್ರವಾಗಿ ಬದ್ಧರಾಗಿದ್ದರು. ಇದರ ಪರಿಣಾಮವೇನೆಂದರೆ, ಭಾರತದಲ್ಲಿ ಯೋಜನೆಯ ಕಾರ್ಯ ವಿಧಾನದ ಮೇಲೆ, ಆ ಮೂಲಕ ಅಭಿವೃದ್ಧಿಗೆ ಸಂಬಂಧಿಸಿದ ಆರ್ಥಿಕ ಮತ್ತು ಸಾಮಾಜಿಕ

ಕಾರ್ಯಕ್ರಮಗಳ ಮೇಲೆ ರಾಜಕೀಯ ಪ್ರಭಾವ ಅಧಿಕವಾಯಿತು, ಎಂದೇ ಹೇಳಬೇಕಾಗುತ್ತದೆ.

ಜವಾಹರಲಾಲ್ ನೆಹರೂ ಅವರು ಶಾಂತಿಗಾಗಿ ತಮ್ಮನ್ನು ತಾವೇ ಮುಡುಪಾಗಿಟ್ಟುಕೊಂಡಿದ್ದರು ಎಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಭಾರತದ ಆಂತರಿಕ ಶಾಂತಿಗೆ ಹಾಗೂ ವಿವಾದ, ವಿರೋಧಗಳನ್ನು ಪರಿಹರಿಸಲು, ಅಷ್ಟೇಕೆ ವಿಶ್ವಶಾಂತಿಗೆ ಸಕ್ರೀಯವಾಗಿ ಅವರು ಶ್ರಮಿಸಿದರು. ಶತಮಾನಗಳ ಬಡತನದ ಸ್ಥಿತಿಯಿಂದ ದೇಶವನ್ನು ಸುರಕ್ಷಣೆ, ಸಮೃದ್ಧ ಸಂಪತ್ತು ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಎಲ್ಲರಿಗೂ ಸಫಲ ಹಾಗೂ ಉನ್ನತ ಜೀವನಾವಕಾಶಗಳನ್ನು ಒದಗಿಸುವ ಸಾಮಾಜಿಕಸ್ತರಕ್ಕೆ ಮೇಲೆತ್ತುವುದು ನೆಹರೂ ಅವರಿಗೆ ಅಂದಿನ ಮಹೋನ್ನತ ಗುರಿಯಾಗಿದ್ದಿತು. ವಿಶ್ವಶಾಂತಿಗೆ ಜವಾಹರಲಾಲರು ಅವಿಶ್ರಾಂತವಾಗಿ ದುಡಿದರು. ಇದರಿಂದ ಅವರ ಕೀರ್ತಿ ಮತ್ತಷ್ಟು ಹೆಚ್ಚಿತು. 'ಇಡೀ ಮಾನವ ಕುಲದ ಅಂತರಾತ್ಮದ ಅಭಿವ್ಯಕ್ತಿಯ ಸಂಕೇತವೇ ಜವಾಹರಲಾಲ್ ನೆಹರೂ'- ಎಂದು ಅಧ್ಯಕ್ಷ ನಾಸರ್ ಒಮ್ಮೆ ವರ್ಣಿಸಿದ್ದಾರೆ. ಮಹಾತ್ಮಗಾಂದೀಜಿ ಹೇಳಿದ 'ರಾಮರಾಜ್ಯ'ದ ವಿಚಾರವು ಜವಾಹರಲಾಲರಿಗೆ ಮೊದ, ಮೊದಲು ವಿಚಿತ್ರವೆನಿಸಿತು. ಆದರೆ ಅವರು ಮುಂದೆ ಗಾಂಧೀಜಿ ತೋರಿದ ದಾರಿಯಲ್ಲೇ ನಡೆದರು. ಜಗತ್ತು ಜವಾಹಲಾಲ್ ರನ್ನು ಗಾಂಧೀಜಿಯ ಪ್ರತಿನಿಧಿ ಎಂದು ಗುರುತಿಸಿದೆ. ಮಹಾತ್ಮಗಾಂಧೀಜಿಯ ಪ್ರತಿನಿಧಿಯಾಗಿ ನೆಹರೂ ಭಾರತವನ್ನು ವೈಜ್ಞಾನಿಕ ಪಥದಲ್ಲಿ ಮುನ್ನಡೆಸಿದ್ದಾರೆ.

ಮಹಾತ್ಮಗಾಂಧೀಜಿ ಪ್ರಪಂಚವು ಕಂಡರಿಯದ ಒಬ್ಬ ಮಹಾನ್ ವ್ಯಕ್ತಿ. ಗ್ರಾಮ ಸ್ವರಾಜ್ಯದ ರೂವಾರಿ, ಸತ್ಯ ಅಹಿಂಸೆಗಳ ಪ್ರವಾದಿ, ಮನುಕುಲೋದ್ಧಾರಕ ಹೀಗೆ ಅನೇಕ ತತ್ವಗಳ ಪ್ರತಿಪಾದನೆಯ ಜೊತೆಗೆ ಪ್ರಜಾಪ್ರಭುತ್ವವಾದಿಗಳಾಗಿದ್ದರು. ಮಹಾತ್ಮಗಾಂಧೀಜಿ ಪ್ರಜಾಪ್ರಭುತ್ವ ಸಿದ್ಧಾಂತದ ಬಗ್ಗೆ ಅಪಾರನಂಬಿಕೆ ಇಟ್ಟಿದ್ದರು. ಜೊತೆಗೆ ಅತ್ಯಂತ ಉದಾರವಾದಿಯೂ ಆಗಿದ್ದರು. ಅವರ ದೃಷ್ಟಿಯಲ್ಲಿ ಪ್ರಜಾಪ್ರಭುವೆಂದರೆ, ಪ್ರತಿಯೊಬ್ಬ ಪ್ರಜೆಯೂ ಪಾಲ್ಗೊಳ್ಳುವಿಕೆಯೇ ಆಗಿದೆ. ಮಹಾತ್ಮಗಾಂಧೀಜಿಯವರ ಪ್ರಕಾರ ನಿಜಪ್ರಜಾಪ್ರಭುತ್ವವು ಅಸತ್ಯ, ಹಿಂಸಾತ್ಮಕವೂ ಆದ ಸಾಧನಗಳಿಂದ ಎಂದಿಗೂ ದೊರೆಯುವುದಿಲ್ಲ. 'ಪ್ರಜಾಪ್ರಭುತ್ವದ ಚೈತನ್ಯವನ್ನು ಹೊರಗಿನಿಂದ ಹೇರುವುದಕ್ಕಾಗುವುದಿಲ್ಲ. ಅದು ಅಂತಃಕರಣದಿಂದ ಬರಬೇಕು. ಪ್ರಜಾಪ್ರಭುತ್ವದಲ್ಲಿ ಅತ್ಯಂತ ಬಲಶಾಲಿಯಾದವನಿಗೆ ಇರುವ ಅವಕಾಶಗಳು ಅತ್ಯಂತ ಬಲಹೀನನಿಗೂ ಇರಬೇಕು.

ಮಹಾತ್ಮಗಾಂಧೀಜಿಯವರ ಆದರ್ಶ, ಸರ್ಕಾರವಿಲ್ಲದ ಪ್ರಜಾಪ್ರಭುತ್ವ. ಅದರಲ್ಲಿ ಸಾಮಾಜಿಕ ಜೀವನವು ಸ್ವಯಂ ನಿಯಂತ್ರಿತವಾಗಿರಬೇಕು. ಆ ಆದರ್ಶಪ್ರಜಾಪ್ರಭುತ್ವವು ಗ್ರಾಮಸಮುದಾಯಗಳ ಒಂದು ಸಂಯುಕ್ತ ಸಮುದಾಯ. ಈ ಸಮುದಾಯಗಳು, ಸ್ವಯಂ ಪ್ರೇರಣೆಯ ಆಧಾರದ ಮೇಲೆ ರೂಪಿತವಾಗಬೇಕು. ಸಮಾಜ ವಿಕೇಂದ್ರೀಕರಣವಾಗಿ ಎಲ್ಲ ಕ್ಷೇತ್ರಗಳಲ್ಲೂ ಸಮಾನತೆಯ ತತ್ವ ಇರಬೇಕು. ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಸಾಮರ್ಥ್ಯಕ್ಕೆ ಅನುಗುಣವಾಗಿ ಸಮಾಜ ಸೇವೆಯಲ್ಲಿ ಪಾಲ್ಗೊಳ್ಳಲು ಪೂರ್ಣ ಸ್ವಾತಂತ್ರ್ಯವನ್ನು ನೀಡಿರಬೇಕು ಎಂದು ಅಭಿಪ್ರಾಯಪಡುತ್ತಾರೆ.

ಗಾಂಧೀಜಿಯವರ ಪ್ರಕಾರ ಪ್ರಜಾಪ್ರಭುತ್ವವು ಬಹುಸಂಖ್ಯಾತರ ಆಡಳಿತವನ್ನು ಒಳಗೊಂಡಿದೆ. ಅಂದರೆ ಅಲ್ಪ ಸಂಖ್ಯಾತರ ಅಭಿಪ್ರಾಯಗಳನ್ನು ಸದಾ ತಿರಸ್ಕರಿಸಬೇಕೆಂದು ಅರ್ಥವಲ್ಲ. ಅಂತಸ್ಸಾಕ್ಷಿಗೆ ಸಂಬಂಧಪಟ್ಟ ವಿಷಯಗಳಲ್ಲಿ ಬಹುಸಂಖ್ಯಾತರ ನಿಯಮಕ್ಕೆ ಸ್ಥಾನವಿಲ್ಲ. ಬಹುಸಂಖ್ಯಾತರ ಆಡಳಿತವೆಂದರೆ, ಯಾವುದೇ ಒಬ್ಬ ವ್ಯಕ್ತಿ ಅಭಿಪ್ರಾಯಕ್ಕೆ ಅನೇಕ ವ್ಯಕ್ತಿಗಳ ಅಭಿಪ್ರಾಯಕ್ಕಿಂತ ಹೆಚ್ಚಿನ ತೂಕ ಇರಬೇಕು, ಎಂಬುವುದು ಮಹಾತ್ಮಗಾಂಧೀಜಿಯ ಅಭಿಪ್ರಾಯವಾಗಿದೆ.

ಮಹಾತ್ಮಗಾಂಧೀಜಿಯವರು ಬಹುಸಂಖ್ಯಾತರು, ಅಲ್ಪಸಂಖ್ಯಾತರ ವಿಷಯದಲ್ಲಿ ಉದಾರತೆಯ ತತ್ವವನ್ನು ತೋರಬೇಕೆಂದು ಪ್ರತಿಪಾದಿಸಿದರು. ಅಲ್ಪ ಸಂಖ್ಯಾತರು ಸಾಧಾರಣವಾಗಿ ಬಹು ಸಂಖ್ಯಾತರ ಅಭಿಪ್ರಾಯಕ್ಕೆ ಮಣಿಯಬೇಕೆಂದೂ ಬಯಸಿದರು. ಹಾಗಿಲ್ಲದಿದ್ದರೆ ಪ್ರಜಾಪ್ರಭುತ್ವ ಸರ್ಕಾರವನ್ನು ನಡೆಸಲಾಗುವುದಿಲ್ಲ ಎಂದು ಹೇಳುತ್ತಾರೆ. ರಾಜಕೀಯ ತತ್ವಜ್ಞಾನಿಯಾಗಿರದಿದ್ದರೂ ರಾಷ್ಟ್ರದ ರಾಜಕೀಯ ದರ್ಶನಕ್ಕೆ ಸ್ವಂತ ಕೊಡುಗೆಯನ್ನು ಕೊಟ್ಟಿದ್ದಾರೆ. ಮನುಷ್ಯನನ್ನು ಮತ್ತು ರಾಷ್ಟ್ರವನ್ನು ನೀತಿಯುಕ್ತವನ್ನಾಗಿ ಮಾಡುವುದೇ ಗಾಂಧೀಜಿಯ ಜೀವನೋದ್ದೇಶವಾಗಿತ್ತು. ಅವರು ತಮ್ಮನ್ನು ಜನತೆಯ ಜತೆಗೆ ಸಮೀಕರಿಸಿಕೊಂಡು ದುಡಿದರು. ಅವರು ತಮ್ಮದೇ ಆದ ಆರ್ಥಿಕ, ಸಾಮಾಜಿಕ ದರ್ಶನವನ್ನು ಬೆಳೆಸಿದರು.

ಮಹಾತ್ಮಗಾಂಧೀಜಿ ಅಸಹಕಾರದ ಬಗ್ಗೆ ತಮ್ಮದೇ ಆದ ರೀತಿಯಲ್ಲಿ ಅಭಿಪ್ರಾಯ ಪಡುತ್ತಾರೆ. ಅವರ ಪ್ರಕಾರ ಅಸಹಕಾರವೆಂದರೆ, ಯಾವುದೇ ಸರ್ಕಾರದ ಕಾರ್ಯಾಚರಣೆಯ ಯಶಸ್ಸು, ಆ ರಾಜ್ಯದ ಜನತೆಯ ಪ್ರಭುತ್ವಕ್ಕೆ ಕೊಡಬಹುದಾದ ಸಹಕಾರವನ್ನು ಅವಲಂಬಿಸಿರುತ್ತದೆ. ಜನತೆಯ ಸಹಕಾರವಿಲ್ಲದೆ ಯಾರೂ ಏನನ್ನೂ ಮಾಡಲಾಗುವುದಿಲ್ಲ. ಎಲ್ಲದಕ್ಕೂ ಅದು ಬೇಕೆ ಬೇಕು. ಹೀಗಿರುವಲ್ಲಿ, ಜನತೆ ತಮ್ಮ ಸಹಕಾರವನ್ನು

ಪ್ರಭುತ್ವಕ್ಕೆ ಕೊಡಲು ನಿರಾಕರಿಸಿದಾಗ ಊಹಿಸಲು ಸಾಧ್ಯವಾಗದ ಪರಿಸ್ಥಿತಿ ಉಂಟಾಗುತ್ತದೆ. ಎಲ್ಲಿಯವರೆಗೆ ಜನ ಆರ್ಥಿಕವಾಗಿ ದುರ್ಬಲರಾಗಿ ಹಾಗೂ ಅಜ್ಞಾನರಾಗಿ ಉಳಿಯುವರೋ ಅವರಲ್ಲಿ ಭಯವೆಂಬುದು ಮನೆಮಾಡಿಕೊಂಡಿತ್ತದೆಯೋ ಅಲ್ಲಿಯವರೆಗೆ ಶೋಷಣೆ, ದಬ್ಬಾಳಿಕೆಗಳು ಮುಂದುವರಿಯುತ್ತವೆ. ಜನ ಎಚ್ಚೆತ್ತು ತಮ್ಮ ಸಹಕಾರ ಹಿಂತೆಗೆದುಕೊಂಡರೆ, ಸರಕಾರ ಖಂಡಿತಾ ನಿಷ್ಕ್ರಿಯವಾಗುತ್ತದೆ. ತನ್ಮೂಲಕ ತನ್ನ ಕ್ರೌರ್ಯ, ದಬ್ಬಾಳಿಕೆಯ ಧೋರಣೆ ಬಿಟ್ಟು ಕೊಟ್ಟು ಸರಿದಾರಿಗೆ ಬರುತ್ತದೆ. ಅಸಹಕಾರ ಒಂದು ಆಂದೋಳನ. ಇದು ಹಲವು ಬಗೆಯಲ್ಲಿ ಕಾರ್ಯರೂಪಕ್ಕಿಳಿಯುತ್ತದೆ. ಹರತಾಳ, ಸಾಮೂಹಿಕ ಬಹಿಷ್ಕಾರ, ಪಿಕೆಟಿಂಗ್, ಮುಂತಾದವುಗಳನ್ನು ಬಳಸುವುದರ ಮೂಲಕ, ಇತ್ತ ಜನ ಜಾಗೃತಿ, ಅತ್ತ ಸರ್ಕಾರವನ್ನು ಎಚ್ಚರಿಸುವುದು ಇದರ ಉದ್ದೇಶವಾಗಿದೆ.

ಮಹಾತ್ಮ ಗಾಂಧೀಜಿಯವರಿಗೆ, ರಾಜ್ಯ ರಹಿತವಾದ ಒಂದು ಅಹಿಂಸಾತ್ಮಕ ಸಮಾಜವನ್ನು ನಿರ್ಮಿಸುವುದು ಅವರ ಧ್ಯೇಯವಾಗಿತ್ತು. ಲೋಕತಾಂತ್ರಿಕ ಸಮಾಜ ವ್ಯವಸ್ಥೆಯನ್ನು ಗಾಂಧೀಜಿ ಪುರಸ್ಕರಿಸಿದರು. ಪ್ರಜಾಪ್ರಭುತ್ವದ ನಿಜವಾದ ಸತ್ವವು ಬಹುಮತದಲ್ಲಿ ಮಾತ್ರ ಇರುವುದಿಲ್ಲ. ಆದರೆ ತಮ್ಮ ಸಮಸ್ಯೆಗಳನ್ನು ಪರಿಹರಿಸಲು ಜನತೆ ಬಳಸುವ ಅಹಿಂಸಾತ್ಮಕ ವಿವೇಕ ಮತ್ತು ಸಮಾಜ ಕಲ್ಯಾಣದ ಬಗ್ಗೆ ಜನತೆ ಹೊಂದಿರುವ ಕಳಕಳಿ ಹಾಗೂ ಆಸಕ್ತಿಯಲ್ಲಿ ಪ್ರಜಾಪ್ರಭುತ್ವದ ತಿರುಳು ಅಡಗಿದೆ ಎಂಬುದು ಗಾಂಧೀಜಿಯ ಅಭಿಪ್ರಾಯವಾಗಿದೆ. ಯಾವ ದೇಶದಲ್ಲಿ ಸರಕಾರ ಹಸ್ತ ಕ್ಷೇಪವಿಲ್ಲದೆ ಜನರು ತಮ್ಮ ವ್ಯವಹಾರಗಳನ್ನು ಶಾಂತವಾಗಿ ಸುಲಭವಾಗಿ ಸಾಗಿಸಿಕೊಂಡು ಹೋಗುವರೋ ಆದೇಶದ ಪ್ರಜಾಪ್ರಭುತ್ವ ಹೆಚ್ಚು ಶ್ರೇಷ್ಠವಾದದ್ದು ಎಂಬುದು ಅವರ ಮತವಾಗಿತ್ತು. ಅಂದರೆ ಪ್ರಜಾಪ್ರಭುತ್ವ ಒಂದು ಸರಕಾರಿ ವ್ಯವಸ್ಥೆ ಮಾತ್ರವಾಗಿರದೆ, ಸಾಮಾಜಿಕ ಪದ್ಧತಿಯೂ ಹಾಗೂ ಸಂಸ್ಕಾರವೂ ಆಗಿರಬೇಕು ಎಂದು ಗಾಂಧೀಜಿ ಬಯಸಿದ್ದರು. ಶ್ರೀಮಂತ ಮತ್ತು ಬಡವರ ನಡುವಿನ ಅಂತರ ಕಡಿಮೆಗೊಂಡಾಗ ಮಾತ್ರ ಅಹಿಂಸೆಯ ಆದರ್ಶವನ್ನು ತಲುಪುವುದು ಸಾಧ್ಯವೆಂದು ಅವರು ಬಗೆದಿದ್ದರು. ಆರ್ಥಿಕ ಅಸಮಾನತೆಯ ಇಂದಿನ ಕ್ರೂರ ಪದ್ಧತಿಯನ್ನು ಶುದ್ಧವಾದ ಅಹಿಂಸಾತ್ಮಕ ಮಾರ್ಗದಿಂದ ಮಾತ್ರ ನಿವಾರಿಸಬೇಕು ಎಂಬುದು ಅವರ ಸೂಚನೆಯಾಗಿತ್ತು. ಕೈಗಾರಿಕೆಗಳು ಜನಹಿತಕ್ಕಾಗಿ ಉತ್ಪಾದನೆ ಮಾಡಬೇಕೇ ಹೊರತು ಖಾಸಗಿ ಲಾಭಕ್ಕಾಗಿಯಲ್ಲ. ಉದ್ಯಮಗಳ ವ್ಯವಸ್ಥಾಪನೆಯಲ್ಲಿ ಕಾರ್ಮಿಕರಿಗೂ ಹಕ್ಕುಗಳಿರಬೇಕು. ಜನರು ತಮ್ಮ ಅವಶ್ಯಕತೆಗಳಿಗೆ ಬೇಕಾಗುವಂಥ ಉದ್ಯೋಗ-ದಂಧೆಗಳನ್ನು ತಾವೇ ಸ್ಥಾಪಿಸಿಕೊಂಡು ನಡೆಸಿಕೊಂಡು ಹೋಗಬೇಕೆಂಬುದು ಗಾಂಧೀಜಿಯ ಇಚ್ಛೆಯಾಗಿತ್ತು.

ಮಹಾತ್ಮಗಾಂಧೀಜಿಗೆ ಬೇಕಾಗಿದ್ದುದು ಜನರ ಚಳವಳಿಯಿಂದಲೇ ಹೊರಹೊಮ್ಮುವ ಜನರ ಸರ್ಕಾರ ಪ್ರಭುತ್ವವಲ್ಲ. ಗಾಂಧೀಜಿ ಯಾವತ್ತೂ ಉತ್ತಮ ಪ್ರಭುತ್ವಕ್ಕಾಗಿ ಹಂಬಲಿಸಲೇ ಇಲ್ಲ. ಪ್ರಜಾಪ್ರಭುತ್ವವೆಂಬ ಕಲ್ಪನೆಯೂ ಸಹ ಪ್ರಭುತ್ವವನ್ನು ನಿರಾಕರಿಸುವ ಧೋರಣೆ ಗಾಂಧೀಜಿಯದು. ಆದರಿಂದಲೇ ಗಾಂಧೀಜಿ ಭಾರತದ ರಾಜಕೀಯ ಸ್ವಾತಂತ್ರ್ಯಕ್ಕಾಗಿ ಮತ್ತು ಇಲ್ಲಿನ ಅಸಮಾನತೆ, ವರ್ಗ, ವರ್ಣ, ಸಂಘರ್ಷಗಳ ನಿವಾರಣೆಗಾಗಿ ಒಟ್ಟಿಗೆ ಶ್ರಮಿಸಿದರು. ಒಂದು ಬಲಿಷ್ಠ ಪ್ರಭುತ್ವದಿಂದ ಮಾತ್ರ ಭಾರತದಲ್ಲಿನ ಅಸಮಾನತೆಗಳನ್ನು ಹೋಗಲಾಡಿಸಲು ಸಾಧ್ಯ ಎಂದು ಡಾ.ಬಿ.ಆರ್.ಅಂಬೇಡ್ಕರ್ ನಂಬಿದ್ದರು. ಆದರೆ ಗಾಂಧೀಜಿಗೆ ಒಂದು ಪ್ರಭುತ್ವವನ್ನು ಇನ್ನೊಂದು ಪ್ರಭುತ್ವದಿಂದ ಬದಲಾಯಿಸುವುದು ಬೇಕಾಗಿರಲಿಲ್ಲ.

ಸತ್ಯಶಾಂತಿ, ಅಹಿಂಸೆ ಮತ್ತು ಸಮಾನತೆಯ ಪ್ರತಿಪಾದಕ ಮಹಾತ್ಮಗಾಂಧೀಜಿಯ ವ್ಯಕ್ತಿತ್ವವನ್ನು ವಿಶ್ವದ ಹಲವು ನಾಯಕರು ಹಲವು ವಿಧದಲ್ಲಿ ಬಣ್ಣಿಸಿದುಂಟು. ಒಬ್ಬ ವ್ಯಕ್ತಿ ಅತ್ಯುನ್ನತ ನೈತಿಕ ಜೀವನದ ಮೂಲಕ ಜನಕೋಟಿಯ ನಿಷ್ಠೆಯನ್ನು ಗಳಿಸಬಹುದು ಎಂಬುದಕ್ಕೆ ಗಾಂಧೀಜಿಯವರೇ ಸ್ಪಷ್ಟ ನಿದರ್ಶನ ಎಂದಿದ್ದಾರೆ, ಅಲ್ಬರ್ಟ್ ಐನ್ ಸ್ಟೀನ್ ಮಹಾಶಯ. ಅವರು ಮುಂದುವರಿದು ಹೇಳುವುದೇನೆಂದರೆ, "ನಾನು ಗಾಂಧೀಜಿಯವರನ್ನು ಈ ಯುಗದ ಮಹೋನ್ನತ ರಾಜಕೀಯ ವ್ಯಕ್ತಿಯೆಂದು ಪರಿಗಣಿಸುತ್ತೇನೆ. ಇಂತಹ ವ್ಯಕ್ತಿ, ರಕ್ತ, ಮಾಂಸ ತುಂಬಿಕೊಂಡು, ಈ ಭೂಮಿಯ ಮೇಲಿದ್ದರೆಂಬ ಅಂಶವನ್ನು ಮುಂದಿನ ಪೀಳಿಗೆಯವರು ನಂಬಲಾರರು" , ಈ ಮಾತೇ ಸಾಕು ಗಾಂಧೀಜಿಯ ವ್ಯಕ್ತಿತ್ವ ಎಷ್ಟು ವಿಶ್ವವ್ಯಾಪಿಯಾದ ಪ್ರಸಿದ್ಧಿ ಪಡೆದಿದೆ ಎಂಬುದಕ್ಕೆ, ಮತ್ತೆ ಅವರ ಸತ್ಯಾಗ್ರಹ ಅಸ್ತ್ರ ಅಮೇರಿಕಾದಲ್ಲಿ ಪ್ರಯೋಗಿಸಲಾಯಿತು. ಮಾರ್ಟಿನ್ ಲೂಥರ್ ಕಿಂಗ್ ರವರು ಅದನ್ನು ಯಶಸ್ವಿಯಾಗಿ ಬಳಸಿದರು. "ಕಾಯಿದೇ ಮೂಲಕ ಸಾಧಿಸಲಾಗದ್ದನ್ನು ಅಹಿಂಸೆ ಸಾಧಿಸುತ್ತದೆ"- ಎಂದು ಡಾ.ಕಿಂಗ್ ಹೇಳಿದರು. ಗಾಂಧೀಜಿ ನಿಜವಾಗಿಯೂ ವಿಶ್ವಮಾನವರು. ಮಹಾತ್ಮಗಾಂಧೀಜಿಯವರ, ಚಿಂತನೆಯಂತೆ ಡಾ.ಬಿ.ಆರ್.ಅಂಬೇಡ್ಕರರ ಚಿಂತನೆಯೂ ಸಹ ಪ್ರಜಾಪ್ರಭುತ್ವ ಸಿದ್ಧಾಂತವನ್ನೂ ಪ್ರತಿಪಾದಿಸುತ್ತದೆ.

ಡಾ. ಬಿ.ಆರ್.ಅಂಬೇಡ್ಕರ್ ರವರನ್ನು ಸಂವಿಧಾನ ಶಿಲ್ಪಿ ಎಂದೂ ಗುರುತಿಸಿದ್ದಾರೆ. ಅವರು ಹೆಚ್ಚು ಪ್ರಸಿದ್ಧಿಗೆ ಬಂದಿರುವುದೂ ಅದರಿಂದಲೇ. ಆದರೆ ಒಳಹೊಕ್ಕು ನೋಡಿದಾಗ ಅವರು ಒಬ್ಬ ಮಹಾನ್ ಚಿಂತನಕರಾಗಿ ಕಾಣುತ್ತಾರೆ. ಧರ್ಮ, ರಾಜಕಾರಣ, ಸಮಾಜವಾದ, ಪ್ರಜಾಪ್ರಭುತ್ವ ಮುಂತಾದ ವಿಷಯಗಳ ಬಗ್ಗೆ ಆಳವಾದ ಚಿಂತನೆ ಮಾಡಿದ್ದಾರೆ. ಅವರ ಅಭಿಪ್ರಾಯಗಳು ತುಂಬಾ ಮಾನವೀಯವಾಗಿವೆ. ಅವರಿಗೆ

ಒಂದು ನಿರ್ದಿಷ್ಟವಾದ ಉದ್ದೇಶವೆಂಬುದಿತ್ತು. ಆ ಉದ್ದೇಶ ಮತ್ತಾವುದೂ ಆಗಿರದೆ" ವ್ಯಕ್ತಿ ಸ್ವಾತಂತ್ರ್ಯ ಮತ್ತು ಸಮಾನತೆಯನ್ನಾಧರಿಸಿದ, ವರ್ಗ ರಹಿತ, ವರ್ಣ ರಹಿತ ಸಮಾಜ" ಸ್ಥಾಪನೆ ಎಂಬುದಾಗಿತ್ತು.

ಡಾ.ಬಿ.ಆರ್.ಅಂಬೇಡ್ಕರ್ ರ ಪ್ರಕಾರ ಪ್ರಜಾಪ್ರಭುತ್ವ ಕೇವಲ ಪದ್ಧತಿ ಸರ್ಕಾರ ಮಾತ್ರವಲ್ಲ. ಅದು ಒಂದು ಜೀವನ ವಿಧಾನವೆಂದು ಎಲ್ಲರೂ ಗುರುತಿಸುತ್ತಾರೆ. ಇಂತಹ ಸರ್ಕಾರ ನಿಂತ ನೀರಾಗಬಾರದು. ಅದು ಜನತೆಯ ಆಶೋತ್ತರಗಳಿಗನುಗುಣವಾಗಿ ಪರಿವರ್ತನೆಗೆ ಅಥವಾ ಬದಲಾವಣೆಗೆ ಗುರಿಯಾಗಬೇಕು. ಹಾಗಿದ್ದರೆ ಮಾತ್ರ ಜನತೆಗೆ ಉಪಯುಕ್ತವಾಗಿ ಉಳಿಯುತ್ತದೆಂದು ಡಾ.ಬಿ.ಆರ್. ಅಂಬೇಡ್ಕರ್ ಅಭಿಪ್ರಾಯಪಡುತ್ತಾರೆ.

ಪ್ರಾಚೀನ ಗ್ರೀಕ್ ಮತ್ತು ಆಧುನಿಕ ಪ್ರಜಾಪ್ರಭುತ್ವಗಳಲ್ಲಿ ಸಹಜವಾಗಿ ಅಂತರಗಳಿವೆ. ಗ್ರೀಕರದು ನೇರ ಪ್ರಜಾಪ್ರಭುತ್ವ, ನಮ್ಮದು ಪ್ರತಿನಿಧಿಕ. ಗ್ರೀಕರಲ್ಲಿ ಬಹುಸಂಖ್ಯೆಯ ವ್ಯಕ್ತಿಗಳು ಗುಲಾಮರಾಗಿದ್ದರು. ಅವರಿಗೆ ಮತಾಧಿಕಾರವಿರಲಿಲ್ಲ. ರಾಜಕೀಯದಲ್ಲಿ ಸಕ್ರಿಯ ಪಾತ್ರವೆಂಬುದು, ಮಹಿಳೆಯರನ್ನೊಳಗೊಂಡು ಬಹು ಅಂಶ ವ್ಯಕ್ತಿಗಳಾಗಿರಲಿಲ್ಲ. ಅದೇ ರೀತಿ ಬೇರೇ ಬೇರೇ ಕಾಲದಲ್ಲಿದ್ದ ಪ್ರಜಾಪ್ರಭುತ್ವಗಳಲ್ಲಿ ಭಿನ್ನತೆಗಳಿದ್ದದನ್ನು ಕಾಣುತ್ತೇವೆ.

ಡಾ. ಬಿ.ಆರ್.ಅಂಬೇಡ್ಕರ್ ರವರು ವಿಶಿಷ್ಟವಾದ ಪ್ರಜಾಸತ್ತಾತ್ಮಕ ಪದ್ಧತಿ ಸರ್ಕಾರವನ್ನು ಪ್ರತಿಪಾದಿಸುತ್ತಾರೆ. ಅವರ ಪ್ರಕಾರ, ಪ್ರಜಾಪ್ರಭುತ್ವ ವ್ಯವಸ್ತೆಯಲ್ಲಿ ಯಾವುದೇ ಒಂದು ವರ್ಗ ಅಥವಾ ಪಂಗಡವೆಂಬುದು ಸಮಾಜದಲ್ಲಿ ಬಲಿಷ್ಠವಾಗಿ ಉಳಿಯಕೂಡದು. ಹಾಗೆ ಉಳಿದಿದ್ದಾದರೆ ಅದು ಇತರರ ಮೇಲೆ ತನ್ನ ವರ್ಚಸ್ಸನ್ನು ಬೀರುವುದರ ಮೂಲಕ ದಬ್ಬಾಳಿಕೆಗೆ ಅವಕಾಶ ಮಾಡಿಕೊಡುತ್ತದೆ. ನಿವಾರಣೋಪಾಯದ ಮೂಲಕ ಅದನ್ನು ನಿವಾರಿಸತಕ್ಕದ್ದು. ಇಂತಹ ವ್ಯವಸ್ಥೆಯಲ್ಲಿ, ಸಮಾಜದ ವಿವಿದ ಕ್ಷೇತ್ರಗಳಲ್ಲಿ ಸಮಗ್ರ ಪರಿವರ್ತನೆ ಅಥವಾ ಬದಲಾವಣೆಯಾಗತಕ್ಕದ್ದು. ಈ ಪರಿವರ್ತನೆಯ ಪ್ರಕ್ರಿಯೆಯಲ್ಲಿ ಯಾವುದೇ ರಕ್ತಪಾತ ಅಥವಾ ಸಂಘರ್ಷವಿರಕೂಡದು. ಪರಿವರ್ತನೆ ನಿಜವಾಗಿಯೂ ಪ್ರಗತಿಯ ಸಂಕೇತವೆಂಬುದನ್ನು ನಾವು ಮರೆಯಬಾರದು ಎಂದು ಹೇಳುತ್ತಾರೆ.

ಡಾ.ಬಿ.ಆರ್.ಅಂಬೇಡ್ಕರರ ಪ್ರಕಾರ ವಂಶ ಪಾರಂಪರ್ಯದ ಆಡಳಿತವೆಂಬುದು, ಯಾವುದೇ ರೂಪದಲ್ಲಿ ಕಾಣಿಸಿಕೊಳ್ಳಕೂಡದು. ಹಾಗೆ ಒಂದು ಪಕ್ಷ ಇದ್ದುದಾದರೆ, ವ್ಯಕ್ತಿ ಸ್ವಾತಂತ್ರ್ಯ ದಮನವಾಗುವುದು ನಿಶ್ಚಿತ. ಜನತೆಯ ಸಮ್ಮತಿ ಇಲ್ಲದೆ ಪ್ರಭುತ್ವ ಆಡಳಿತಾತ್ಮಕ ಕ್ರಮಗಳನ್ನು ಜಾರಿಗೆ ತರಕೂಡದು. ಕಾಯಿದೆ ರೂಪಿಸುವ ಮತ್ತು ಅನುಷ್ಠಾನಕ್ಕೆ ತರುವ ವಿಷಯದಲ್ಲೂ ಅಷ್ಟೇ. ಇಲ್ಲಿ ಯಾವುದೇ ದಮನಕಾರಕ ಪ್ರವೃತ್ತಿ ನಿಷಿದ್ಧ. ಪ್ರತಿಯೊಂದಕ್ಕೂ ಪ್ರಜೆಗಳ ಸಮ್ಮತಿ ಅವಶ್ಯ ಎಂದು ಅಂಬೇಡ್ಕರ್ ಹೇಳುತ್ತಾರೆ. ಪ್ರಜಾಸತ್ತೆ ಎಂದರೆ, ಪ್ರಜೆಗಳೇ ಪ್ರಭುಗಳು, ಇಲ್ಲಿ ಪ್ರಜೆಗಳು ತಮ್ಮನ್ನು ತಾವು ಆಳಿಕೊಳ್ಳುತ್ತಾರೆ. ಅವರೇ ಸಾರ್ವಭೌಮ ಅಧಿಕಾರಿಗಳು. ಅವರು ನಿಜಕ್ಕೂ ಧಣಿಗಳು, ಆಡಳಿತಾಧಿಕಾರಿಗಳು ಅವರ ಸೇವಕರು, ಪ್ರಜೆಗಳಿಗೆ ತಮ್ಮದೇ ಆದ ಇಚ್ಛೆ, ಧ್ವನಿ, ಆಯ್ಕೆ, ಸಮ್ಮತಿ, ಆದೇಶಗಳೆಂಬುವು ಇವೆ. ಇವುಗಳು ಶಾಸಕಾಂಗದ ಒಳಗೆ ಅಥವಾ ಹೊರಗೆ ಸೂಕ್ತವಾಗಿ ಅಭಿವ್ಯಕ್ತವಾಗಬೇಕು. ಯಾವ ಅಡಚಣೆ ಇರಕೂಡದು. ಆಳುವವರು ಇದನ್ನು ಗಮನಿಸತಕ್ಕದ್ದು. "ಇಚ್ಛೆ" ಎಂಬುದು ಕಾಯಿದೆ ರೂಪದಲ್ಲಿ ಅಭಿವ್ಯಕ್ತಿಯಾಗಬೇಕು. ಜನತೆಯ "ಧ್ವನಿ" ಆಲಿಸಲ್ಪಡಬೇಕು. ಮತ್ತೆ ಆಡಳಿತದಲ್ಲಿ "ಆಯ್ಕೆ","ಆದೇಶ", "ಸಮ್ಮತಿ"ಗಳಿಗೆ ಹೆಚ್ಚಿನ ಪುರಸ್ಕಾರವಿರತಕ್ಕದ್ದು. ಹಾಗಿದ್ದರೆ ಮಾತ್ರ ಪ್ರಜಾಪ್ರಭುತ್ವ ನಿಜಕ್ಕೂ ಅರ್ಥಪೂರ್ಣವೆನಿಸುತ್ತದೆ ಎಂದು ಅಂಬೇಡ್ಕರ್ ಅಭಿಪ್ರಾಯ ಪಡುತ್ತಾರೆ.

ಪ್ರಜಾಪ್ರಭುತ್ವದ ಯಶಸ್ವೀ ಕಾರ್ಯಾಚರಣೆಗೆ ಸಮರ್ಥ ವಿರೋಧ ಪಕ್ಷವಿರತಕ್ಕದ್ದು. ಆಳುವ ಪಕ್ಷವನ್ನು ನಿಯಂತ್ರಿಸುವ, ತಪ್ಪುತಡಿಗಳನ್ನು ಎತ್ತಿತೋರಿಸುವ ರಚನಾತ್ಮಕ ಸಲಹೆ ಸೂಚನೆಗಳನ್ನು ಕೊಡುವ, ವಿಮರ್ಶಿಸುವ ಸಾಮರ್ಥ್ಯ ಅದಕ್ಕಿರಬೇಕು.ಜನತೆಯ ವಿಶ್ವಾಸಕ್ಕೆ ಪಾತ್ರವಾಗಿರತಕ್ಕದ್ದು. ಇಂಗ್ಲೇಂಡಿನಲ್ಲಿ ಇರುವ ಆಳುವ ಪಕ್ಷಕ್ಕಿರುವಷ್ಟೇ ಬೆಲೆ ವಿರೋಧ ಪಕ್ಷಕ್ಕಿರತಕ್ಕದ್ದು ಎಂದು ಡಾ.ಬಿ.ಆರ್.ಅಂಬೇಡ್ಕರ್ ಹೇಳುತ್ತಾರೆ. ಮುಂದುವರಿದು ಪ್ರಜಾಪ್ರಭುತ್ವ ಅರ್ಥಪೂರ್ಣವೆನಿಸಬೇಕೆಂದರೆ, ಸ್ವತಂತ್ರ ಹಾಗೂ ನಿಷ್ಪಕ್ಷಪಾತವಾದ, ದೋಷರಹಿತ ಚುನಾವಣಾ ವ್ಯವಸ್ಥೆ ಇರತಕ್ಕದ್ದು. ಕ್ರಾಂತಿ ಮೂಲಕ ಸಾಧಿಸಲಾಗದ್ದನ್ನು ಮತ ಪತ್ರಗಳ ಮೂಲಕ ಸಾಧಿಸಲಾಗುವುದು. ಮತ ಪತ್ರಗಳು ನಿಜಕ್ಕಕೂ ಬಲಿಷ್ಠವಾದವುಗಳು. ಬಂದೂಕಿನ ಗುಂಡುಗಳಿಗಿರುವಷ್ಟೇ ಶಕ್ತಿ ಅವುಗಳಿಗಿದೆ ಎಂದು ಅಂಬೇಡ್ಕರ್ ರವರು ಅಭಿಪ್ರಾಯ ಪಡುತ್ತಾರೆ.

ಡಾ. ಅಂಬೇಡ್ಕರ್ ರು ಪ್ರಜಾಪ್ರಭುತ್ವವನ್ನು ಹೆಚ್ಚು ಪ್ರೀತಿಸುತ್ತದ್ದರು. "ಫ್ಯಾಸಿಂ" ನಂತಹ ಅಧಿಕಾರಶಾಹೀ ವ್ಯವಸ್ಥೆಯನ್ನು ವಿರೋಧಿಸುವವರಾಗಿದ್ದರು. ಪ್ರಜಾಸತ್ತೆಯ ಮೌಲ್ಯಗಳಾದ ಸ್ವಾತಂತ್ರ್ಯ

ಸಮಾನತೆ, ಭ್ರಾತೃತ್ವ, ನ್ಯಾಯ ಮುಂತಾದವುಗಳನ್ನು ರಕ್ಷಿಸತಕ್ಕದ್ದು ಎಂದು ಹೇಳುತ್ತಿದ್ದರು. ಇವುಗಳ ಜೊತೆಗೆ ಮತ್ತೆ ಕೆಲಗುಣ ವಿಶೇಷತೆಗಳಿರತಕ್ಕದೆಂದು ಪ್ರತಿಪಾದಿಸಿದ್ದಾರೆ. ಶ್ರೀಮಂತರು, ಬಡವರು, ಉಳ್ಳವರು ಇಲ್ಲದವರ ಮಧ್ಯೆ ಎದ್ದು ಕಾಣುವ ವ್ಯತ್ಯಾಸವಿರಕೂಡದು. ಆರ್ಥಿಕ ವಿಷಮತೆ ಎಂಬುದು ಪ್ರಜಾಪ್ರಭುತ್ವದ ಯಶಸ್ವೀ ಕಾರ್ಯಾಚರಣೆಗೆ ಅಡಚಣೆ ತಂದೊಡ್ಡುತ್ತದೆ. ಶ್ರೀಮಂತರು ಪ್ರಬಲರಾಗುತ್ತಾರೆ. ಆಗ ಪ್ರಜಾಸತ್ತೆಯ ಅಣಕ ಪ್ರಾರಂಭವಾಗುತ್ತದೆ. ಹೆಸರಿಗೆ ಮಾತ್ರ ಪ್ರಜಾಪ್ರಭುತ್ವ, ಒಳಹೊಕ್ಕು ನೋಡಿದರೆ ಶ್ರೀಮಂತ ಪ್ರಭುತ್ವವಿರುತ್ತದೆ. ಕಾರಣ, ಪ್ರಜಾಪ್ರಭುತ್ವ ಶುದ್ಧವಾಗಿ ಉಳಿಯತಕ್ಕದ್ದು. ಅದು "ಮಿಥ್ಯಾ ಪ್ರಜಾಪ್ರಭುತ್ವವಾಗಿ ಮಾರ್ಪಡಲಾಗದು. ಹಾಗೇನೇ, ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಐಕ್ಯತೆ, ಸಮಗ್ರತೆ, ಸಾಮರಸ್ಯವೆಂಬುವುಗಳನ್ನು ಜನತೆ ಅರ್ಥ ಮಾಡಿಕೊಳ್ಳತಕ್ಕದ್ದು, ಅನೈಕ್ಯತೆ ಎಂಬುದು ಒಂದು ಕೇಡು ಎಂದು ಬಗೆಯಬೇಕು. ಯಾವಾಗಲೂ ಒಡೆದ ಮನೆ ತುಂಬಾ ಅಪಾಯಕಾರಿ. ಇದಲ್ಲದೆ ಸಮಾಜದ ವಿಭಿನ್ನ ವರ್ಗದ ಜನರಲ್ಲಿ ತಾರತಮ್ಯ ಭಾವನೆ ಇರಕೂಡದು, ಪ್ರತಿಯೊಬ್ಬರಿಗೂ ಕಾಯಿದೆಯ ಸಮಾನತೆ, ಸಮಾನ ರಕ್ಷಣೆ ಮತ್ತು ಸಮಾನಾವಕಾಶಕ್ಕೆ ಅವಕಾಶ ಕಲ್ಪಿಸಲ್ಪಟ್ಟಿರಬೇಕು. ಸಂವಿಧಾನಾತ್ಮಕ ಕಾಯಿದೆಗಳಿಗೆ ಜನರು ಗೌರವ ತೋರಿಸಬೇಕು. ಜನರು ಇಂಗ್ಲೆಂಡಿನ ಜನರಂತೆ ಪ್ರಜಾಸತ್ತೆಯ ಬಗ್ಗೆ ಸತ್ ಸಂಪ್ರದಾಯಗಳನ್ನು ರೂಢಿಸಿಕೊಳ್ಳಬೇಕು. ಜೊತೆಗೆ, ಆಡಳಿತ, ಅಧಿಕಾರ ಇತ್ಯಾದಿಗಳ ಬಗ್ಗೆ ಜಾಗೃತರಾಗಿರಬೇಕು, ಅದನ್ನು ನಾವು ಕಟ್ಟೆಚ್ಚರವೆನ್ನುತ್ತೇವೆ. ಅಲ್ಲದೆ ಸಾರ್ವಜನಿಕವಾದ ಪ್ರತಿಯೊಂದು ವಿಷಯದಲ್ಲಿ, ಪ್ರಭುತ್ವದ ಆಡಳಿತದಲ್ಲಿ ಜನರು ಸಕ್ರಿಯ ಪಾತ್ರವಹಿಸ ತಕ್ಕದು, ಅವರು ಎಂದೂ ಅವಜ್ಞರಾಗಿರಕೂಡದು. ಹಾಗೇನೇ, ಪತ್ರಿಕಾ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯಬೇಕು. ಮಾತ್ರೆತ್ತಿದರೆ ಶಕ್ತಿ ಪ್ರದರ್ಶನ ಕೂಡದು. ಅದು ನಿಷಿದ್ಧ ಎಂದು ಡಾ.ಬಿ.ಆರ್.ಅಂಬೇಡ್ಕರ್ ರವರು ಹೇಳುತ್ತಾರೆ.

ಜವಾಹರಲಾಲ್ ನೆಹರೂ, ಮಹಾತ್ಮಗಾಂಧೀಜಿ ಹಾಗೂ ಡಾ.ಬಿ.ಆರ್. ಅಂಬೇಡ್ಕರ್ ರಂತಹ ಚಿಂತನಶೀಲರು ಅಭಿವೃದ್ಧಿಯ ಬಗ್ಗೆ ತಮ್ಮದೇ ಆದ ಹೇಳಿಕೆಯನ್ನು ವ್ಯಕ್ತಪಡಿಸಿದ್ದಾರೆ. ಜವಾಹರಲಾಲ್ ನೆಹರೂರವರು ಬೃಹತ್ ಕೈಗಾರಿಕೆಗಳ ಸ್ಥಾಪನೆ ಬಗ್ಗೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಜೊತೆಗೆ ಆಧುನಿಕ ವಿಜ್ಞಾನದ ಕಡೆ ಗಮನ ಹರಿಸಿದ್ದಾರೆ. ಆದರೆ ಮಹಾತ್ಮಗಾಂಧೀಜಿಯವರು ಗುಡಿ ಕೈಗಾರಿಕೆಗಳ ಮೂಲಕ ಅಭಿವೃದ್ಧಿ ಸಾಧ್ಯ ಎಂದು ತೋರಿಸಿಕೊಟ್ಟಿದ್ದಾರೆ. ಅಲ್ಲದೇ ಗ್ರಾಮ ಸ್ವರಾಜ್ಯದ ಬಗ್ಗೆ ಪ್ರತಿಪಾದಿಸಿದ್ದಾರೆ. ಅವರು ಅಧಿಕಾರ ವಿಕೇಂದ್ರೀಕರಣದ ಕಲ್ಪನೆಯಲ್ಲಿ ದೇಶ ಮುಂದುವರಿಯಬೇಕು ಎಂದು ಹೇಳಿದ್ದಾರೆ. ನಮ್ಮ ದೇಶದ ಚಿಂತನ ಶೀಲರ ಚಿಂತನೆ ತರುವುದು ಕಾರ್ಯಕ್ರಮದ ಮೂಲಕ. ನಮ್ಮ ದೇಶದ ಅಭಿವೃದ್ಧಿಗೆ ಇವರ ಚಿಂತನೆ

ಪ್ರಗತಿದಾಯಕವಾಗಿದೆ. ಡಾ.ಬಿ.ಆರ.ಅಂಬೇಡ್ಕರ್ ರವರು ಪ್ರಜಾಸತ್ತ ಸಮಾಜವಾದದಡಿಯಲ್ಲಿ ವರ್ಗರಹಿತ, ವರ್ಣರಹಿತ ದುಡಿಮೆ ಬಗ್ಗೆ ಹೆಚ್ಚು ಗಮನಹರಿಸಿದ್ದಾರೆ. ಈ ಮೂವರ ಚಿಂತನೆಯೂ ಸಮಾನವಾದದ್ದು ಮತ್ತು ಸಮರ್ಥವಾದದ್ದು. ಆದರೆ ಕಾರ್ಯಕ್ರಮ ರೂಪಿಕೆಯಲ್ಲಿ ಭಿನ್ನತೆ ಇದೆ.



ವಿದೇಶಿ ಬಂಡವಾಳಗಾರರು ಭಾರತದಲ್ಲಿ ಬೃಹತ್ ಉದ್ದಿಮೆ ಪ್ರಾರಂಭಿಸಲು ನೆಹರೂರವರ ವಿದೇಶಾಂಗ ನೀತಿ ಸ್ವಲ್ಪಮಟ್ಟಿಗೆ ಕಾರಣ. ನೆಹರೂರವರು ವಿದೇಶಿ ಬಂಡವಾಳಗಾರರಿಗೆ ಎಲ್ಲ ರೀತಿಯ ಸಹಕಾರ ನೀಡಿದರು. ಆದುದರಿಂದ ವಿದೇಶಿ ಉದ್ದಿಮೆಗಳು ಈಗ ಭಾರತದಲ್ಲಿ ದುಡಿಮೆಯನ್ನು ಪ್ರಾರಂಭಿಸಿವೆ. ವಿದೇಶಿ ಬಂಡವಾಳಗಾರರಿಂದ ಅಭಿವೃದ್ಧಿ ಸಾಧ್ಯ ಎಂದು ನೆಹರೂರ್ ರವರ ಅಭಿಪ್ರಾಯವಾಗಿತ್ತು. ಆದರೆ ಗಾಂಧೀಜಿಯವರು ಭಾರತದ ಅಭಿವೃದ್ಧಿ ಗ್ರಾಮಗಳ ಮೂಲಕ, ಗ್ರಾಮಗಳ ಅಭಿವೃದ್ಧಿಯ ಮೂಲಕವೇ ಆಗಬೇಕು ಎಂಬ ಅಭಿಪ್ರಾಯವನ್ನು ಹೊಂದಿದ್ದರು. ಬಹುಮಟ್ಟಿಗೆ ಗಾಂಧೀಜಿಯವರ ಯೋಜನೆ ಸ್ಥಿರವಾಗಿ ನಿಲ್ಲುವಂತಹದು. ಭಾರತದ ಮುಂದಿನ ಭವಿಷ್ಯಕ್ಕೆ ಭದ್ರಬುನಾದಿ ಹಾಕುವಂತಹದು. ನೆಹರೂರವರ ಪ್ರಕಾರ ಭಾರತದ ಪ್ರಗತಿ ಶೀಘ್ರವಾಗಿ ಆಗಬೇಕು. ಮತ್ತು ವೈಜ್ಞಾನಿಕವಾಗಿ ಕಾರ್ಯರೂಪಕ್ಕೆ ಬರಬೇಕು, ಎಂಬುವುದೇ ಆಗಿದೆ. ಗಾಂಧೀಜಿಯವರ ಗ್ರಾಮ ಸ್ವರಾಜ್ಯದ ವೇಗ ಅತ್ಯಂತ ನಿಧಾನವಾಗಿ ಸಾಗುವಂತದು. ವಿದೇಶಿ ಬಂಡವಾಳಗಾರರ ಒಪ್ಪಂದಗಳು ಭಾರತದ ಅಭಿವೃದ್ಧಿಗೆ ಪೂರಕ. ಆದರೆ ಅದು ಎಲ್ಲ ಜನರಿಗೆ ತಲುಪುವುದು ಕಷ್ಟ. ಬಡವರಿಗೆ ಇದರ ಪ್ರತಿಫಲ ದೊರೆಯುವಂತೆಯೇ ಇಲ್ಲ. ಶ್ರೀಮಂತ ವಿದೇಶಿ ಬಂಡವಾಳಗಾರರು ಯಾವುದೇ ಒಪ್ಪಂದಗಳನ್ನು ಭಾರತದಲ್ಲಿ ಕಾರ್ಯರೂಪಕ್ಕೆ ತರಲು, ಭಾರತದಲ್ಲಿನ ಜನಭಿಪ್ರಾಯ ಮುಖ್ಯ. ಜನರ ಒಪ್ಪಿಗೆ ಮತ್ತು ಜನರ ಸಹಕಾರ ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಮುಖ್ಯವಾದದ್ದು. ಜವಾಹರಲಾಲ್ ನೆಹರೂ, ಮಹಾತ್ಮಗಾಂಧೀಜಿ ಹಾಗೂ ಡಾ.ಬಿ.ಆರ್. ಅಂಬೇಡ್ಕರ್ ರವರ ಚಿಂತನೆ ಭಾರತದ ಅಭಿವೃದ್ಧಿಗೆ ಸಮರ್ಥನೀಯವಾಗಿದೆ.

# ಅಧ್ಯಾಯ-೪

## ಆಡಳಿತ ವ್ಯವಸ್ಥೆ ಮತ್ತು ಪ್ರಜೆಗಳು

ಯಾವುದೇ ರೀತಿಯ ಆಡಳಿತದ ರೂಪಿಕೆ ಮತ್ತು ಅದರ ನಿರ್ವಹಣೆಯಲ್ಲಿ ಪ್ರಜೆಗಳ ಪಾತ್ರ ಪ್ರಮುಖವಾದುದು. ಆಡಳಿತದ ಯಶಸ್ಸು ಮತ್ತು ಅಪಯಶಸ್ಸಿಗೆ ಜನರು ಕಾರಣವಾಗುವ ಸಾಧ್ಯತೆಗಳನ್ನು ತಳ್ಳಿ ಹಾಕುವಂತಿಲ್ಲ. ಜನರು ಅಥವಾ ಪ್ರಜೆಗಳು ಎಂಬುದು ನಿರ್ಜೀವ ಜಡವಸ್ತುವಿನಂತಲ್ಲ. ಅದು ಒಟ್ಟು ಬದುಕಿನ ಆಶೋತ್ತರಗಳ ಪ್ರತಿಬಿಂಬ. ಹೀಗಾಗಿ ಪ್ರಜೆಗಳು ಪ್ರತಿಯೊಂದು ದೇಶದ ಆಡಳಿತ ದಕ್ಷತೆಯ ಮತ್ತು ದುರಾಡಳಿದ ಸಂಕೇತಗಳಿಗೆ ಸಾಕ್ಷಿಯಾಗಿರುತ್ತಾರೆ. ಇದು ವರ್ಗ, ಜಾತಿ, ಲಿಂಗ, ಧರ್ಮಕ್ಕನ್ವಯವಾಗಿ ನಿರ್ಧರಿತವಾಗಿರುತ್ತದೆ.

ಆಡಳಿತವು ಅಧಿಕಾರ ಕೇಂದ್ರಿತವಾದುದು. ಅಧಿಕಾರ ಹಿಡಿಯುವ ಜನರೇ ಆಡಳಿತವನ್ನು ನಿರ್ವಹಿಸುವರು. ಆದ್ದರಿಂದ ಅಧಿಕಾರವನ್ನು ಹಿಡಿಯುವ ಜನವರ್ಗ ಮುಖ್ಯ. ಅದರಲ್ಲಿ ಎಲ್ಲ ಜನರ ಮುಖ್ಯ ಪಾತ್ರವೇನೆಂಬುದನ್ನು ವಿಶ್ಲೇಷಿಸಿಕೊಳ್ಳಬೇಕಾಗುತ್ತದೆ. ಆಡಳಿತದ ಸೂತ್ರ ಮತ್ತು ಅದರ ಕಾರ್ಯ ನಿರ್ವಹಣೆಯನ್ನು ಪೂರೈಸಲು ನಿಯಮಗಳನ್ನು ಬುದ್ಧಿ ಜೀವಿಗಳು ರೂಪಿಸುತ್ತಾರೆ. ಇದರಲ್ಲಿ ಎಲ್ಲ ಜನವರ್ಗಗಳು ಭಾಗವಹಿಸುತ್ತದೆ. ಆದರೆ ಅನಕ್ಷರತೆ, ಮುಗ್ಧತೆ ತುಂಬಿರುವ ಸಮಾಜದಲ್ಲಿ ಅಕ್ಷರ ಕಲಿತ ಕೆಲವೇ ಜನವರ್ಗದಲ್ಲಿ ಮಾತ್ರ ಅಧಿಕಾರವಿರುತ್ತದೆ. ಅವರು ಮಾತ್ರ ಸೂತ್ರಧಾರಿಗಳಾಗಿ ಆಡಳಿತವನ್ನು ನಿರ್ವಹಿಸುತ್ತಾರೆ. ಸೀಮಿತವಾದ ಜನವರ್ಗದಲ್ಲಿ ಮಾತ್ರ ಅಧಿಕಾರ ಕೇಂದ್ರೀಕರಣಗೊಂಡಾಗ ಆಡಳಿತದ ಸೂತ್ರಗಳೂ ಕೂಡ ಅವರಿಗೆ ಅನುಕೂಲವಾಗುವಂತೆಯೇ ರೂಪಿತವಾಗಿರುತ್ತದೆ. ಯಾವುದೇ ಸಮಾಜದ ಆಡಳಿತವು ಜನರ ಕೈಯಲ್ಲಿರುತ್ತದೆಯೋ ಆ ಸಮಾಜ ಮಾತ್ರ ತನ್ನ ಧ್ಯೆಯೋದ್ದೇಶಗಳನ್ನು ಈಡೇರಿಸಿಕೊಳ್ಳಬಲ್ಲದು. ಪ್ರಗತಿಯತ್ತ ಸಾಗಬಲ್ಲದು. ಆದ್ದರಿಂದ ಆಡಳಿತ ನಿರ್ವಹಣೆಯಲ್ಲಿ ಜನರು ನೇರವಾಗಿ ಭಾಗವಹಿಸಬೇಕಾಗುತ್ತದೆ. ಜನರು ಆಡಳಿತದಲ್ಲಿ ಭಾಗವಹಿಸುವ ಕ್ರಿಯೆಯೇ ಆಡಳಿತ ವೀಕೇಂದ್ರಿಕರಣವಾಗಿರುತ್ತದೆ. ಅಧಿಕಾರ ವಿಕೇಂದ್ರೀಕರಣಗೊಂಡಂತೆ, ಆಡಳಿತ ನಿರ್ವಹಣೆಯ ಕಾರ್ಯವ್ಯಾಪ್ತಿ ವಿಸ್ತಾರಗೊಳ್ಳುತ್ತದೆ. ಜನರ ಭಾಗವಹಿಸುವಿಕೆಗೆ ಸಹಕಾರಿಯಾಗುತ್ತದೆ. ಇಲ್ಲದಿದ್ದಲ್ಲಿ ಕೆಲವೇ ಜನರ ವರ್ಗದ ಹಿಡಿತದಲ್ಲಿ ಅಧಿಕಾರ ಮತ್ತು ಆಡಳಿತವಿದ್ದಾಗ, ಅದು ಸರ್ವಾಧಿಕಾರ ಪ್ರಭುತ್ವವಾಗುತ್ತದೆಯೇ ಹೊರತು ಪ್ರಜಾಪ್ರಭುತ್ವವಾಗುವುದಿಲ್ಲ.

ಪ್ರಜಾಪ್ರಭುತ್ವದ ಮೂಲಧಾತು ಪ್ರಜೆಗಳು. ಆಡಳಿತವನ್ನು ರೂಪಿಸುವ, ನಿರ್ವಹಿಸುವ, ಅಧಿಕಾರ ಚಲಾಯಿಸುವ, ಎಲ್ಲ ಅವಕಾಶಗಳು ಜನರಿಗೆ ಇರುವುದರಿಂದ ಪ್ರಜಾಪ್ರಭುತ್ವವು ಪ್ರಜೆಗಳ ಪ್ರಭುತ್ವವಾಗಿರುತ್ತದೆ. ಅದು ಜನರ ಆಡಳಿತವಾಗಿರುತ್ತದೆ. ಅಧಿಕಾರವನ್ನು ಪಲ್ಲಟಗೊಳಿಸುವ ಆಡಳಿತವನ್ನು ಬದಲಾಯಿಸುವ, ಅವಕಾಶ ಪ್ರಜೆಗಳಿಗಿರುತ್ತದೆ. ಪ್ರಜೆಗಳಿಂದ ರೂಪಿತಗೊಂಡ ಆಡಳಿತದಲ್ಲಿನ ಅಧಿಕಾರವು ವರ್ಗಹಿತ ಕಾಪಾಡದೆ ಎಲ್ಲರ ಬಗೆಗೆ ಪೂರಕವಾಗಿ ನಡೆಯುತ್ತದೆ. ಹೀಗಾಗಿ ಆಡಳಿತದ ಸೂತ್ರಧಾರಿಗಳು ಪ್ರಜೆಗಳೇ ಆಗಿರುತ್ತಾರೆ.

ಹಿಂದೆ ಬ್ರಿಟಿಷರು ಭಾರತಕ್ಕೆ ಬಂದಾಗ ಗ್ರಾಮಗಳ ಆಡಳಿತವನ್ನು ಗ್ರಾಮಸ್ಥರೇ ನೋಡಿಕೊಳ್ಳುತ್ತಿದ್ದ 'ಗ್ರಾಮಪಂಚಾಯಿತಿ' ಎಂಬ ಪ್ರಜಾಧಿಕಾರ ಸಂಸ್ಥೆಗಳು ಇದ್ದುವು. ಕಾರ್ಯಾಂಗ, ನ್ಯಾಯಾಂಗ ಅಧಿಕಾರಗಳಿದ್ದ ಅವು ಗಣರಾಜ್ಯಗಳು ಎನ್ನುವಂತಿದ್ದವು. ಅವುಗಳ ಸದಸ್ಯರು ಗ್ರಾಮದ ಆಡಳಿತ ಕಾರ್ಯಗಳೇ ಅಲ್ಲದೆ ಅಪರಾಧಿಗಳ ವಿಚಾರಣೆಯನ್ನೂ ನಡೆಯಿಸಿ ಶಿಕ್ಷೆ ವಿಧಿಸುವ ಕೆಲಸವನ್ನು ನಿರ್ವಹಿಸುತ್ತಿದ್ದರು. ಆದ ಕಾರಣ ಗ್ರಾಮ ಪಂಚಾಯಿತಿಗಳ ಸದಸ್ಯರಿಗೆ ಬಹಳ ಗೌರವವಿತ್ತು. ಗ್ರಾಮದಲ್ಲಿ ನಡೆಯಬೇಕಾಗಿದ್ದ ಕಾರ್ಯಕಲಾಪಗಳಲ್ಲಿ ಬಹುಭಾಗವು ಈ ಗ್ರಾಮ ಪಂಚಾಯಿತಿಗಳ ಮೇಲ್ವಿಚಾರಣೆಯಲ್ಲಿ ಸಹಕಾರ ಕ್ರಮದಲ್ಲಿ ನಡೆಯುತ್ತಿದ್ದುವು. ಈ ಬಗೆಯ ಸ್ಥಳೀಯ ಪ್ರಜಾಧಿಕಾರ ಸಂಸ್ಥೆಗಳಿಂದ ಕೆಲಸ ನಡೆದುದರ ಪರಿಣಾಮವಾಗಿ, ಭಾರತೀಯ ನಾಗರಿಕತೆ, ಸಂಸ್ಕೃತಿಗಳು ನಾಶವಾಗದೆ ಉಳಿದಿರುವುದು ಸಾಧ್ಯವಾಯಿತು. ಮಹಾತ್ಮಗಾಂಧೀಜಿಯವರ ಮಹತ್ವಾಕಾಂಕ್ಷೆಯ ಗ್ರಾಮ ಸ್ವರಾಜ್ಯ ಕಲ್ಪನೆ, ಗ್ರಾಮ ಸ್ವರಾಜ್ಯ ಸ್ಥಾಪನೆ ಭಾರತೀಯ ಸಮಾಜಕ್ಕೆ ಅತ್ಯಗತ್ಯವಾಯಿತು.

ದೇಶದಲ್ಲಿ ಪ್ರಜಾರಾಜ್ಯ ಬೇರೂರಿ ನಮ್ಮ ಗ್ರಾಮೀಣ ಜನ ಕೋಟಿ ಅದರಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಪೂರ್ಣ ಸ್ವರಾಜ್ಯ ಸಾಧಿಸಲು ಗಾಂಧೀಜಿ ಹಾಕಿಕೊಟ್ಟ ರಚನಾತ್ಮಕ ಕ್ರಾಂತಿ ಪಥವೇ 'ಪಂಚಾಯಿತ ರಾಜ್ಯ'. ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕವಾಗಿ ರಾಷ್ಟ್ರವನ್ನು ಮಾನವೀಯ ಮೌಲ್ಯಗಳ ತಳಹದಿಯ ಮೇಲೆ ಪುನರ್ರಚಿಸಲು ಸ್ವಸಂಪೂರ್ಣ ಸ್ವಾವಲಂಬೀ ಗ್ರಾಮ ಸಮುದಾಯಗಳ ರಚನೆಯೊಂದೇ ರಾಜಮಾರ್ಗ. ಎರವಲು ಸಿದ್ಧಾಂತಗಳ ಕುರುಡು ಅನುಕರಣೆಯಿಂದ ಸಾಧ್ಯವಿಲ್ಲ. ನಮ್ಮ ಬಾಳು-ಬದುಕು ನೆಮ್ಮದಿಯ ಶಾಂತಿಯುತ ನೆಲೆಯಾಗಲು ಗಾಂಧೀಮಾರ್ಗ ಒಂದು ದಾರಿದೀಪವಾಗಿದೆ. ಆಡಳಿತ ಅನುಕೂಲಕ್ಕಾಗಿ ಪ್ರಜೆಗಳಿಗೆ ಶಿಕ್ಷಣ ಮುಖ್ಯ. ಶಿಕ್ಷಿತ ಜನರಿಂದ ಆಡಳಿತ ವ್ಯವಸ್ಥೆ ಸುಗಮವಾಗುತ್ತದೆ. ಭಾರತದಂತಹ ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಪ್ರತಿಯೊಬ್ಬರೂ ಸ್ವತಂತ್ರರು. ಸ್ವಾತಂತ್ರ್ಯ ಎಂದರೆ ಭಾರತದ ಜನತೆಯ ಸ್ವಾತಂತ್ರ್ಯ. ಈಗ ಆಳುತ್ತಿರುವ ವರ್ಗದವರ ಸ್ವಾತಂತ್ರ್ಯ ಎಂದಾಗಬಾರದು. ಜನತೆಯ ಇಚ್ಛೆಯ ಬಲದಿಂದಲೇ

ಆಡಳಿತಗಾರರು ಅಧಿಕಾರ ನಡೆಸಬೇಕು. ಅವರು ಜನರ ಸೇವಕರಾಗಿರಬೇಕಾಗುತ್ತದೆ. ಅವರ ಇಚ್ಛೆಗಳನ್ನು ನೆರವೇರಿಸಲು ಸದಾ ಸಿದ್ಧರಾಗಿರಬೇಕಾಗುತ್ತದೆ. ಸರಕಾರ ಇರದೆ ಹೋದರೆ ಪ್ರಜೆಗಳ ಹಕ್ಕು ಕರ್ತವ್ಯಗಳಿಗೆ ಚ್ಯುತಿ ಬರುತ್ತದೆ. ಪ್ರಜಾತಂತ್ರ ಸಂಪೂರ್ಣವಾಗಿ ವಿಫಲವಾಗಲು ಅನಕ್ಷರತೆಯೇ ಕಾರಣವಾಗಿರುತ್ತದೆ. ಪ್ರಜಾತಂತ್ರದ ಸಫಲತೆ ಶಿಕ್ಷಣದಿಂದ ಮಾತ್ರ ಸಾಧ್ಯವಾಗಿರುತ್ತದೆ.

ಭಾರತದ ಸಂವಿಧಾನವು ನಮ್ಮ ಪ್ರಜಾಪ್ರಭುತ್ವವನ್ನು ಪ್ರತಿನಿಧಿಸುತ್ತದೆ. ಪ್ರಜೆಗಳಿಗಿರುವ ಮೂಲಭೂತ ಹಕ್ಕುಗಳು ಮೂಲಭೂತ ಕರ್ತವ್ಯಗಳಷ್ಟೇ ಪ್ರಮುಖವಾದವುಗಳು. ಸಂವಿಧಾನದ ಪೂರ್ವ ಪೀಠಿಕೆಯು ಮೂರು ಉದ್ದೇಶಗಳನ್ನು ಸಾಧಿಸುತ್ತದೆ. 'ಭಾರತದ ಪ್ರಜೆಗಳಾದ ನಾವು' ಎಂಬ ಮಾತುಗಳು ಸರ್ಕಾರಕ್ಕೆ ಅಧಿಕಾರವು ಪ್ರಜೆಗಳಿಂದಲೇ ಬಂದಿದೆ ಎಂಬುದನ್ನು ತೋರಿಸುತ್ತದೆ. ಆದ್ದರಿಂದ ಸಂವಿಧಾನವನ್ನು ಬದಲಾಯಿಸಬಲ್ಲವರು ಪ್ರಜೆಗಳೇ ಹೊರತು ಯಾವುದೇ ಪಕ್ಷವಲ್ಲ. ಅದು ಪವಿತ್ರವಾದದ್ದು.

ಯಾವುದೇ ಒಂದು ದೇಶದ ರಾಜ್ಯದ ಸರ್ವಾಂಗೀಣ ಅಭಿವೃದ್ಧಿಯು ಅಲ್ಲಿನ ಸ್ಥಿರವಾದ ರಾಜ್ಯಭಾರ ವ್ಯವಸ್ಥೆಯನ್ನು ಅವಲಂಬಿಸಿರುತ್ತದೆ ಎಂಬುದು ಐತಿಹಾಸಿಕ ಪ್ರಣೀತ ಸಂಗತಿ. ವಿವಿಧ ವಂಶಗಳ ರಾಜ್ಯಾಡಳಿತವಿದ್ದಾಗಲೂ ಇದು ಅನ್ವಯವಾಗಿದೆ. ಪ್ರಸ್ತುತ ಪ್ರಜಾಪ್ರಭುತ್ವ ನಡಾವಳಿಕೆಗೂ ಅನ್ವರ್ಥವಾಗಿದೆ. ಸಾರ್ವತ್ರಿಕ ಕಲ್ಯಾಣದ ಪ್ರಜ್ಞೆಯ ಹಿನ್ನಲೆಯಲ್ಲಿ ಮೌಲ್ಯಗಳ ಸಾಕ್ಷಾತ್ಕಾರಕ್ಕಾಗಿ ರೂಪಿಸುವ ವೇದಿಕೆಯೇ ಚುನಾವಣೆ. ಗಾಂಧಿ, ನೆಹರೂ, ಅಂಬೇಡ್ಕರ್ ಮುಂತಾದ ಚಿಂತನಶೀಲರು ಹಾಕಿಕೊಟ್ಟ ಮಾರ್ಗದಲ್ಲಿ ಅವರು ಒಪ್ಪಿಕೊಂಡ ಪ್ರಜಾಪ್ರಭುತ್ವ ಸಿದ್ಧಾಂತದಲ್ಲಿ ರಾಷ್ಟ್ರವನ್ನು ಮುನ್ನಡೆಸಲಾಗಿದೆ. ನಮ್ಮ ಸಂವಿಧಾನವು ಭಾರತವನ್ನು ಸಾರ್ವಭೌಮ ಪ್ರಜಾಸತ್ತಾತ್ಮಕ ಗಣರಾಜ್ಯವನ್ನಾಗಿ ಮಾಡಿದೆ. ಪರಮಾಧಿಕಾರವು ಭಾರತದ ಜನತೆಗೆ ಸೇರಿದ್ದೆಂದು ಸಂವಿಧಾನ ಸಾರುತ್ತದೆ. ಸಂವಿಧಾನಕ್ಕನುಗುಣವಾಗಿ ಸ್ಥಾಪಿಸಲ್ಪಡುವ ಸರ್ಕಾರ ಜನತೆಯ ಸರ್ಕಾರವಾಗಿರುತ್ತದೆ. ಸರ್ಕಾರವು ಜನತೆಗೆ ಹೊಣೆಗಾರವಾಗಿರುತ್ತದೆ. ತನ್ನ ಅವಿಶ್ವಾಸಕ್ಕೆ ಪಾತ್ರವಾದ ಸರ್ಕಾರವನ್ನು ಜನತೆಯು ಚುನಾವಣೆಯ ಶಾಂತಿಯುತ ಮಾರ್ಗದಿಂದ ಕಿತ್ತೊಗೆಯಬಲ್ಲದು. ೧೯೭೭ರ ಮತ್ತು ೧೯೮೦ರ ಮಹಾ ಚುನಾವಣೆಗಳು ಇದಕ್ಕೆ ಅತ್ಯುತ್ತಮ ನಿದರ್ಶನಗಳಾಗಿವೆ. ಜಗತ್ತಿನ ಯಾವ ರಾಷ್ಟ್ರವು ಭಾರತದ ಆಂತರಿಕ ಇಲ್ಲವೇ ವಿದೇಶಾಂಗ ವ್ಯವಹಾರಗಳಲ್ಲಿ ಹಸ್ತಕ್ಷೇಪವೆಸಗಲಾರದು. ಏಕೆಂದರೆ ಭಾರತ ಸಾರ್ವಭೌಮ ರಾಷ್ಟ್ರವಾಗಿದೆ. ನಮ್ಮ ಸಂವಿಧಾನದಡಿಯಲ್ಲಿ ರಾಷ್ಟ್ರ ಪ್ರಜಾಪ್ರಭುತ್ವಕ್ಕೆ ಅವಕಾಶವಿಲ್ಲ. ಜನತೆಯ ಕಲ್ಯಾಣ ಮುಖ್ಯವಾಗಿರುತ್ತದೆ. ಭಾರತದ ಸಂವಿಧಾನ ಎಲ್ಲ ಪೌರರಿಗೂ ಮೂಲಭೂತ ಹಕ್ಕಗಳನ್ನು ನೀಡಿದೆ. ಶೈಕ್ಷಣಿಕ

ಮತ್ತು ಸಾಂಸ್ಕೃತಿಕ ಹಕ್ಕು ನಿಜವಾದ ರೀತಿಯಲ್ಲಿ ಸಫಲವಾಗಿಲ್ಲ. ಅದಕ್ಕೆ ಹಲವಾರು ಕಾರಣಗಳಿವೆ. ನಮ್ಮ ಸಂವಿಧಾನವು ಭಾರತದ ಎಲ್ಲ ಪ್ರಜೆಗಳಿಗೆ ಸಾಮಾನ್ಯ ಪೌರತ್ವವನ್ನು ನೀಡಿದರೂ ಶಿಕ್ಷಣದಿಂದ ವಂಚಿತರಾಗಿದ್ದಾರೆ. ರಾಷ್ಟ್ರದ ಸ್ವಾತಂತ್ರ್ಯ ಹಾಗೂ ಸಮಗ್ರತೆಯ ಮಹತ್ವವನ್ನು ಭಾರತೀಯರು ಮನಗಂಡಿದ್ದಾರೆಂಬುದು ಇತ್ತೀಚಿನ ಮಹಾ ಚುನಾವಣೆಗಳು ತೋರಿಸಿಕೊಟ್ಟಿವೆ. ಆದರೆ ಪ್ರಜೆಗಳು ನಿಜವಾದ ಆಡಳಿತ ಪಡೆಯಬೇಕಾದರೆ, ಆಡಳಿತದಲ್ಲಿ ಸಕ್ರಿಯವಾಗಿ ಭಾಗವಹಿಸಬೇಕಾದರೆ, ಅವರಿಗೆ ಶಿಕ್ಷಣ ಅಗತ್ಯ. ಪ್ರಜಾಪ್ರಭುತ್ವ ಮಾದರಿಯ ಆಡಳಿತದಿಂದ ಜನತೆಗೆ ಮೂಲಭೂತ ಅವಶ್ಯಕತೆಗಳಾದ ವಸತಿ, ನೀರು, ಆಹಾರ, ಆರೋಗ್ಯ, ಶಿಕ್ಷಣ ಒದಗಿಸುವಂತ ಪರಿಸ್ಥಿತಿ ನಿರ್ಮಾಣವಾಗಬೇಕು. ಆಗ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಹೊಂದಿರುವ ಭಾರತಕ್ಕೆ ನಮ್ಮ ಚಿಂತಕರು ನೀಡಿರುವ 'ಪ್ರಜಾಪ್ರಭುತ್ವ ಸಿದ್ಧಾಂತ' ಒಂದು ಕೊಡುಗೆ ಎಂದು ಹೇಳಬಹುದು. ಪ್ರಜಾಪ್ರಭುತ್ವ ಹಾಗೂ ಇತರ ರಾಜಕೀಯ ಪದ್ಧತಿಗಳಲ್ಲಿ ವ್ಯತ್ಯಾಸವಿದೆ. ಇತರ ರಾಜಕೀಯ ಪದ್ಧತಿಗಳಲ್ಲಿ ರಾಜಕೀಯ ವಿಧಾನಗಳಲ್ಲಿ ಜನತೆ ಭಾಗವಹಿಸುವ ಅವಕಾಶವಿಲ್ಲವೆಂದಲ್ಲ. ನಮ್ಮ ಹಿಂದಿನ ಕೆಲ ಸಂಸ್ಥಾನಗಳಲ್ಲಿ ನಾವಿದನ್ನು ಕಾಣಬಹುದಾಗಿತ್ತು. ಆದರೆ ಈ ಅವಕಾಶ ತುಂಬ ಪರಿಮಿತವಾದುದು. ಅಂದರೆ ಎಲ್ಲ ಪ್ರಸಂಗಗಳಲ್ಲಿಯೂ ಕೊನೆಯ ನಿರ್ಣಯ ಕೊಡುವ ಅಧಿಕಾರ ಸಂಸ್ಥಾನಿಕರಿಗೆ ಸೇರಿತ್ತು. ನಿರಂಕುಶ, ಸರ್ವಾಧಿಕಾರಿ ರಾಷ್ಟ್ರಗಳಂಥ ಪ್ರಜಾಸತ್ತಾತ್ಮಕವಲ್ಲದ ರಾಜಕೀಯ ಪದ್ಧತಿಗಳಲ್ಲಿಯೂ ಜನರು ರಾಜಕೀಯ ವಿಧಾನದಲ್ಲಿ ಪಾಲ್ಗೊಳ್ಳುವುದುಂಟು. ಅವರೂ ಮತದಾನ ಮಾಡುವರು. ಆದರೆ ಅವರು ಸ್ವತಂತ್ರ ನಾಗರಿಕರಾಗಿ ಭಾಗವಹಿಸುವುದಿಲ್ಲ. ಅನೇಕ ಸ್ಪರ್ಧಾಳುಗಳಿಂದ ಪ್ರತಿನಿಧಿಯನ್ನು ಆರಿಸುವ ಅವಕಾಶವಾಗಲಿ, ಸ್ವಾತಂತ್ರ್ಯವಾಗಲಿ ಅವರಿಗಿರುವುದಿಲ್ಲ. ಪ್ರಜಾಪ್ರಭುತ್ವದಲ್ಲಿ ಮಾತ್ರ ಜನ ರಾಜಕೀಯ ವಿಧಾನದಲ್ಲಿ ಸ್ವೈಜವಾಗಿ ಮತ್ತು ದೊಡ್ಡ ಪ್ರಮಾಣದಲ್ಲಿ ಪಾಲ್ಗೊಳ್ಳುವರು. ಇಲ್ಲಿ ಮಾತ್ರ ಅವರಿಗೆ ಸಂಪೂರ್ಣ ಸ್ವಾತಂತ್ರ್ಯವಿರುವುದು

ಭಾರತ ದೇಶದ ರಾಜಕೀಯ ವಿಧಾನಗಳಲ್ಲಿ ಭಾಗವಹಿಸುವಿಕೆ ಪ್ರಾಮುಖ್ಯವಾಗಿ ಎರಡು ರೂಪಗಳನ್ನು ತಳೆದಿದೆ. ಒಂದನ್ನು ಸಂವಿಧಾನಾತ್ಮಕವೆಂದೂ, ಇನ್ನೊಂದನ್ನು ಸಂವಿಧಾನೇತರವೆಂದೂ ಹೇಳಬಹುದು. ಸಂವಿಧಾನದಲ್ಲಿ ಹೇಳಿದ ಕಾರ್ಯ ವಿಧಾನ, ಅದಕ್ಕನುಗುಣವಾಗಿ ರಚಿತವಾದ ಕಾಯ್ದೆಗಳು, ಅದರ ಅನುಷ್ಠಾನದ ಕಾಲಕ್ಕೆ ಬೆಳೆದು ಬಂದ ಸಂಪ್ರದಾಯಗಳು ಇವುಗಳನ್ನನುಸರಿಸಿ ಭಾಗವಹಿಸುವಿಕೆಯನ್ನು ಸಂವಿಧಾನಾತ್ಮಕವೆಂದು ಹೇಳಬೇಕು. ಚುನಾವಣೆ ಕಾಯ್ದೆ ಮೇರೆಗೆ ಮತದಾರರು ಚುನಾವಣೆಯಲ್ಲಿ ಭಾಗವಹಿಸುವುದು, ಭಿನ್ನ ಭಿನ್ನ ರಾಜಕೀಯ ಪಕ್ಷಗಳ ಸದಸ್ಯರು ಕಾಯ್ದೆಗಳ ಮೇರೆಗೆ ಶಾಸನಿಕ ಕಾರ್ಯದಲ್ಲಿ ಭಾಗವಹಿಸುವುದು, ಕಾರ್ಯ

ವಿಧಾನದ ನಿಯಮಗಳು ಮತ್ತು ಈ ಉದ್ದೇಶಕ್ಕಾಗಿ ರಚಿತವಾದ ನಿಯಮಾವಳಿ ಈ ಬಗೆಯವು. ಈ ಬಗೆಯ ಕಾರ್ಯ ವಿಧಾನಗಳನ್ನು ಅತಿಕ್ರಮಿಸಿ ಮೇಲಿಂದ ಮೇಲೆ ಕಾಯ್ದೆ ಬದ್ಧವಲ್ಲದ ಅಕ್ರಮ ವಿಧಾನಗಳನ್ನು ಅನುಸರಿಸಿದಲ್ಲಿ ಅದನ್ನು ಸಂವಿಧಾನೇತರ ಭಾಗವಹಿಸುವಿಕೆಯ ಪದ್ಧತಿಗಳೆಂದು ಬಗೆಯಬೇಕು. ಹರತಾಳ, ಬಹಿಷ್ಕಾರ ಮತ್ತು ಸಂಪುಗಳು, ಉಪವಾಸ, ಪ್ರತಿಬಂಧ, ಸತ್ಯಾಗ್ರಹ ಮತ್ತು ಪ್ರಜಾಸತ್ತಾತ್ಮಕ ವಿಧಾನದಿಂದ ಅಮಲಿನಲ್ಲಿ ಬಂದ ಕಾಯ್ದೆಗಳ ಭಂಗ ಮತ್ತು ಬಹುಮಟ್ಟಿಗೆ ಹಿಂಸಾಚಾರದಲ್ಲಿ ಪರ್ಯಾವಸನಗೊಳ್ಳುವ ಮತ ಪ್ರದರ್ಶನ ಇವು ಸಾಮಾನ್ಯವಾಗಿ ಕಂಡುಬರುವ ಸಂವಿಧಾನೇತರ ವಿಧಾನಗಳು. ಇವನ್ನೆಲ್ಲ ಪ್ರತ್ಯಾಕ್ಷ ಕ್ರಮಗಳೆನ್ನಬಹುದು. ನಮ್ಮ ರಾಷ್ಟ್ರದ ಪ್ರಜಾಸತ್ತಾತ್ಮಕ ರಾಜಕಾರಣದಲ್ಲಿ ಪ್ರತ್ಯಾಕ್ಷ ಕ್ರಮಗಳು ಸಾಮಾನ್ಯವಾಗಿವೆ. ನಮ್ಮಲಿಂದು ಸಂವಿಧಾನಾತ್ಮಕ ಕ್ರಮ ಹಾಗೂ ಪ್ರತ್ಯಕ್ಷ ಕ್ರಮ ಎರಡು ವಿಧದ ರಾಜಕಾರಣಗಳೊಂದಿಗೆ ನಾವು ವ್ಯವಹರಿಸಬೇಕಾಗಿರುವುದು.

ಈಗ ನಾವು ಹೆಚ್ಚು ಆಸ್ಥೆಯುಳ್ಳ ನಗರಗಳ ಬಗೆಗೆ, ರಾಜಕೀಯ ವಿಧಾನಗಳಲ್ಲಿ ಏಕಪ್ರಕಾರವಾಗಿ ಮತ್ತು ಹೆಚ್ಚು ಆಸ್ಥೆಯಿಂದ ಭಾಗವಹಿಸುವ ಜನರ ಬಗೆಗೆ ವಿಚಾರಿಸಬೇಕು. ಇವರೆಲ್ಲ ರಾಜಕೀಯ ಹುದ್ದೆಗಳನ್ನು ಅಪೇಕ್ಷಿಸುವವರು. ಪ್ರಜಾಪ್ರಭುತ್ವದಲ್ಲಿ ರಾಜಕೀಯ ಹುದ್ದೆ ಯಾವದೊಂದು ಕುಟುಂಬದ ಇಲ್ಲವೇ ಗುಂಪಿನ ಗುತ್ತಿಗೆಯೇನಲ್ಲ. ಮತದಾರರ ಅವಶ್ಯಕ ಬೆಂಬಲವಿರುವ ಯಾವುದೇ ನಾಗರಿಕನು ಅದನ್ನು ಪಡೆಯಬಹುದು. ಎಲ್ಲರಿಗೂ ಈ ಅಪೇಕ್ಷೆ ಇರುವುದಂದೇನೂ ಇಲ್ಲ. ಕೆಲವೇ ವರ್ಗದ ಜನರಿಗೆ ಅಧಿಕಾರದ ಹಂಬಲವಿರುವುದು. ಅವರು ತಾವು ಅಗತ್ಯವಾದ ಪ್ರಯತ್ನ ಮಾಡಿದರೆ ತಮ್ಮ ಇಷ್ಟಾರ್ಥವನ್ನು ಪೂರೈಸಿಕೊಳ್ಳುವ ಭರವಸೆ ಹೊಂದಿರುವರು. ಇಂಥವರೆಲ್ಲ ಸೇರಿ ರಾಜಕೀಯ ಪಕ್ಷವನ್ನು ನಿರ್ಮಿಸಿಕೊಳ್ಳುವುದು ಆಧುನಿಕ ಪ್ರಜಾಸತ್ತೆಯ ಬಲವಾಗಿರುವುದು. ಇಂಥ ಪ್ರತಿಯೊಂದು ಪಕ್ಷವು ಕೆಲವೊಂದು ಸಾಮಾನ್ಯ ತತ್ವಗಳನ್ನು ಹೊಂದಿರುವುದು. ಸದಸ್ಯರು ಅವುಗಳಿಗೆ ಬದ್ಧರು. ಅವರ ಮುಖ್ಯವಾದ ಉದ್ದೇಶ ಆಡಳಿತಾಧಿಕಾರವನ್ನು ಹೊಂದುವುದು. ವಿವಿಧ ರಾಜಕೀಯ ಪಕ್ಷಗಳಲ್ಲಿ ಇದಕ್ಕಾಗಿ ತೀವ್ರ ಪೈಪೋಟಿ ಒಂದು ಮಹತ್ವದ ಅಂಶವೇ ಆಗಿರುವುದು. ರಾಜಕೀಯ ಪಕ್ಷಗಳು ಭಾಗವಹಿಸುವುದಕ್ಕೆ, ಜನತೆ ಇಡಿಯಾಗಿ ಭಾಗವಹಿಸುವುದಕ್ಕೆ ಎಲ್ಲ ದೃಷ್ಟಿಯಿಂದ ತುಂಬ ವ್ಯತ್ಯಾಸವಿರುವುದು. ಪಕ್ಷಗಳು ಜನತೆಯಲ್ಲಿ ಹೆಚ್ಚು ಆಸಕ್ತ ರಾಜಕೀಯ ಗುಂಪುಗಳಾಗಿರುವವು. ಅವು ಸಮಾಜದಲ್ಲಿಯ ವಿಶಿಷ್ಟ ಗುಂಪುಗಳು. ಜನತೆಯ ಎಲ್ಲ ವರ್ಗಗಳಿಂದ ಬಂದವರಾಗಿದ್ದರೂ, ಅವರು ಸ್ವಭಾವಿಕವಾಗಿಯೇ ಅಲ್ಪ ಸಂಖ್ಯಾತರು. ಅಧಿಕಾರ ಗ್ರಹಣವೇ ಅವರ ಉದ್ದೇಶವು. ಪ್ರಜಾಸತ್ತೆಯ ರಾಜಕೀಯ

ವಿಧಾನಕ್ಕೆ ಅವಶ್ಯಕ ಚೇತನ ನೀಡುವವರು ಇವರು. ಅಂತೇ ಸಾಮಾನ್ಯ ಜನತೆಗಿಂತ ಇವರ ಪಾತ್ರ ತುಂಬ ಭಿನ್ನವಾಗಿ ತೋರುವುದು.

ದೇಶವು ಸ್ವತಂತ್ರವಾಗಿ ಸಂವಿಧಾನವು ರೂಪುಗೊಂಡನಂತರ ಅದರನ್ವಯ ಸಾರ್ವತ್ರಿಕ ಪ್ರೌಢ ಮತದಾನ ಪದ್ಧತಿಯನ್ನು ಒಮ್ಮೆಲೆ ಜಾರಿಗೆ ತಂದುದು ನಾವು ಲಕ್ಷಿಸಬೇಕಾದ ಮೊದಲ ಅಂಶವಾಗಿರುವುದು. ಅನೇಕರು ಬಗೆದಿರುವಂತೆ ಇದು ತೀರ ಆಕಸ್ಮಿಕವೇನೂ ಅಲ್ಲ. ಸ್ವಾತಂತ್ರ ಪೂರ್ವದಲ್ಲಿ ಕೆಲವರಿಗಾದರೂ ಮತದಾನದ ಅನುಭವವಿದ್ದಿತು. ಆದರೆ ಇವರ ಸಂಖ್ಯೆ ತುಂಬ ಪರಿಮಿತವಾಗಿತ್ತು. ಬ್ರಿಟಿಷ ಪಾರ್ಲಿಮೆಂಟು ಸ್ವೀಕರಿಸಿದ ೧೮೯೨ ಮತ್ತು ೧೯೦೯ರ ಕಾಯ್ದೆಗಳನ್ವಯ ಕೆಲಮಟ್ಟಿಗೆ ಅಪ್ರತ್ಯಕ್ಷ ಚುನಾವಣೆಯ ಅವಕಾಶ ಮಾಡಿಕೊಡಲಾಯಿತು. ೧೯೦೯ರ ಕಾಯ್ದೆಯ ಮೇರೆಗೆ ಮತದಾರರ ಸಂಖ್ಯೆ ಸುಮಾರು ೪,೦೦೦ ದಷ್ಟು ಇತ್ತು. ವಿಧಾನ ಮಂಡಳಗಳಿಗೆ ಪ್ರಥಮ ಪ್ರತ್ಯಕ್ಷ ಚುನಾವಣೆ ಪ್ರಾರಂಭವಾದುದು ಭಾರತ ಸರಕಾರದ ೧೯೧೯ರ ಕಾಯ್ದೆ ಮೇರೆಗೆ. ಮತಾಧಿಕಾರ ಮಾತ್ರ ಕೆಲಮಟ್ಟಿಗೆ ಆಸ್ತಿ ಇರುವವರಿಗೆ ಇಲ್ಲವೇ ಕೆಲವೊಂದು ಕರಗಳನ್ನು ಕೊಡುವವರಿಗೆ ಪರಿಮಿತವಾಗಿತ್ತು. ಇಂಥವರ ಸಂಖ್ಯೆ ಸುಮಾರು ೫೦ ಲಕ್ಷದಷ್ಟಿತ್ತು. ಭಾರತ ಸರಕಾರದ ೧೯೩೫ರ ಕಾಯ್ದೆ ರೂಪಗೊಳ್ಳುವ ಸಂದರ್ಭದಲ್ಲಿ ನಡೆದ ಚರ್ಚೆಯ ಕಾಲಕ್ಕೆ ಮತಾಧಿಕಾರದ ಪ್ರಶ್ನೆಯನ್ನು ಪರಿಶೀಲಿಸಲು ಸಮಿತಿಗಳನ್ನು ನೇಮಿಸಲಾಯಿತು.

ಸಂಪೂರ್ಣ ರಾಜಕೀಯ ಸಮತೆಯನ್ನು ಸಾಧಿಸಲು ಪ್ರೌಢ ಮತದಾನ ಪದ್ಧತಿಯೊಂದೇ ಉಪಾಯವೆಂಬ ಅಭಿಪ್ರಾಯವನ್ನೇನೊ ಅದು ವ್ಯಕ್ತಪಡಿಸಿತು. ಆದರೆ ಮತದಾರರ ಯಾದಿಗಳನ್ನು ಸಿದ್ಧಪಡಿಸುವ, ಮತದಾನದ ಭಾರಿ ಏರ್ಪಾಡು ಮಾಡುವ ಭಾರಿ ಹೊಣೆಗಾರಿಕೆ, ಕಾರ್ಯಭಾರ ಆಡಳಿತದ ಮೇಲೆ ಬೀಳುವದೆಂಬ ಕಾರಣದಿಂದ ಈ ಬಗ್ಗೆ ಸೂಚನೆಯನ್ನೇನೂ ಮಾಡಲಿಲ್ಲ. ಹೀಗಾಗಿ ಅದೂ ಸಹ ಪರಿಮಿತ ಮತಾಧಿಕಾರವನ್ನೇ ಪ್ರತಿಪಾದಿಸಿತು. ಆದರೂ ಅದು ೧೯೧೯ರ ಕಾಯ್ದೆಗಿಂತ ಹೆಚ್ಚಿನ ಪ್ರಮಾಣದ್ದೇ ಆಗಿತ್ತು. ಈ ಪರಿಣಾಮವಾಗಿ ೧೯೩೫ರ ಕಾಯ್ದೆ ಮೇರೆಗೆ ಮತಾಧಿಕಾರವು ಜನಸಂಖ್ಯೆ ಶೇ.೧೪ ರಷ್ಟು ಜನರಿಗೆ ಸುಮಾರು ಮೂರು ಕೋಟಿ ಜನರಿಗೆ ದೊರೆಯಿತು. ಭಾರತವು ಸ್ವಾತಂತ್ರವಾದಾಗ ಮತದಾನದ ಅನುಭವ ಇದ್ದುದು ಈ ಜನರಿಗೆ ಮಾತ್ರ. ಇವರೆಲ್ಲರೂ ಬ್ರಿಟಿಷ್ ಆಡಳಿತದ ಭಾರತದಲ್ಲಿಯೇ ಇದ್ದವರು. ಸಂಸ್ಥಾನಗಳಲ್ಲಿದ್ದ ಜನರಿಗೆ ಇವರ ಅನುಭವವೇನೂ ಇರಲಿಲ್ಲ. ಮೈಸೂರಿನಂತಹ ಕೆಲವು ಪ್ರಗತಿಪರ ಸಂಸ್ಥಾನಗಳು ಮಾತ್ರ ಇದಕ್ಕೆ ಅಪವಾದವಾಗಿದ್ದವೆನ್ನಬೇಕು. ಅಂತೇ ೧೯೫೦ ಜನವರಿ ೨೬ ರಂದು ಅನುಷ್ಠಾನಕ್ಕೆ ಬಂದ ಸಂವಿಧಾನದ ಮೇರೆಗೆ

ಪ್ರೌಢಮತದಾನವು ಪ್ರಾರಂಭವಾದಾಗ ಅದು ತುಂಬ ಆಕಸ್ಮಿಕವೆಂದು ಅನೇಕರು ಬಗೆದಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ.

ಚುನಾವಣೆ ಎಂದರೆ, ವ್ಯಕ್ತಿ, ವ್ಯಕ್ತಿಗಳ ನಡುವಿನ ಹೋರಾಟವಲ್ಲ. ಪಕ್ಷಗಳ ತತ್ವ ಸಿದ್ಧಾಂತಗಳ ನಡುವಿನ ಹೋರಾಟವಾಗಿದೆ. ಚುನಾವಣೆಯಲ್ಲಿ 'ಮತ' ಚಲಾವಣೆಯಾದರೆ ನಾಗರಿಕರ ಕರ್ತವ್ಯ ಮುಗಿಯಿತು ಎಂದೇ ತಿಳಿಯಲಾಗುತ್ತಿದೆ. ನಿಜವಾದ ಪ್ರಜಾಪ್ರಭುತ್ವದಲ್ಲಿರಬೇಕಾದ ಜನರ ಪಾಲ್ಗೊಳ್ಳುವಿಕೆ ಭಾರತದಲ್ಲಿ ಸಾಧ್ಯವಾಗಲೇ ಇಲ್ಲ. ಅದಕ್ಕೆ ಭಾರತದಲ್ಲಿ ಪ್ರಜಾಪ್ರಭುತ್ವ ಹುಟ್ಟಿಕೊಂಡಾಗ ಇದ್ದ ಪರಿಸ್ಥಿತಿಯೂ ಸ್ವಲ್ಪಮಟ್ಟಿಗೆ ಕಾರಣ. ದೇಶದಲ್ಲಿಯ ರಾಜಕೀಯ ಪರಿಸ್ಥಿತಿಯನ್ನು ಲಕ್ಷಿಸಿ ಮಧ್ಯಮ ವರ್ಗದ ಬುದ್ಧಿಜೀವಿಗಳು ನಿರ್ಲಿಪ್ತ ಮನೋಭಾವ ತಾಳಿ, ಇತರೆ ವಿದ್ಯಾವಂತ ವ್ಯಕ್ತಿಗಳವರೊಂದಿಗೆ ಸೇರಿಕೊಂಡು ಮತದಾನ ಮಾಡದವರ ಪ್ರಮಾಣವನ್ನು ಸಾಕಷ್ಟು ಹೆಚ್ಚಿಸಿದ್ದಾರೆ. ಮತದಾನ ಮಾಡದೇ ಇರುವುದು ಒಳ್ಳೆಯದೇ ಆಯಿತೆಂದು ಕೆಲವರ ಅಭಿಪ್ರಾಯ. ಸಾರ್ವತ್ರಿಕ ಮತದಾನವನ್ನು ಆಧರಿಸಿದ ಪ್ರಜಾಸತ್ತೆಯಲ್ಲಿ ಹೆಚ್ಚಾಗಿ ನಂಬಿಕೆಯಿಲ್ಲದವರು ಇವರು. ಮತದಾನ ಮಾಡದಿರುವವರಲ್ಲಿ ಹೆಚ್ಚಾಗಿ ಕಡಿಮೆ ಶಿಕ್ಷಣ ಪಡೆದವರು. ಸಮಾಜದ ಕಡಿಮೆ ದರ್ಜೆಯವರು ಇರುವರು. ಈ ದರ್ಜೆಯವರಿಗೆ ರಾಜಕೀಯ ಪ್ರಶ್ನೆಗಳ ಗಂಧವೇ ಇರುವುದಿಲ್ಲ. ಸಾಮಾನ್ಯವಾಗಿ ಇವರು ಅಸಹಿಷ್ಣುಗಳು. ಇಂಥವರು ರಾಜಕಾರಣದ ಮೇಲೆ ಪ್ರಭಾವ ಬೀರದಿರುವುದೇ ಲೇಸು ಎಂಬುದು ಕೆಲವರ ವಾದ. ಅಲ್ಲದೇ ಸಾಮಾನ್ಯ ಮನುಷ್ಯನಿಗೆ ಸಹಜವಾಗಿರುವ ರಾಜಕಾರಣದಲ್ಲಿಯ ಅನಾಸ್ಥೆಗೆ ಇದು ಸ್ಪಷ್ಟವಾದ ನಿದರ್ಶನ.

ಪ್ರಜಾಪ್ರಭುತ್ವಕ್ಕೆ ಹೊಂದಿಕೆಯಾಗುವ ಶಿಕ್ಷಣ ಕೊಡಬೇಕೆಂಬುದನ್ನು ಪ್ರಜಾಪ್ರಭುತ್ವವನ್ನು ಸ್ವೀಕರಿಸಿದ ಜಗತ್ತಿನ ಎಲ್ಲ ರಾಷ್ಟ್ರಗಳು ಸಾರಿ ಹೇಳುತ್ತವೆ. ಭಾರತದೇಶ ಪ್ರಜಾಪ್ರಭುತ್ವ ಸಮಾಜವಾದವನ್ನು ಗುರಿಯನ್ನಾಗಿ ಇಟ್ಟುಕೊಂಡು ಸಾಗಿದೆ. ಭಾರತದಲ್ಲಿ ಇಂತಹ ಕಲ್ಯಾಣ ರಾಜ್ಯ ನಾಗರಿಕರನ್ನು, ತಯಾರು ಮಾಡುವುದು ಶಿಕ್ಷಣದ ಹೊಣೆಯಾಗಿದೆ. ಆದರ್ಶ ಶಿಕ್ಷಣವನ್ನು ಪಡೆದ ಜನರ ಸಂಖ್ಯೆಯು ಹೆಚ್ಚಾಗಿ ಇದ್ದಾಗ ಮಾತ್ರ ಜನರ, ಜನರಿಗಾಗಿ, ಜನರಿಂದ ಇರುವ ಪ್ರಜಾಪ್ರಭುತ್ವವು ಯಶಸ್ವಿಯಾಗಬಲ್ಲದು. ೧೯೮೪ರ ಮಹಾ ಚುನಾವಣೆಯ ಸಂದರ್ಭದಲ್ಲಿ ಸಾಕ್ಷರತೆಯ ಪ್ರಮಾಣ ಹೆಚ್ಚಿದ್ದ ರಾಜ್ಯಗಳಲ್ಲಿ ಇತರೆಡೆಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಮತದಾನವಾಗಿತ್ತು ಎನ್ನುವುದನ್ನು ಗಮನಿಸಿದರೆ ಓದು ಬರಹದ ಅರಿವು ರಾಜಕೀಯವಾಗಿ ಎಂತಹ ನಿರ್ಣಾಯಕ ಪಾತ್ರವಹಿಸುತ್ತದೆ ಎನ್ನುವುದು ಗೋಚರವಾಗುತ್ತದೆ. ಇದರೊಂದಿಗೆ ನೆನಪಿನಲ್ಲಿಡಬೇಕಾದ ಮುಖ್ಯವಾದ ವಿಷಯವೆಂದರೆ

ರಾಷ್ಟ್ರಾಭಿವೃದ್ಧಿ: ಪ್ರಜಾಪ್ರಭುತ್ವದ ಯಶಸ್ಸು ಪ್ರಜಾಸಂಖ್ಯೆಯಲ್ಲಿಲ್ಲ. ಪ್ರಜಾಪ್ರಜ್ಞೆಯಲ್ಲಿದೆ, ಪರಿಜ್ಞಾನದಲ್ಲಿದೆ, ಎಂಬುದಾಗಿ ಎಡ್ಮಂಡ್ ಬರ್ಕ್ ಹೇಳಿದ್ದಾನೆ. ಶಿಕ್ಷಣದಿಂದ ರಾಜಕೀಯ ಪ್ರಜ್ಞೆ ಜನರಲ್ಲಿ ಬಲಗೊಳ್ಳುವುದು. ಇದರಿಂದ ಪ್ರಜಾಸತ್ತ ಹೆಚ್ಚು ಪ್ರಭಾವಿಯುತವಾಗಿ, ಪರಿಣಾಮಕಾರಿಯಾಗಿ, ಕಾರ್ಯನಿರ್ವಹಿಸಲು ಸಾಧ್ಯ. ಮಹಾತ್ಮಗಾಂಧೀಜಿಯವರ ಶೈಕ್ಷಣಿಕ ದಾರ್ಶನಿಕತೆಯು ಸಹ ವಿಶಾಲವಗಿದೆ. 'ಶಿಕ್ಷಣವು ಸಾಮಾಜಿಕ, ಆರ್ಥಿಕ ಪ್ರಗತಿಯನ್ನು ಸಾಧಿಸುವ, ಭೌತಿಕ ಪ್ರಗತಿಯನ್ನುಂಟು ಮಾಡುವ, ರಾಜಕೀಯ ಮೌಲ್ಯವನ್ನು ಆಳೆಯುವ, ಸಮಾಜದಲ್ಲಿ ವ್ಯಕ್ತಿಯ ನೈತಿಕತೆಯನ್ನು ಎತ್ತರಿಸುವ ಸಾಧನವೆಂದು ಅವರು ಭಾವಿಸಿದ್ದಾರೆ. ಚೆಸ್ಟರ್ ಬೌಲ್ಸ್ ಅವರು ಹೇಳಿರುವಂತೆ 'ಭಾರತ ಪ್ರಪಂಚದಲ್ಲಿ ಬಹುದೊಡ್ಡದಾದ ಪ್ರಜಾಪ್ರಭುತ್ವ ತತ್ವದ ಪ್ರಯೋಗ ಶಾಲೆಯಾಗಿದೆ. ಏಷ್ಯಾದಲ್ಲಿ ಪ್ರಜಾಪ್ರಭುತ್ವದ ಆಳಿವು ಉಳಿವು ಭಾರತದ ಭವಿಷ್ಯವನ್ನು ಅವಲಂಬಿಸಿದೆ' ಎಂದು ಹೇಳಿದ್ದಾರೆ. ಅಂದರೆ ವಿಶ್ವದ ಅತ್ಯಂತ ಶ್ರೇಷ್ಠ ಪ್ರಜಾಸತ್ತಾತ್ಮಕ ರಾಷ್ಟ್ರಗಳಲ್ಲಿ ಭಾರತವೂ ಒಂದು.

ಭಾರತದಂತಹ ಜನತಂತ್ರ ವ್ಯವಸ್ಥೆಯಲ್ಲಿ ಮತದಾರನೇ ಸಾರ್ವಭೌಮ. ಪ್ರಜಾಪ್ರತಿನಿಧಿಗಳೇನಿದ್ದರೂ ಅವನು ಆರಿಸಿ ಕಳಿಸಿದ ಸೇವಕರು. ಮತದಾರ ಪ್ರಜ್ಞಾವಂತನಾಗುವುದು ಮುಖ್ಯ. ಅವನಿಗೆ ಶಿಕ್ಷಣವು ಬೌದ್ಧಿಕ ಮತ್ತು ದೈಹಿಕ ಕೆಲಸಗಳನ್ನು ಒಗ್ಗೂಡಿಸುತ್ತದೆ. ಭಾರತ ದೇಶದಾದ್ಯಂತ ಜನತೆಯ ಕಲ್ಯಾಣದ ಬಗ್ಗೆ ತನ್ಮೂಲಕ ಸಮಾಜದ ಕಲ್ಯಾಣದ ಬಗ್ಗೆ ಚಿಂತನೆ ನಡೆದಿರುವುದು, ಚಿಂತನಶೀಲರ ಮಾರ್ಗದರ್ಶನದಲ್ಲಿ ದೇಶ ಮುನ್ನಡೆಯುವುದನ್ನು ಕಾಣಬಹುದು. ಸಮಾಜದಲ್ಲಿ ಕಲ್ಯಾಣ ನೆಲೆಸಿದಾಗ ಮಾತ್ರ ಅಶಾಂತತೆ, ದುಃಖಿದುಮ್ಮಾನಗಳು, ಸಕಲರೀತಿಯ ಶೋಷಣೆ ಮೊದಲಾದ ಮಾನವ ಕಲ್ಯಾಣದ ವಿರೋಧಿ ಚಟುವಟಿಕೆಗಳಿಗೆ ಕೊನೆಗಾಣಿಸಬಹುದು. ದೇಶದಲ್ಲಿನ ಅನಕ್ಷರತೆ, ಅಜ್ಞಾನ, ಅಂಧಕಾರ, ಬಡತನ, ಹೀಗೆ ಇನ್ನೂ ಅನೇಕ ಕಾರಣಗಳ ಬೆಳವಣಿಗೆಯಿಂದಾಗಿ ಸಮಾಜ ತನ್ನ ಘನತೆ, ಗೌರವಗಳನ್ನು ಕಳೆದುಕೊಂಡಂತಾಗಿದೆ. ಶಿಕ್ಷಣದಿಂದ ವಂಚಿತರಾದ ಜನಗಳು ಆಡಳಿತ ವ್ಯವಸ್ಥೆಯಿಂದ ದೂರ ಸರಿದಿದ್ದಾರೆ. ಶಿಕ್ಷಣ ದೊರೆತಾಗ ವ್ಯಕ್ತಿ ಕಲ್ಯಾಣ ಸಾಧ್ಯ. ಯಾವುದೇ ರಾಷ್ಟ್ರ ಪ್ರಭುತ್ವವನ್ನು ಪಡೆಯಬೇಕಾದರೆ, ಬೆಳೆದು ಜಾಗತಿಕ ರಾಷ್ಟ್ರಗಳ ಮಾಲಿಕೆಯಲ್ಲಿ ತಲೆ ಎತ್ತಿ ನಿಲ್ಲುವಂತಾಗಬೇಕಾದರೆ, ಅದು ತನ್ನ ಜನತೆಗೆ ಯೋಗ್ಯ ಶಿಕ್ಷಣ ಕೊಡುವುದು ಅನಿವಾರ್ಯ.

## ಅಧ್ಯಾಯ-೫

# ಶಿಕ್ಷಣ ಮತ್ತು ಶಿಕ್ಷಣದ ಸ್ವರೂಪ

೧. ವಿದ್ವಾಂಸರ ದೃಷ್ಟಿಯಲ್ಲಿ ಶಿಕ್ಷಣದ ಅರ್ಥ.

೨. ಔಪಚಾರಿಕ ಶಿಕ್ಷಣ.

೩. ಅನೌಪಚಾರಿಕ ಶಿಕ್ಷಣ.

೪. ಪ್ರಾಸಂಗಿಕ ಶಿಕ್ಷಣ.

೫. ಪ್ರಾಚೀನ ಭಾರತದ ಶಿಕ್ಷಣ ಪದ್ಧತಿ.

೬. ಆಧುನಿಕ ಭಾರತದ ಶಿಕ್ಷಣ ಪದ್ಧತಿ.

೭. ಅಂತರ ರಾಷ್ಟ್ರೀಯ ಸಾಕ್ಷರತಾ ಕಾರ್ಯಕ್ರಮಗಳು.

೮. ಸಾಕ್ಷರತಾ ಕಾರ್ಯಕ್ರಮ.

# ಅಧ್ಯಾಯ-೫

## ಶಿಕ್ಷಣ ಮತ್ತು ಶಿಕ್ಷಣದ ಸ್ವರೂಪ

'ಶಿಕ್ಷಣ' ಎಂಬುದು ಕಲಿಯುವ ಕ್ರಿಯೆ. ಶಿಕ್ಷಣವು ಪ್ರಮುಖವಾಗಿ ಭವಿಷ್ಯಕ್ಕೆ ಸಂಬಂಧಿಸಿದ ವಿಷಯ.ವ್ಯಕ್ತಿಯ ಮಾನವೀಯ ಸೌಕರ್ಯಾಭಿವೃದ್ಧಿಯ ಸರ್ವತೋಮುಖದ ಜೊತೆಗೆ , ಅದು ಸಾಮಾಜಿಕ ಜೀವನಕ್ಕಾಗಿ ಮಾಡುವ ಪೂರ್ವಸಿದ್ಧತೆ. ಅದು ಸುಶಿಕ್ಷಿತ ಸಮಾಜ ನಿರ್ಮಿಸುವ ಕಾರ್ಯವೂ ಆಗಿದೆ. ಶಿಕ್ಷಣ ಎಂದರೆ ಕೇವಲ ಪ್ರಾಥಮಿಕ ಶಿಕ್ಷಣ ನೀಡುವಷ್ಟಕ್ಕೆ ಸೀಮಿತವಾಗದೆ, ಉನ್ನತ ಶಿಕ್ಷಣದವರೆಗೆ ಎಲ್ಲ ಜಾತಿ, ವರ್ಗ, ಪಂಗಡ ,ಧರ್ಮದವರಿಗೆ ಹೇಗೆ ಸಾಧ್ಯ ಎಂಬುವವರೆಗೆ ಇದರ ವ್ಯಾಪ್ತಿ ಅಡಗಿದೆ. ಪ್ರತಿಯೊಬ್ಬರಿಗೂ ಶಿಕ್ಷಣದೊಂದಿಗೆ ಬದುಕುವ ,ಶಿಕ್ಷಣ ಪಡೆಯುವ ಹಕ್ಕಿದೆ. ಮಾನವ ಜನಾಂಗದ ಸಂಸ್ಕೃತಿ ,ನಾಗರಿಕತೆಗಳು ಉಳಿದು ,ಬೆಳೆದು ಜೀವನದಲ್ಲಿ ಸುಖಶಾಂತಿ ನೆಲೆಸುವಂತೆ ಮಾಡುವ ಮೂಲಭೂತ ಹೊಣೆಗಾರಿಕೆಯನ್ನು ಶಿಕ್ಷಣ ನಿರ್ವಹಿಸುತ್ತದೆ. ರಾಷ್ಟ್ರದ ನೇರ ಹೊಣೆಗಾರಿಕೆಯಲ್ಲಿ ಜನತೆಯನ್ನು ಪಾಲುಗೊಳ್ಳುವಂತೆ ಮಾಡುವುದು ಇಂದಿನ ದಿನಗಳಲ್ಲಿ ಶಿಕ್ಷಣದ ಜವಾಬ್ದಾರಿ ಜೊತೆಗೆ ಪ್ರಜಾಸತ್ತೆಯನ್ನು ಬಲಗೊಳಿಸುವುದು ಸಹ ಶಿಕ್ಷಣದ ಮುಖ್ಯ ಜವಾಬ್ದಾರಿಯಾಗಿದೆ.

ಪ್ರಜಾಸತ್ತೆಯನ್ನು ಪ್ರಭಾವಶಾಲಿ ಹಾಗೂ ಸದೃಢವಾಗಿ ನೆಲೆಗೊಳ್ಳುವಂತೆ ಮಾಡುವಲ್ಲಿ ಶಿಕ್ಷಣದ ಪಾತ್ರ ಅಷ್ಟೇ ಮುಖ್ಯವಾಗಿರುತ್ತದೆ. ಪ್ರಜಾಸತ್ತೆಯ ಪ್ರಕ್ರಿಯೆಗಳಲ್ಲಿ ಭಾಗವಹಿಸುವಂತೆ ಮಾಡಲು ವ್ಯಕ್ತಿಗಳಿಗೆ ಅರಿವು ನೀಡುವುದರ ಜೊತೆಗೆ ಶಿಕ್ಷಣದಿಂದ ಜನಸಾಮಾನ್ಯರ ರಾಜಕೀಯ ಪ್ರಜ್ಞೆಯು ಬಲಗೊಳ್ಳುವುದು. ಇದರಿಂದ ಪ್ರಜಾಸತ್ತೆಯು ಹೆಚ್ಚು ಪ್ರಭಾವಶಾಲಿ ಹಾಗೂ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುವುದು . ಸಾರ್ವಜನಿಕರ ನೆಮ್ಮದಿಗೂ ,ಕ್ಷೇಮಾಭ್ಯುದಯಕ್ಕೂ ಅಗತ್ಯವೆನಿಸುವ ಸೇವಾ ವ್ಯವಸ್ಥೆಯನ್ನು ಏರ್ಪಡಿಸಿ ನಡೆಸಿಕೊಂಡು ಬರುವುದು ರಾಷ್ಟ್ರದ ಆದ್ಯ ಕರ್ತವ್ಯ. ಅದಕ್ಕಾಗಿಯೇ ಸರಕಾರವೂ ಅದರ ವಿವಿಧ ಶಾಖೆಗಳ ವ್ಯವಸ್ಥೆಯಾಗಿರುವುದು. ಅಂಥ ಸೇವಾ ಸೌಲಭ್ಯಗಳಲ್ಲಿ ಶಿಕ್ಷಣವೂ ಒಂದು ಪ್ರಧಾನ ಅಂಶ. ಅದು ಒಂದು ರಾಷ್ಟ್ರದ ಜನತೆಯ ಶಕ್ತಿ ಸಾಮರ್ಥ್ಯಗಳು ವರ್ಧಿಸಿ ಅಭಿರುಚಿ,ಆಸಕ್ತಿಗಳು ಬೆಳೆದು ಫಲಕಾರಿಯಾಗುವಂತೆ ನೋಡಿಕೊಳ್ಳುವುದು. ಅಲ್ಲದೇ ಪ್ರಜಾಪ್ರಭುತ್ವವನ್ನು ಹೊಂದಿದ ರಾಷ್ಟ್ರಜೀವನದಲ್ಲಿ ಪೌರರು, ವಿವೇಕಿಗಳೂ ,ಜಾಣರೂ ಆಗಿ ಪರಿಣಾಮಕಾರಿಯಾಗಿ ಪಾತ್ರವಹಿಸುವಂತೆ ಮಾಡುವುದು.

ಜಗತ್ತಿನ ಪ್ರತಿಯೊಂದು ರಾಷ್ಟ್ರ ಎಲ್ಲಾ ವಿಧದ ಸಮಸ್ಯೆಗಳ ನಿವಾರಣೆಗೆ ಶಿಕ್ಷಣವೊಂದೇ ಸಾಧನವೆಂದು ಮನಗಂಡಿವೆ. ಜೊತೆಗೆ ಶಿಕ್ಷಣಕ್ಕೆ ಹೆಚ್ಚಿನ ಒತ್ತನ್ನು ಕೊಟ್ಟಿವೆ. ಶಿಕ್ಷಣದಿಂದ ಅಭಿವೃದ್ಧಿಯ ಜೊತೆಗೆ ಆರ್ಥಿಕ ಪರಿಸ್ಥಿತಿಯೂ ಸುಧಾರಿಸಿ, ಜನತೆಯ ಜೀವನಮಟ್ಟ ಉತ್ತಮಗೊಳ್ಳುವುದು ಎಂಬುದನ್ನು ಮುಂದುವರಿದ ರಾಷ್ಟ್ರಗಳು ಕಾರ್ಯ ಸಾಧನೆಗೈದು ತೋರಿಸಿವೆ. ಕೇವಲ ಓದು , ಬರಹ ಮಾತ್ರ ಶಿಕ್ಷಣವಾಗಲಾರದು. ಮಾನವನ ಸರ್ವಾಂಗೀಣ ಪ್ರಗತಿಯನ್ನು ಕಾಣುವಂತೆ ಮಾಡುವುದೇ ಶಿಕ್ಷಣ.

ಒಂದು ದೇಶದ ಸರ್ವತೋಮುಖವಾದ ಬೆಳವಣಿಗೆಗೆ ಪರಿಣಾಮಕಾರಿಯಾದ ಶಿಕ್ಷಣ ವ್ಯವಸ್ಥೆಯು ಒಂದು ಕಾರಣ. ಉತ್ತಮ ಪ್ರಜಾಸತ್ತಾತ್ಮಕ ಸಮಾಜ ರಚನೆಯು ,ಸುಶಿಕ್ಷಿತರಾದ ಪ್ರಜೆಗಳಿಂದ ಮಾತ್ರ ಸಾಧ್ಯ . ಸುಶಿಕ್ಷಿತರಾದ ಪೌರರನ್ನು ತಯಾರಿಸುವುದು ಶಿಕ್ಷಣದ ಮುಖ್ಯ ಗುರಿಯಾಗಿದೆ. ಅಲ್ಲದೇ ಜನಸಮುದಾಯದ ಹಿತರಕ್ಷಣೆ ಕಾಪಾಡುವುದು ಸಹ ಪ್ರತಿಯೊಂದು ಸರಕಾರದ ಆದ್ಯ ಕರ್ತವ್ಯವಾಗಿದೆ. ಪ್ರಜೆಗಳ ಸಾಮಾಜಿಕ ,ಆರ್ಥಿಕ ,ಶೈಕ್ಷಣಿಕ ,ಅಭಿವೃದ್ಧಿಯನ್ನು ಸಾಧಿಸುವುದು ಪ್ರತಿಯೊಂದು ಸರಕಾರದ ಗುರಿಯೂ ಆಗಿರುತ್ತದೆ. ಮಾನವನ ಇಡೀ ಬದುಕಿನ ಸಾಧನೆಯೇ ,ತನ್ನ ಜೀವನವನ್ನು ಸಮತೋಲನದಲ್ಲಿಡಲು ಪ್ರಯತ್ನ ಮಾಡುವುದು . ಆಪ್ರಯತ್ನಕ್ಕೇ ನೆರವಾಗುವದೇ ಶಿಕ್ಷಣ.

೫.೧ ವಿದ್ವಾಂಸರ ದೃಷ್ಟಿಯಲ್ಲಿ ಶಿಕ್ಷಣದ ಅರ್ಥ

ಶಿಕ್ಷಣಕ್ಕೆ ಹಲವಾರು ರೀತಿಯ ಅರ್ಥಗಳನ್ನು ,ಹಲವಾರು ವಿವಿಧ ರಾಷ್ಟ್ರಗಳ ಶಿಕ್ಷಣ ತಜ್ಞರು ,ತಮ್ಮದೇ ಆದ ಹೇಳಿಕೆಗಳನ್ನು ನೀಡಿ ಶಿಕ್ಷಣವನ್ನು ಶ್ರೀಮಂತಗೊಳಿಸಿದ್ದಾರೆ. 'ಶಿಕ್ಷಣ' ಎನ್ನುವ ಪದಕ್ಕೆ ಒಂದು ನಿರ್ದಿಷ್ಟವಾದ ಅರ್ಥ ಹೇಳುವುದು ಕಠಿಣವಾದ ಕಾರ್ಯವಾಗಿದೆ. ಅರಿಸ್ಟಾಟಲ್ ನಿಂದ ಹಿಡಿದು ಮಹಾತ್ಮಾಗಾಂಧೀಜಿಯವರೆಗೆ ವಿಶ್ವದ ಅನೇಕ ಶಿಕ್ಷಣ ತಜ್ಞರು ,ತತ್ವಜ್ಞಾನಿಗಳು ,ಜ್ಞಾನಿಗಳು, ರಾಜಕಾರಣಿಗಳು ,ಕಲಾಕಾರರು ಅಲ್ಲದೇ ಧರ್ಮಗುರುಗಳು ತಮ್ಮ ವಿಚಾರಕ್ಕನುಗುಣವಾಗಿ ಹಾಗೂ ಪರಿಸ್ಥಿತಿಗನುಗುಣವಾಗಿ ತಾವು ಎದುರಿಸುವ ಸಂದರ್ಭಗಳನ್ನು ಸಾರವಾಗಿ ಬೇರೆ ಬೇರೆ ಅರ್ಥಗಳನ್ನು ಶಿಕ್ಷಣಕ್ಕಾಗಿ ನೀಡಿದ್ದಾರೆ. ಏಕೆಂದರೆ ಪ್ರಾಚೀನಕಾಲದಿಂದ ಇಂದಿನ ವಿಜ್ಞಾನ ಯುಗದವರೆಗೆ ಅವ್ಯಾಹಿತವಾಗಿ ನಡೆದುಕೊಂಡು ಬಂದಿರುವ ಒಂದು ನಿರಂತರ ಯೋಜನೆ ಶಿಕ್ಷಣವಾಗಿದೆ. ಆದರೂ ಶಿಕ್ಷಣದ ಬಗ್ಗೆ ವಿವರಣೆ ಇನ್ನೂ ಪರಿಪೂರ್ಣವಾಗದೆ ಉಳಿದಿದೆ. ಅದರ ಉದ್ದೇಶದ ಬಗ್ಗೆ ವಿಚಾರಮಂಥನ ನಡೆಯುತ್ತಲೇ ಇದೆ. ಅದು ಒಂದು ರೀತಿಯಲ್ಲಿ ಸರಿಯೂ ಹೌದು.

ಕಾರಣ ,ಅದು ನಮ್ಮ ಪ್ರಗತಿಯ ಲಕ್ಷಣ.

ಶಿಕ್ಷಣ ಎಂಬ ಪದವನ್ನು ಹಲವಾರು ರೀತಿಯಲ್ಲಿ ಅರ್ಥೈಸಲಾಗಿದೆ. 'ಸಾವಿದ್ಯಾಯ ವಿಮುಕ್ತಯ ' 'ಸಾವಿದ್ಯಾಯ ವಿಮೋಕ್ಷ ಗತಿ ಪ್ರದಾ'. ಅಂದರೆ ವಿಜ್ಞಾನದಿಂದ ಮುಕ್ತಿ ಪಡೆಯುವುದೇ ಶಿಕ್ಷಣ. 'ಒಳ್ಳೆಯ ನಡತೆ,ದೃಢಮನಸ್ಸು,ಬುದ್ಧಿಶಕ್ತಿ ಹಾಗೂ ತನ್ನ ಕಾಲಿನ ಮೇಲೆ ತಾನು ನಿಲ್ಲುವುದು,- ಈ ಗುಣಗಳನ್ನು ಮೂಡಿಸುವುದೇ ಶಿಕ್ಷಣ ಎಂಬುದು ಸ್ವಾಮಿ ವಿವೇಕಾನಂದರ ಕಲ್ಪನೆ .ಇಂಗ್ಲೀಷಿನಲ್ಲಿ ಶಿಕ್ಷಣಕ್ಕೆ Education ಎಂದು. ಅದರ ಅರ್ಥ 'ಮುಂದೆತರು '. ಮಹಾತ್ಮಾ ಗಾಂಧೀಜಿ ಅದನ್ನೇ ವಿಸ್ತೃತವಾಗಿ "ಒಂದು ಮಗುವಿನಲ್ಲೂ ಮತ್ತು ಮನುಷ್ಯನಲ್ಲೂ ಅತ್ಯುತ್ತಮವಾಗಿರುವ ಸಮಸ್ತವನ್ನು -ಅಂದರೆ ದೇಹ ಬುದ್ಧಿ ಚೇತನ ಇವುಗಳಲ್ಲಿರುವ ಸಂಪೂರ್ಣ ಸತ್ವವನ್ನು ವಿಕಸಿಸುವಂತೆ ಮಾಡುವುದು ಶಿಕ್ಷಣ " - ಎಂದು ಹೇಳಿದ್ದಾರೆ. (ವಯಸ್ಕರ ಶಿಕ್ಷಣ ಉಪಾಧ್ಯಾಯರ ಕೈಪಿಡಿ, ಟಿ.ಆರ್.ನಾಗಪ್ಪ.) ಅಂದರೆ ವ್ಯಕ್ತಿಯ ಸರ್ವತೋಮುಖವಾದ ವಿಕಾಸವೇ ಶಿಕ್ಷಣದ ಉದ್ದೇಶ ಎಂದು ಹೇಳಿದ ಹಾಗಾಯಿತು. ಡಾ॥ರಾಧಾಕೃಷ್ಣನ್ ರ ಪ್ರಕಾರ ಪ್ರತಿಯೊಬ್ಬ ವ್ಯಕ್ತಿಯಲ್ಲಿ ಒಂದು ದೈವಿಕ ಕಿಡಿ ಅಥವಾ ಬೆಳಕಿನ ಕಿಡಿ ಇದೆ.ಮನುಷ್ಯ ಜೀವನದ ಅಂತಿಮವಾದ ಉದ್ದೇಶ ಈ ದೈವಿಕತೆಯ ಸಾಕ್ಷಾತ್ಕಾರವೇ ಆಗಿದೆ. ಆದ್ದರಿಂದ ಜೀವನಕ್ಕೆ ಒಂದು ಉದ್ದೇಶವಿದೆ. ಆ ಉದ್ದೇಶವನ್ನು ಸಾಕ್ಷಾತ್ಕರಿಸಿಕೊಂಡು ಜೀವನವನ್ನು ಉದ್ಧರಣ ಮಾಡಿಕೊಳ್ಳಲು ಅನುವು ಮಾಡಿಕೊಡುವುದೇ ಶಿಕ್ಷಣದ ಪರಮೋದ್ದೇಶ. [ಶಿಕ್ಷಣ ಮತ್ತು ಮುಸ್ಲಿಮರು.ಮಹಮ್ಮದ್ ಕುಳಾಯಿ ಮತ್ತು ಇತರರು, (ಸಂ)] ಅಂದರೆ ಮನುಷ್ಯನ ಅಂತರಂಗದಲ್ಲಿ ಅಡಗಿದ ದೈವಿಕ ಕಿಡಿಯನ್ನು ಅರಿವಿಗೆ ತಂದುಕೊಳ್ಳಲು ಅಸಮರ್ಥನಾದರೆ ಕೇವಲ ಭೌತಿಕನಾಗುತ್ತಾನೆ. ನಾಸ್ತಿಕನಾಗುತ್ತಾನೆ ಹಾಗಾಗುವುದೆಂದರೆ ಅಂಧಃಪತನದತ್ತ ಸಾಗಿದಂತೆ. ಹಾಗಾಗದಂತೆ ಮನುಷ್ಯನನ್ನು ಭೋಗ,ಮೋಹ ,ಧನದಾಹ,ಅಧಿಕಾರದಾಹದಿಂದ ಮೇಲಕ್ಕೆತ್ತಿ ಅವನ ವ್ಯಕ್ತಿತ್ವದ ದೈವಿಕತೆಯನ್ನು ಅರಳಿಸುವುದು ಶಿಕ್ಷಣದ ಕರ್ತವ್ಯವಾಗಿದೆ. ಋಗ್ವೇದದಲ್ಲಿ ಈ ರೀತಿ ಹೇಳಲಾಗಿದೆ. "ಶಿಕ್ಷಣವೆಂದರೆ ಮನುಷ್ಯನನ್ನು ಸ್ವಾವಲಂಬಿ ಹಾಗೂ ಸ್ವಾರ್ಥರಹಿತನನ್ನಾಗಿ ಮಾಡುವುದು" (ಬಳ್ಳಾರಿ ಜಿಲ್ಲೆಯ ಶೈಕ್ಷಣಿಕ ಸೌಲಭ್ಯಗಳು ವೆ.ಮ.ರಾಜಶೇಖರ) ಅಂದರೆ ಶಿಕ್ಷಣವು ಮನುಷ್ಯನನ್ನು ಸ್ವಾವಲಂಬಿಯಾಗಿ ಮಾಡುತ್ತದೆ. ಸಿದ್ಧನೀತಿ ಈ ರೀತಿ ಹೇಳುತ್ತದೆ. 'ಕುರೂಪಿಯಾದವನಿಗೂ ಉತ್ಕೃಷ್ಟವಾದ ವಿದ್ಯೆಯೆಂಬುದೇ ನಿಜವಾದ ರೂಪ ' - ಎಂದು ಹೇಳುತ್ತದೆ. ಜೊತೆಗೆ ವಿದ್ಯೆಯ ಮಹತ್ವವನ್ನು ತಿಳಿಸುತ್ತದೆ. ಯಾಜ್ಞವಲ್ಕ ಮಹರ್ಷಿಯ ಪ್ರಕಾರ 'ಶಿಕ್ಷಣವು ಮನುಷ್ಯನನ್ನು ಒಳ್ಳೆಯ ಗುಣವುಳ್ಳವನನ್ನಾಗಿ ಮಾಡುತ್ತದೆ ಅಲ್ಲದೆ ಸಮಾಜಕ್ಕಾಗಿ ಉಪಯುಕ್ತನನ್ನಾಗಿ ಮಾಡುತ್ತದೆ - ಎಂದು ಹೇಳಿದ್ದಾರೆ.

ಕೌಟಿಲ್ಯನು ಸಹ ಶಿಕ್ಷಣವು ದೇಶಕ್ಕಾಗಿ ಪ್ರೀತಿ ಹಾಗೂ ತರಬೇತಿಯನ್ನು ನೀಡುತ್ತದೆ. ಅಂದರೆ ರಾಷ್ಟ್ರಪ್ರೇಮವನ್ನು ಬೆಳೆಸುತ್ತದೆ ಎಂದು ಹೇಳಿದ್ದಾರೆ. ಶಂಕರಾಚಾರ್ಯರು 'ಶಿಕ್ಷಣ' ವೆಂದರೆ ಆತ್ಮ ಸಾಕ್ಷಾತ್ಕಾರ ಎಂದು ಹೇಳಿದ್ದಾನೆ. ಗುರುನಾನಕರು ಶಿಕ್ಷಣದಿಂದ ವಿಚಾರಗಳು ಬೆಳೆಯುವುದರ ಜೊತೆಗೆ ಪರೋಪಕಾರಿಯೂ ಆಗುತ್ತಾನೆ ಎಂದು ಹೇಳಿದ್ದಾರೆ. ಶಿಕ್ಷಣಕ್ಕೆ ಸಂಬಂಧಿಸಿದಂತೆ, ವಿದ್ವಾಂಸರೂ, ಜ್ಞಾನಿಗಳೂ ಹೆಚ್ಚಿನ ಮಹತ್ವವನ್ನು ಕೊಡುತ್ತಾ ಬಂದಿರುವುದನ್ನು ಕಾಣಬಹುದು . ಜೊತೆಗೆ ಶಿಕ್ಷಣವು ಒಂದು ಶಕ್ತಿಯಾಗಿ ,ಹೊರಹೊಮ್ಮಿದೆ. ಪ್ರತಿಯೊಬ್ಬನಲ್ಲೂ ಒಂದು ಸುಪ್ತವಾದ ಶಕ್ತಿಯಿದೆ. ಅದು ಹೊರಹೊಮ್ಮುವಂತಹ ಸೂಕ್ತ ವಾತಾವರಣ ಕಲ್ಪಿಸುವುದೇ ಶಿಕ್ಷಣವಾಗಿದೆ.

ವ್ಯಕ್ತಿ ಸಮಾಜದಿಂದ ಹೊರಗೆ ಬಾಳಲಾರ. ಅವನು ಸಮಾಜದ ಒಂದು ಅಂಗವಾಗಿದ್ದಾನೆ. ಕಾಲಕಾಲಕ್ಕೆ ತಕ್ಕಂತೆ ಅವನಿಗೆ ಶಿಕ್ಷಣ ಕೊಡುವುದು ಮುಖ್ಯವಾಗಿದೆ.

ಒಂದು ಕಾಲದಲ್ಲಿ ಶಿಕ್ಷಣದ ಗುರಿ ಮೋಕ್ಷ ಸಾಧನೆಯಾಗಿತ್ತು. ಆಕಾಲದಲ್ಲಿ ಶಿಕ್ಷಣ ಗುರು-ಶಿಷ್ಯರನ್ನು ಮಾತ್ರ ಅವಲಂಬಿಸಿತ್ತು. ಆಗ ಅದು ಗುರು , ಶಿಷ್ಯ ಮತ್ತು ಸಮಾಜವನ್ನು ಅವಲಂಬಿಸಿದೆ. ಆದ್ದರಿಂದ ಶಿಕ್ಷಣದ ಉದ್ದೇಶ ಎಲ್ಲ ಕಾಲಕ್ಕೂ ಒಂದೇ ತೆರನಾಗಿಲ್ಲ. ಅದು ಕಾಲದಿಂದ ಕಾಲಕ್ಕೆ ಬದಲಾಗುತ್ತಿದೆ ಹಾಗೂ ಸ್ಪಂದಿಸುತ್ತಿದೆ. ಹೆಚ್ಚು ಅರ್ಥಗರ್ಭಿತವಾಗುತ್ತಿದೆ. ಇಡೀ ಜೀವನವೇ ಒಂದು ರೀತಿಯಲ್ಲಿ ಶಿಕ್ಷಣ ಎಂದರೆ ತಪ್ಪಾಗಲಾರದು. ಏಕೆಂದರೆ ವ್ಯಕ್ತಿ ಜೀವನದಲ್ಲಿ ಅದು ನಿರಂತರ ಕಾರ್ಯ ಚಟುವಟಿಕೆಯಾಗಿದೆ. 'ಪ್ರತಿಯೊಬ್ಬರೂ ಏನು ಓದುತ್ತೇವೆಯೋ ಅದರ ಬಗ್ಗೆ ಯೋಚಿಸಬೇಕು. ಅದನ್ನು ನಮ್ಮ ನಿತ್ಯ ಜೀವನದಲ್ಲಿ ಅಳವಡಿಸಿಕೊಳ್ಳಬೇಕು'. ಡಾ|| ರಾಧಾಕೃಷ್ಣನ್ ರ ಅಭಿಪ್ರಾಯದಂತೆ 'ವಿದ್ಯೆಯ ಮುಖ್ಯ ಗುರಿ ಏನೆಂದರೆ ಇತರರೊಡನೆ ನಮ್ಮನ್ನು ಹೊಂದಿಸಿಕೊಳ್ಳುವುದು. ಅಂದರೆ ಪ್ರತಿಯೊಬ್ಬರೂ ಜಾತಿ, ಭೇದ ಎಲ್ಲವನ್ನು ಮರೆತು ಹೊಂದಿಕೊಂಡು, ಬದುಕುವುದು. ಅಂತೆಯೇ ರಾಷ್ಟ್ರಕವಿ ಕುವೆಂಪುರವರು ಹೇಳುವಂತೆ, 'ವಿಶ್ವವೇ ನನ್ನ ಮನೆ, ಮಾನವ ಕುಲವೇ ನನ್ನ ಕುಟುಂಬ, ಜ್ಞಾನವೇ ನನ್ನ ತೀರ್ಥ'- ಎಂದು ಹೇಳಿದ್ದಾರೆ. ಶಿಕ್ಷಣವು ಮನುಷ್ಯನ ಯಾವುದೇ ಹಂತ ವರ್ಗವನ್ನು ಸಂಬಂಧಿಸಿಲ್ಲ. ಅದು ಪೂರ್ಣ ಮನುಷ್ಯನಿಗೆ ಸಂಬಂಧಿಸಿದ್ದು ಎಂದಾಗುವದು. ಅದು ವ್ಯಕ್ತಿಯ ಜ್ಞಾನವನ್ನು ಹೆಚ್ಚಿಸಲು ತನ್ನದೇ ಆದ ಮಾರ್ಗಗಳಿಂದ ಯತ್ನಿಸುವುದು. ಮಾನವನಿಗೆ ಬಾಹ್ಯ ಪರಿಸರ ಅರ್ಥಮಾಡಿಕೊಳ್ಳುವಂತೆ ಮಾಡಿ ಅದನ್ನು ತನ್ನ ಅವಶ್ಯಕತೆಗಳಿಗೆ ಅಳವಡಿಸಿಕೊಳ್ಳುವಂತೆ ಮಾಡುತ್ತದೆ. ಅಲ್ಲದೇ ಸಮಾಜದ ಪ್ರತಿಯೊಬ್ಬ ವ್ಯಕ್ತಿಯೊಡನೆ ಸಂದರ್ಭಕ್ಕೆ ತಕ್ಕಂತೆ ಹೊಂದಾಣಿಕೆ ಮಾಡಿಕೊಂಡು ಸುಖಿ

ಜೀವನ ಸಾಗುವಂತೆ ಮಾಡುವದು.

ಶಿಕ್ಷಣವು ವ್ಯಕ್ತಿ ಜೀವನವನ್ನು ಸಮಗ್ರ ಬೆಳವಣಿಗೆಗೊಳಪಡಿಸುತ್ತದೆ. ಮನುಷ್ಯನನ್ನು ಅಭಿವೃದ್ಧಿಯತ್ತ ಸಾಗುವಂತೆ ಮಾಡುತ್ತದೆ. "ಮಾನವ ಸಮಾಜದ ಹಿರಿಯರು ಜೀವನ ತತ್ವಗಳನ್ನು ಆಧರಿಸಿ ಮುಂಬರುವ ಜನಾಂಗಕ್ಕೆ ಅನುಕೂಲವಾಗುವಂತೆ ಪ್ರಗತಿಯ ರೂಪು ಕೊಡುವ ಪ್ರಯತ್ನವೇ ಶಿಕ್ಷಣ"- ಎಂಬುದಾಗಿ ವಾಲ್ಟನ್ ಜೇಮ್ಸ್ ಅಭಿಪ್ರಾಯ ಪಟ್ಟಿದ್ದಾರೆ "ಪ್ರತಿಯೊಬ್ಬನಿಗೂ ತನ್ನ ವ್ಯಕ್ತಿತ್ವನ್ನು ಪರಿಪೂರ್ಣವಾಗಿ ರೂಪಿಸಿಕೊಳ್ಳುವಂಥ ವಾತಾವರಣವನ್ನು ಕಲ್ಪಿಸಿ ಕೊಡುವ ಯತ್ನವೇ ಶಿಕ್ಷಣ ಎಂಬುದಾಗಿ ಟಿ.ಪಿ.ನನ್ ಹೇಳುತ್ತಾರೆ. ಅಂತಹ ವಾತಾವರಣದಲ್ಲಿ ಮಾನವ ಧರ್ಮ ಅಥವಾ ಸ್ತ್ರೀ ಧರ್ಮ ಎಂಬ ತತ್ವಗಳು ಬೆಳವಣಿಗೆಯಾದದ್ದು ಎಂಬುದಾಗಿ ಟಿ.ರಾಯ್ ಮಾಂಟ್ ಹೇಳುತ್ತಾನೆ. ಜಾನ್ ಡ್ಯೂಯಿಯ ಮಾತಿನಲ್ಲಿ ಹೇಳುವುದಾದರೆ, 'ಶಿಕ್ಷಣವು ವ್ಯಕ್ತಿ ತನ್ನಲ್ಲಿರುವ ಎಲ್ಲ ಶಕ್ತಿಯನ್ನು ಅಭಿವೃದ್ಧಿಗೊಳಿಸಿಕೊಂಡು ತನ್ಮೂಲಕ ತನ್ನ ವಾತಾವರಣವನ್ನು ಹತೋಟಿಯಲ್ಲಿರಿಸಿಕೊಂಡು ತನಗೆ ಸಾಧ್ಯವಾದುದನ್ನೆಲ್ಲಾ ಪೂರೈಸಿಕೊಳ್ಳುವಂತೆ ಮಾಡುವುದೇ ಆಗಿದೆ. ಸಾಕ್ರಟೀಸನು 'ಜ್ಞಾನವೇ ಶಕ್ತಿ' Knowledge is power ಎಂದು ಹೇಳಿದ್ದಾನೆ. ಅವನ ಶಿಷ್ಯ ಪ್ಲೇಟೋ ಮಹಾಶಯ 'ಶಿಕ್ಷಣವು ಮಾನವನ ಶಾರೀರಿಕ ಮತ್ತು ಆಂತರಿಕ ಸೌಂದರ್ಯ ಮತ್ತುನೈಪುಣ್ಯತೆಯನ್ನು ಅವನ ಶಕ್ತಿ ಯುದ್ಧಕ್ಕೂ ಬೆಳಸಿಕೊಳ್ಳಲು ಅವಕಾಶ ಮಾಡಿಕೊಡುವಂತಹುದಾಗಿದೆ ಎಂದಿದ್ದಾನೆ. ಪ್ಲೇಟೋವಿನ ಶಿಷ್ಯ ಅರಿಸ್ಟಾಟಲ್ ನೂ ಸಹ ಅದೇ ಅಭಿಪ್ರಾಯ ಪಡುತ್ತಾನೆ. ಅವನ ಪ್ರಕಾರ ಯಾವುದೇ ಮಾನವನ ಬುದ್ಧಿಶಕ್ತಿಯನ್ನು ಹೆಚ್ಚಿಸಿ ಬಹುಮುಖ್ಯವಾಗಿ ಅವನ ಮೇಧಾ ಶಕ್ತಿಯನ್ನು ಹೆಚ್ಚಿಸಿ ಯಾವುದು ತನಗೆ ಪರಮೋಚ್ಚ ಸುಖವನ್ನು ನೀಡಬಲ್ಲುದೋ; ಅಂತಹ ಪರಮ ಸತ್ಯವೂ ಶಿವವೂ, ಸುಂದರವೂ ಆದ ಅದರ ಕಡೆ ನಮ್ಮ ಮನಸ್ಸನ್ನು ಸೆಳೆದು ಧ್ಯಾನಸಕ್ತರಗುವಂತೆ ಮಾಡುತ್ತದೋ ಅದೇ ಶಿಕ್ಷಣ. ಪೆಸ್ಟಾಲಜಿಯ ಪ್ರಕಾರ "ಮಾನವನ ಸಹಜ ಶಕ್ತಿಯು ಸ್ವಾಭಾವಿಕವಾಗಿದ್ದು, ಸಾಮರಸ್ಯದಿಂದ ಕೂಡಿ ಸಂವರ್ಧಿಸುವಂತೆ ಮಾಡುವುದೇ ಶಿಕ್ಷಣ" ಎನ್ನಿಸುತ್ತದೆ. 'ಶಿಕ್ಷಣದಿಂದ ಪ್ರತಿಯೊಬ್ಬ ವ್ಯಕ್ತಿಯೂ ತಾನು ಬಾಳುವ ಸಮಾಜಕ್ಕೆ ತನ್ನ ಮೂಲಭೂತ ಶಕ್ತಿಯಿಂದ ಏನಾದರೊಂದು ಹೊಸ ಕೊಡುಗೆಯನ್ನು ಕಾಣಿಕೆಯ ರೂಪದಲ್ಲಿ ಕೊಡುವಂತೆ ಮಾಡತಕ್ಕುದೇ ಆಗಿದೆ. ಶಿಕ್ಷಣವು ವ್ಯಕ್ತಿಯಲ್ಲಿ ಸ್ವಯಂ ಸಾಮರ್ಥ್ಯವನ್ನುಂಟು ಮಾಡಿ ತನ್ನನ್ನು ತಾನು ಹತೋಟಿಗೊಳಪಡಿಸಿಕೊಂಡು ಸರ್ವತೋಮುಖವಾದ ಬೆಳವಣಿಗೆ ನೆರವು ನೀಡುವಂತಹುದೇ ಆಗಿದೆ. ಡಾ.ಜಾನ್ ಸನ್ ಒಮ್ಮೆ ಹೀಗೆ ಹೇಳಿದ್ದಾನೆ "ಮನುಷ್ಯನ ಬುದ್ಧಿಶಕ್ತಿಯನ್ನು ಹೆಚ್ಚಿಸಿದ್ದು ಶಿಕ್ಷಣ. ಇವನ ಈ ಬುದ್ಧಿಶಕ್ತಿಯೇ ಮನುಷ್ಯನೆನ್ನುವುದಾದರೆ,

ಇಂತಹ ಮನುಷ್ಯನನ್ನು ಮಾಡಿದ್ದು ಶಿಕ್ಷಣ"(ಕೃತಿ: ಶಿಕ್ಷಣ ತತ್ವಶಾಸ್ತ್ರ, ನೆ.ಹೆಚ್.ಮರಿದೇವರು). ಆದ್ದರಿಂದ ಮನುಷ್ಯನ ಒಳ್ಳೆಯ ಮನುಷ್ಯನಾದನೆ, ಕೆಟ್ಟ ಮನುಷ್ಯನಾದನೆ, ಎನ್ನುವುದು ಅವನು ಪಡೆದ ಶಿಕ್ಷಣದ ವಸ್ತು, ಅದರ ಸ್ವಭಾವ, ಮತ್ತು ಅದರ ವಿಧಾನಗಳನ್ನವಲಂಬಿಸಿದುದಾಗಿದೆ. ಜಾನಲಾಕ್ ಹೇಳುವಂತೆ "ವ್ಯವಸಾಯದಿಂದ ಗಿಡಗಳು ವಿಪುಲವಾಗಿ ಬೆಳೆಯುವಂತೆ ಮಾನವರು ಯಾವುದರಿಂದ ವಿಕಾಸಗೊಳ್ಳುವರೋ ಅದೇ ಶಿಕ್ಷಣ" ಎಂದಿದ್ದಾರೆ (ಕೃತಿ: ಭಾರತೀಯ ಶಿಕ್ಷಣ ಮತ್ತು ಪ್ರಚಲಿತ ಸಮಸ್ಯೆಗಳು, ಓಬಳೇಶ್ವರ ಘಟ್ಟಿ). ಶಿವರಾಮ ಕಾರಂತರ ದೃಷ್ಟಿಯಲ್ಲಿ ನಿಜವಾದ ಶಿಕ್ಷಣದ ಸಾರ್ಥಕತೆ ಇರುವುದು ಅಂತರಂಗ ವಿಕಸನದಲ್ಲಿ "ವ್ಯಕ್ತಿಯಾದವನ ಆಂತರಿಕ ವಿಕಾಸ ಶಿಕ್ಷಣದ ಮೂಲ ಉದ್ದೇಶವೆನಿಸುತ್ತದೆ. ಶಿಕ್ಷಣ ಎಂಬುದು ವ್ಯಕ್ತಿ ವಿಕಸನದಿಂದ ಆತನ ಮತ್ತು ಆತನ ವಿಸ್ತೃತ ಸಮಾಜದ ಹಿತ ಸಾಧನೆ ಎಂಬುದಾಗಿ ಹೇಳಬಹುದು" ಎಂದು ಹೇಳಿದ್ದಾರೆ (ಬಹುಮುಖಿ ಶಿಕ್ಷಣ, ಮಹಾಬಲೇಶ್ವರರಾವ್ ).

ಶಿಕ್ಷಣವು ಸಮಾಜದ ಮಹತ್ವದ ಸೇವೆಯೂ ಮಾನವ ಸಂಪನ್ಮೂಲಗಳ ವಿನಿಯೋಗವೂ ಆಗಿದೆ. ಸಮಾಜದಲ್ಲಿಯ ವ್ಯಕ್ತಿಗಳ ಬೇಕು ಬೇಡಿಕೆಗಳತ್ತ ವಿಚಾರಗಳಿಗೆ ವಿರುದ್ಧವಾಗಿ ಧೈರ್ಯ, ಸಹನಶೀಲತೆ, ಪ್ರಾಮಾಣಿಕತೆ, ಅಭೇದ್ಯತೆ, ಸ್ವಾರ್ಥರಹಿತ ಶ್ರದ್ಧೆ, ರಾಷ್ಟ್ರಭಕ್ತಿ, ಸತ್ಯಸಂಧತೆ ಮತ್ತು ಸ್ಪಷ್ಟತೆಗಳಂಥ ಲೋಕೋತ್ತರ ಗುಣಗಳನ್ನು ಬಿತ್ತಿ ಬೆಳೆಸುವುದು ಶಿಕ್ಷಣದ ಆದ್ಯ ಕರ್ತವ್ಯವಾಗಿದೆ. ಇಂದು ವ್ಯಕ್ತಿ ಸಾಗಿಸುವ ಜೀವನ, ಅವನ ಬುದ್ಧಿಮಟ್ಟವನ್ನು ಅವಲಂಬಿಸಿದೆ. ಆದರೆ ಶಿಕ್ಷಣವು ಸುಖವಾಗಿ ಜೀವಿಸಲು, ಸ್ವತಂತ್ರ ಹಾಗೂ ಸಾರ್ಥಕ ಜೀವನ ಸಾಗಿಸಲು ಬೇಕಾದ ಎಲ್ಲ ಅನುಕೂಲಗಳನ್ನು ಕಲ್ಪಿಸಿಕೊಡುತ್ತದೆ. ಅಲ್ಲದೇ ತನ್ನ ಸಮಾಜದ, ರಾಷ್ಟ್ರದ, ಇಡೀ ವಿಶ್ವದ ಪರಿಸ್ಥಿತಿಯನ್ನು ಅರಿಯುವ, ಅರಿತು ಪ್ರತಿ ಸ್ಪಂದಿಸುವ ಸಾಮರ್ಥ್ಯವನ್ನು ಒದಗಿಸಿಕೊಡುತ್ತದೆ. ಇಂದಿನ ಮಕ್ಕಳೇ ನಾಳಿನ ಪ್ರಜೆಗಳು. ನಾಳಿನ ಪ್ರಜೆಗಳನ್ನು ತಯಾರು ಮಾಡುವುದು ಇಂದಿನ ಶಿಕ್ಷಣದ ಗುರಿಯಾಗಿದೆ. ಈ ಗುರಿಗಳ ಮೂಲಕ ರಾಷ್ಟ್ರಪ್ರೇಮ, ರಾಷ್ಟ್ರರಕ್ಷಣೆ ಮಾಡುವಂತಹ ಉದಾತ್ತ ಧ್ಯೇಯಗಳನ್ನು ಬೆಳೆಸುತ್ತದೆ. ಈ ರೀತಿಯ ಧ್ಯೇಯಗಳನ್ನು ಬೆಳೆಸುವ ಶಿಕ್ಷಣ ಮುಖ್ಯವಾಗಿ ಮೂರು ಪ್ರಕಾರಗಳನ್ನು ಹೊಂದಿದೆ. ಔಪಚಾರಿಕ ಶಿಕ್ಷಣ, ಅನೌಪಚಾರಿಕ ಶಿಕ್ಷಣ ಮತ್ತು ಪ್ರಾಸಂಗಿಕ ಶಿಕ್ಷಣ ಇವೆಲ್ಲವುಗಳ ಉದ್ದೇಶ, ಮಾನವನ ವಿಕಾಸವೇ ಆಗಿದೆ.

## ೫.೨. ಔಪಚಾರಿಕ ಶಿಕ್ಷಣ

ಸಾಮಾನ್ಯವಾಗಿ ಶಿಕ್ಷಣವೆಂದರೆ' ವಿದ್ಯೆ' ಅಥವಾ 'ಜ್ಞಾನ ಸಂಪಾದನೆ' ಎಂದು ಕರೆಯುತ್ತಾರೆ. ಶಿಕ್ಷಣ ಎನ್ನುವ ಶಬ್ದವು ಸಂಸ್ಕೃತ ಭಾಷೆಯ 'ಶಿಕ್ಷಾ' ಎಂಬ ಶಬ್ದದಿಂದ ಬಂದಿದೆ. 'ಶಿಕ್ಷಾ' ಎಂದರೆ ನಿಯಂತ್ರಿಸು ಅಥವಾ ಕಲಿಸು ಎಂದರ್ಥ. ಶಿಕ್ಷಣವು ಒಂದು ಬಗೆಯ ಕಲಿಕಾ ವಿಧಾನವಾಗಿದೆ. ಆ ವಿಧಾನವು ವ್ಯವಸ್ಥಿತವಾಗಿ ನಡೆಯುತ್ತದೆ. ಪ್ರಾಚೀನ ಕಾಲದಿಂದ ಇಂದಿನವರೆಗೆ ಮಾನವ ಸುಸಂಸ್ಕೃತನಾಗಲು ಉತ್ತಮ ನಾಗರಿಕನೆನಿಸಿಕೊಳ್ಳಲು, ಉತ್ತಮ ಜೀವನ ನಡೆಸಲು ಪ್ರಯತ್ನಿಸುತ್ತಾ ಬಂದಿದ್ದಾನೆ. ಆ ರೀತಿಯ ಪ್ರಯತ್ನಕ್ಕೆ ಶಿಕ್ಷಣವು ಒಂದು ಶಕ್ತಿಯಾಗಿ, ಉತ್ತಮ ವ್ಯಕ್ತಿತ್ವಕ್ಕೆ ಪೋಷಕವಾಗಿ, ಮಾನವನ ಸರ್ವತೋಮುಖ ಅಭಿವೃದ್ಧಿಗೆ ಒಂದು ಸಾಧನವಾಗಿ ಹೊರ ಹೊಮ್ಮಿದೆ.

ಪ್ರಾಚೀನ ಕಾಲದ ಗುರುಕುಲ ಪದ್ಧತಿಯಿಂದ ಹಿಡಿದು ಇಂದಿನಕಾಲದ ಶಾಲಾ- ಕಾಲೇಜುಗಳು ಉತ್ತಮ ಶಿಕ್ಷಣವನ್ನು ನೀಡುತ್ತಾ ಬಂದಿವೆ. ಪ್ರಾಚೀನ ಕಾಲದ ವಿದ್ಯಾಕೇಂದ್ರಗಳಾದ ಅಗ್ರಹಾರಗಳು, ಬ್ರಹ್ಮಪುರಿಗಳು, ಗುಡಿಗಳು, ಮಠ ಮಾನ್ಯಗಳು, ಈ ಲೋಕ ಶಿಕ್ಷಣದ ಗುರುತರ ಜವಾಬ್ದಾರಿಯನ್ನು ಹೊತ್ತಿದ್ದವಲ್ಲದೆ, ಅದನ್ನು ಸಮರ್ಥ ರೀತಿಯಲ್ಲಿ ನಿತ್ತರಿಸಿಯೂ ಇದ್ದವು. ಪ್ರಾಚೀನ ಕಾಲದ ಶಿಕ್ಷಣವು ವ್ಯವಸ್ಥಿತವಾಗಿ ನಡೆದುಕೊಂಡು ಬಂದಿದೆ. ಮೊದ ಮೊದಲು ಗುರುಕುಲ ಆಶ್ರಯಗಳಲ್ಲಿ ಕೇವಲ ಕೆಲವೇ ವರ್ಗದವರಿಗಾಗಿ ಆರಂಭವಾದ ವ್ಯವಸ್ಥೆ ಬೆಳೆದು ಎಲ್ಲಾ ವರ್ಗದವರಿಗೂ ಲಭ್ಯವಾಗುವ ಬೃಹತ್ ಶಿಕ್ಷಣ ವ್ಯವಸ್ಥೆಯಾಗಿ ರೂಪುಗೊಂಡಿದೆ. ಈ ಶಿಕ್ಷಣ ವ್ಯವಸ್ಥೆಯನ್ನು ಔಪಚಾರಿಕ ಶಿಕ್ಷಣವೆಂದು ಕರೆಯಲಾಗಿದೆ. ಇಲ್ಲಿ ಶಿಕ್ಷಣವನ್ನು ನಿಗದಿತ ಶಾಲಾ-ಕಾಲೇಜುಗಳ ಚೌಕಟ್ಟಿನಲ್ಲಿ ಕೊಡಲಾಗುತ್ತದೆ. ಒಂದು ವಿಶಿಷ್ಟ ನಿಗದಿಪಡಿಸಿದ ಅಭ್ಯಾಸ ಕ್ರಮಕ್ಕೆ ಕಟ್ಟು ಬಿದ್ದ ಶಿಕ್ಷಣ ವ್ಯವಸ್ಥೆಯೇ ಔಪಚಾರಿಕ ಶಿಕ್ಷಣ ವ್ಯವಸ್ಥೆಯಾಗಿದೆ.

ಹಲವಾರು ಮಕ್ಕಳನ್ನು ಒಂದೆಡೆ ವ್ಯವಸ್ಥಿತವಾಗಿ ಸೇರಿಸಿ ವಿಷಯಗಳನ್ನು ಕ್ರಮಬದ್ಧವಾಗಿ ಬೋಧಿಸುವುದು ಶಾಲಾ ಶಿಕ್ಷಣ. ಇದನ್ನು ಔಪಚಾರಿಕ ಶಾಲಾ ಶಿಕ್ಷಣ ಎಂದು ಕರೆಯುತ್ತಾರೆ. ಈ ಬಗೆಯ ಕ್ರಮ ಬದ್ಧ ಶಿಕ್ಷಣ ಎಲ್ಲ ಮಕ್ಕಳಿಗೆ ಮತ್ತು ತರುಣರಿಗೆ ಅಗತ್ಯ.

ಔಪಚಾರಿಕ ಶಿಕ್ಷಣ ಕ್ರಮ ಬಹಳ ವ್ಯಾಪಕವಾಗಿ ಅಭಿವೃದ್ಧಿ ಹೊಂದುತ್ತಿದ್ದರೂ ದೇಶದ ಸರ್ವರಿಗೂ ಅದರ ಪ್ರಯೋಜನ ಲಭಿಸುವಂತಾಗಲು ಅಂದರೆ, ಸಾರ್ವತ್ರಿಕಗೊಳಿಸಲು ಸಾಧ್ಯವಾಗುತ್ತಿಲ್ಲ. ಏಕೆಂದರೆ, ಈಗಿರುವಂತೆ ಔಪಚಾರಿಕ ಪದ್ಧತಿಯು ವಿದೇಶಿ ಮಾದರಿಯನ್ನು ಅನುಸರಿಸಿ ಸ್ಥಾಪಿಸಲ್ಪಟ್ಟಿದೆ. ಅದು ಭಾರತದ ಸಂಸ್ಕೃತ ಮತ್ತು ಮಣ್ಣಿಗೆ ಸಂಬಂಧಿಸಿರುವುದಿಲ್ಲ. ಆದರೂ ಇಂದಿನ ವಿದ್ಯಾ ಪದ್ಧತಿ ದೇಶದ ಪ್ರಚಲಿತ ಸಾಮಾಜಿಕ, ಆರ್ಥಿಕ ಸ್ಥಿತಗತಿಗಳ ಪ್ರತೀಕವಾಗಿದೆ.

ಔಪಚಾರಿಕ ಶಿಕ್ಷಣದಿಂದ ಉನ್ನತ ಶಿಕ್ಷಣಕ್ಕೆ ಹೆಚ್ಚು ಪ್ರೊತ್ಸಾಹ ದೊರೆಯುತ್ತಿದೆ. ಲಕ್ಷಾಂತರ ಪಧವೀಧರರು ಪ್ರತಿವರ್ಷವೂ ವಿಶ್ವ ವಿದ್ಯಾಲಯಗಳಿಂದ ಹೊರ ಬರುತ್ತಿದ್ದಾರೆ. ಅನಕ್ಷರಸ್ಥ ಮತ್ತು ಕಲಿತವರು, ಬಡವ-ಬಲ್ಲಿದರ, ನಡುವಿನ ಬಿರುಕು ದಿನದಿನಕ್ಕೆ ದೊಡ್ಡದಾಗುತ್ತಿದೆ. ಶಾಲೆಗಳಿಗೆ ದಾಖಲಾದವರಲ್ಲಿ ಪ್ರಾಥಮಿಕ ಶಾಲೆಗಳಿಂದ ಶೇ.೪೦ ರಷ್ಟು, ಪ್ರೌಢಶಾಲೆಗಳಿಂದ ಶೇ. ೧೫ರಷ್ಟು ಮಂದಿ ಮಧ್ಯೆ ಕಾಲದಲ್ಲಿ ಬಿಟ್ಟು ಹೋಗುವವರೆಂದು ತಿಳಿದು ಬರುತ್ತದೆ. ಶಾಲೆಯನ್ನು ಬಿಟ್ಟವರಲ್ಲಿ ಹೆಚ್ಚುಮಂದಿ ಕಲಿತುದನ್ನು ಮರೆತು ನಿರಕ್ಷರಸ್ಥರಾಗಿ ಮತ್ತೆ ವಯಸ್ಕರ ಶಾಲೆಗೆ ಸೇರುವ ಸಂಭವವುಂಟು.

'ಇಂದಿನ ಮಕ್ಕಳೇ ನಾಳಿನ ಪ್ರಜೆಗಳೂ' ಎಂಬುದನ್ನು ಅರಿತು ಉತ್ತಮ ಸಮಾಜ ಹಾಗೂದೇಶ ನಿರ್ಮಾಣಕ್ಕಾಗಿ ಉತ್ತಮ ವ್ಯಕ್ತಿಗಳನ್ನು ತಯಾರು ಮಾಡುವ ಹೊಣೆ ಶಿಕ್ಷಣದ ಮೇಲಿದೆ. ಪ್ರತಿಯೊಂದು ಶಾಲೆಕಾಲೇಜುಗಳು ಮಕ್ಕಳ ನೈತಿಕ ಮಟ್ಟವನ್ನು ಸುಧಾರಿಸುವಲ್ಲಿ ಪ್ರಯತ್ನಿಸಬೇಕು. ಅವರಲ್ಲಿ ಸಹಕಾರ, ಸಹಾಯ ತಾಳ್ಮೆ, ಸತ್ಯ. ಶಾಂತಿ, ತ್ಯಾಗ- ಮುಂತಾದ ಗುಣಗಳನ್ನು ಬೆಳೆಸಬೇಕು. " ಶಿಕ್ಷಣವು ಒಂದು ಬಗೆಯ ವಿಧಾನ. ಈ ವಿಧಾನದಿಂದಲೇ ಹಾಗೂ ಈ ವಿಧಾನದಲ್ಲಿಯೇ ಎಳೆಯ ಮಕ್ಕಳ ಜ್ಞಾನ, ಶೀಲ, ಹಾಗೂ ವರ್ತನೆಗಳು ಸಾಕಾರಗೊಳ್ಳುವುವು. ಆದ್ದರಿಂದ ಮಗುವಿನಲ್ಲಿರುವ ಸುಪ್ತ-ಶಕ್ತಿಗಳನ್ನು ಹಂತ ಹಂತವಾಗಿ ಪ್ರಕಟಗೊಳಿಸುವುದೇ ಶಿಕ್ಷಣ". -ಎಂಬ ಅಭಿಪ್ರಾಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ಡ್ರಿವರ್ ರವರು ವ್ಯಕ್ತ ಪಡಿಸಿದ್ದಾರೆ. ಈ ಅಭಿಪ್ರಾಯ ಔಪಚಾರಿಕ ಶಿಕ್ಷಣದ ಗುರುತರವಾದ ಜವಾಬ್ದಾರಿಯನ್ನು ಸೂಚಿಸುತ್ತದೆ.

ಔಪಚಾರಿಕ ಶಾಲಾ ಶಿಕ್ಷಣದಲ್ಲಿ ಹಂತ ಹಂತಕ್ಕೂ ನಿಯಮಿತ ವ್ಯಾಸಂಗ ಪಟ್ಟಿದೆ. ಉಪಾಧ್ಯಾಯರು ಸಾಕಷ್ಟು ವಿದ್ಯಾರ್ಹತೆ ಮತ್ತು ತರಬೇತಿ ಪಡೆದವರು. ಔಪಚಾರಿಕ ಶಕ್ಷಣದ ವ್ಯವಸ್ಥೆ ಸರಕಾರದ ಹೊಣೆ. ಅದಕ್ಕೆ ತಗಲುವ ವೆಚ್ಚದ ಬಹುಭಾಗ ಸರಕಾರದ ಬೊಕ್ಕಸದ್ದು. ಶಾಲೆಯ ವೇಳೆ ನಿಯಮಿತ. ಮೇಲೆ ಹೇಳಿದಂತೆ

ಗೊತ್ತಾದ ಪಠ್ಯ ಸೂಚಿಯಿದೆ. ಪಠ್ಯಪುಸ್ತಕ ಮತ್ತು ಪೂರಕ ಪುಸ್ತಕಗಳಿವೆ. ಕಾಲಕ್ಕೆ ಸರಿಯಾಗಿ ಗಂಟೆಬಾರಿಸುವ ಪದ್ಧತಿ ಇದೆ. ಮಕ್ಕಳು ಶಾಲೆಗೆ ಸರಿಯಾದ ವೇಳೆಗೆ ಬರಬೇಕೆಂಬ ನಿಯಮ ಇದೆ. ಪ್ರತಿವರ್ಷವೂಪರೀಕ್ಷೆಯಲ್ಲಿ ತೇರ್ಗಡೆಯಾದ ಹೊರತು ಮುಂದಿನ ತರಗತಿಗೆ ಹೋಗುವಂತಿಲ್ಲ. ವಿದ್ಯಾರ್ಥಿಗೆ ನೀಡುವ ಪ್ರಶಸ್ತಿ ಪತ್ರಿಕೆ ಉದ್ಯೋಗಕ್ಕೆ ರಹದಾರಿ. ಈ ತೆರನಾದ ಸಾಂಪ್ರಾದಯಿಕ ಶಾಲಾ ಪದ್ಧತಿ ಬಹಳ ಕಾಲದಿಂದ ನಡೆದು ಬಂದಿದೆ.

ಮಕ್ಕಳಲ್ಲಿ ಸಹಜವಾದ ಕುತೂಹಲ ಇದೆ. ಇದು ಏನು? ಅದು ಹೇಗೆ? ಹೀಗೆ ತಂದೆ ತಾಯಂದಿರನ್ನು ಕಾಡಿಬೇಡಿ ಉತ್ತರ ಪಡೆಯುವ ಪ್ರವೃತ್ತಿ ಮಕ್ಕಳಲ್ಲಿದೆ. ಆದರೆ ಇಂದಿನ ಶಾಲೆಯ ವಾತಾವರಣದಲ್ಲಿ ಮಕ್ಕಳ ಕುತೂಹಲ ಉಡುಗಿ ಉಪಾಧ್ಯಾಯರು ಹೇಳಿದ್ದನ್ನು ಉರುಹಾಕಿ ಪರೀಕ್ಷೆಯಲ್ಲಿ ಉಗುಳುವ ಪದ್ಧತಿ ಹೆಚ್ಚಾಗಿ ಬೆಳೆಯುತ್ತಿರುವುದು ಎಲ್ಲಾರಿಗೂ ತಿಳಿದ ವಿಷಯ. ಈ ಪ್ರವೃತ್ತಿ ಮಕ್ಕಳ ಬೌದ್ಧಿಕ ಬೆಳವಣಿಗೆಗೆ ಮಾರಕ.

**ಔಪಚಾರಿಕ ಶಿಕ್ಷಣದ ಇತಿಹಾಸ**

ಆದಿಮಾನವನಿಗೆ ಕೌಟುಂಬಿಕ ಜೀವನವೇ ಒಂದು ರೀತಿಯ ಶಿಕ್ಷಣವಾಗಿತ್ತು. ಕಾಲ ಬದಲಾದಂತೆ ಜೀವನದ ಗತಿ ಬದಲಾಯಿತು. ಸಂಸಾರದ ಮತ್ತು ಸಮಾಜದ ಪರಿಸರ ವಿಸ್ತಾರವಾಯಿತು. ಅದಕ್ಕೆ ಅನುಗುಣವಾಗಿ ಜ್ಞಾನರ್ಜನೆಯ ಅವಕಾಶಗಳು ಹೆಚ್ಚಿದವು. ಕೆಲವು ವಿಷಯಗಳಲ್ಲಿ ಹೆಚ್ಚಿನ ತಿಳುವಳಿಕೆ ಅನಿವಾರ್ಯವಾಯಿತು. ಆತ್ಮ ರಕ್ಷಣೆಗಾಗಿ ಯುದ್ಧ ಕಲೆಯನ್ನು ಕಲಿತವರು ಕೆಲವರು ಜೀವನ ನಡೆಸಲು ಬೇಸಾಯ, ಮೀನುಗಾರಿಕೆ, ಬೇಟೆ- ಮುಂತಾದ ಕಸಬುಗಳನ್ನು ಕಲಿತವರು ಇನ್ನೂ ಹಲವಾರು ಮಂದಿ. ಗೃಹ ಕೃತ್ಯ ಅಂದರೆ ಅಡಿಗೆ, ಮಕ್ಕಳ ಲಾಲನೆ ಮತ್ತು ಪಾಲನೆ ಹೆಂಗಸರ ಪಾಲಿಗೆ ಬಂತು. ಇದೆಲ್ಲಾ ಅನುವಂಶಿಕವಾಗಿ ತಂದೆಯಿಂದ ಮಗನಿಗೆ, ತಾಯಿಯಿಂದ ಮಗಳಿಗೆ ಬಂದ ಕೊಡುಗೆ.

ಕಾಲ ಮುಂದುವರಿದಂತೆ ಜೀವನ ಜಟಿಲವಾಯಿತು. ಜ್ಞಾನ ಬೆಳೆದಂತೆ ಅದನ್ನು ಶೇಖರಿಸುವುದು ಅನಿವಾರ್ಯವಾಗಿ ಕಂಡು ಬಂದಿತು. ಅದಕ್ಕಾಗಿಯೇ ಪ್ರತ್ಯೇಕ ಸಂಘ ಸಂಸ್ಥೆಗಳು ಹುಟ್ಟಿಕೊಂಡವು. ಈ ತೆರನಾದ ಸಂಘ ಸಂಸ್ಥೆಗಳ ಕಾರ್ಯವನ್ನು ನಿರ್ವಹಿಸುವ ವರ್ಗವೊಂದು ಸೃಷ್ಟಿ ಆಯಿತು. ಅದೇ ಇಂದಿನ ಉಪಾಧ್ಯಾಯ ವರ್ಗ- ಪ್ರಾರಂಭದಲ್ಲಿ ಅವರೆಲ್ಲಾ ಹೆಚ್ಚಾಗಿ ಅರ್ಚಕವೃತ್ತಿಯವರು.

ಆರ್ಯರ ಕಾಲದಲ್ಲಿ ಕೆಲವರಿಗೆ ಮಾತ್ರ ಶಿಕ್ಷಣ ಸೀಮಿತವಾಗಿತ್ತು. ಚತುರ್ವರ್ಣದಲ್ಲಿ ಪ್ರಧಾನ ಸ್ಥಾನವನ್ನು ಹೊಂದಿದ್ದ ದ್ವಿಜರು ಅನೂಚಾನವಾಗಿ ನಡೆದು ಬಂದ ವೇದಾಧ್ಯಯನ, ಶಾಸ್ತ್ರ, ಸಾಹಿತ್ಯ, ವೇದಾಂತ ಮತ್ತು ಆಚಾರ ವ್ಯವಹಾರಗಳನ್ನು ಕಲಿಯುವುದರಲ್ಲಿ ನಿರತರಾದರು. ಕೆಲವು ಕಾಲನಂತರ ಕ್ಷತ್ರಿಯರು ಮತ್ತು ವೈಶ್ಯರಿಗೆ ಶಿಕ್ಷಣ ದೊರೆಯಿತು. ಸಮಾಜದ ಈ ಎರಡು ವರ್ಗದವರು ವೇದಾಧ್ಯಯನದ ಜೊತೆಗೆ ವಂಶಪಾರಂಪರ್ಯವಾಗಿ ಬಂದ ತಮ್ಮ ವೃತ್ತಿ ಶಿಕ್ಷಣವನ್ನು ಬೆಳಸಿಕೊಂಡರು. ಕ್ಷತ್ರಿಯರು ಯುದ್ಧಕಲೆ ಮತ್ತು ರಾಜ್ಯಶಾಸ್ತ್ರ ಅಧ್ಯಾಯನದಲ್ಲೂ, ವೈಶ್ಯರು ವಾಣಿಜ್ಯದಲ್ಲೂ ತೊಡಗಿದರು.

ಬೌದ್ಧರ ಕಾಲದಲ್ಲಿ ಶಿಕ್ಷಣ ಎಲ್ಲರಿಗೂ ಲಭ್ಯವಾಯಿತು. ಆಗಿನ ಕಾಲಕ್ಕೆ ಬೌದ್ಧ ವಿಹಾರಗಳು ಶಿಕ್ಷಣ ಕೇಂದ್ರಗಳಾದವು. ಈ ವಿಹಾರಗಳಿಗೆ ಪ್ರವೇಶ ಪಡೆಯಲು ಅಪೇಕ್ಷಿಸಿದ ವಿದ್ಯಾರ್ಥಿಗಳು ಜಾತೀಯತೆಯನ್ನು ಮತ್ತು ಲೌಕಿಕ ಆಸೆ- ಆಮಿಷ ತ್ಯಾಗ ಮಾಡಬೇಕಾಗಿತ್ತು. ಮುಸ್ಲಿಮರ ಕಾಲದಲ್ಲೂ ಸಹ ಶಿಕ್ಷಣ ಪದ್ಧತಿ ಸ್ವಲ್ಪ ಬದಲಾವಣೆಯೊಡನೆ ಮುಂದುವರೆಯಿತು. ಭಾರತದ ಮೇಲೆ ದಾಳಿ ಮಾಡಿದ ವಿದೇಶಿಯರ ಪೈಕಿ ಬಹುಕಾಲ ಬಲವಾಗಿ ಬೇರೂರಿ ನಿಂತವರು ಬ್ರಿಟಿಷರು. ಅವರು ಸರಕಾರದ ಆಡಳಿತವನ್ನು ನೋಡಿಕೊಳ್ಳಲು ಬ್ರಿಟನ್ನಿನಿಂದ ಉನ್ನತ ಅಧಿಕಾರಿಗಳನ್ನು ಕರೆಸಿಕೊಂಡರು. ಅವರಿಗೆ ಸ್ಥಳೀಯರು ಸರಕಾರದ ಕೆಲಸಗಳಲ್ಲಿ ಸಹಾಯಕರಾಗಿ ಸೇವೆ ಸಲ್ಲಿಸಬೇಕಾಯಿತು.ಅಂತವರು ಅನಿವಾರ್ಯವಾಗಿ ಆಂಗ್ಲಭಾಷೆಯನ್ನು ಕಲಿಯಲು ತೊಡಗಿದರು.

ಭಾರತದ ಈಗಿನ ವಿದ್ಯಾಭ್ಯಾಸ ಪದ್ಧತಿಯನ್ನು ರೂಪಿಸಿದವನು ಮೆಕಾಲೆ. ಮತ್ತು ಅದನ್ನು ಆಚರಣೆಗೆ ತರಬೇಕು ಎಂದು ಅನುಮೋದಿಸಿ ಒತ್ತಾಸೆ ಕೊಟ್ಟವನು ವುಡ್. ಆಗಿನಿಂದ ಅದರಲ್ಲಿ ಕೆಲವು ಮಾರ್ಪಾಟುಗಳು ನಡೆದಿದ್ದರೂ, ಅದು ಈಗಲು ಬಹುಮಟ್ಟಿಗೆ ಮೆಕಾಲೆಯು ರೂಪಿಸಿದಂತೆಯೇ ಇದೆ. ಭಾರತದಲ್ಲಿ ಈಗ ಆಚರಣೆಯಲ್ಲಿರುವ ಶಿಕ್ಷಣ ಪದ್ಧತಿಯಲ್ಲಿ ಗುಣಭಾಗವು ಗಣನೀಯವಾಗಿದ್ದರೂ, ಒಂದೆರಡು ಸಂಗತಿಗಳನ್ನು ಮರೆಯುವಂತಿಲ್ಲ. ಈ ಶಿಕ್ಷಣ ಪದ್ಧತಿಯು 'ಈಸ್ಟ್ ಇಂಡಿಯಾ ಕಂಪನಿಗೆ' ಗುಮಾಸ್ತರು, ಮತ್ತಿತರ ಕೆಲಸಗಳಿಗೆ ಬೇಕಾಗಿದ್ದ ಜನರನ್ನು ಒದಗಿಸುವ ತಾತ್ಕಾಲಿಕ ಪ್ರಯೋಜನ ದೃಷ್ಟಿಯಿಂದ ರೂಪಿತವಾಯಿತು. ಭಾರತೀಯ ಮತ್ತಿತರ ಪೌರಸ್ತ್ಯ ನಾಗರಿಕತೆಗಳು ತೀರ ನಿಕೃಷ್ಟವಾದುವು. ಪಾಶ್ಚಾತ್ಯರು ಅತ್ಯಂತ ಶ್ರೇಷ್ಠರು, ಅವರ ನಡೆ-ನುಡಿಗಳ ಅನುಕರಣದಿಂದಲೇ ಭಾರತೀಯರು ಉದ್ಧಾರವಾಗಬೇಕು ಎಂಬ ಭಾವನೆಯು ಅದಕ್ಕೆ ಮೂಲವಾಗಿತ್ತು. ಭಾರತದಲ್ಲಿ ಇಂದು ಶಾಲಾ ಶಿಕ್ಷಣ ವಿಸ್ತಾರಗೊಳ್ಳುತ್ತಿದೆ. ವಿವಿಧ ವರ್ಗದ ಏಳೂ ಲಕ್ಷಕ್ಕೂ ಹೆಚ್ಚು ಶಿಕ್ಷಣ ಸಂಸ್ಥೆಗಳಿವೆ. ಅವುಗಳಲ್ಲಿ ೧೦ ಕೋಟಿಗೂ ಹೆಚ್ಚು ವಿದ್ಯಾರ್ಥಿಗಳಿದ್ದಾರೆ. ಉಪಾಧ್ಯಾಯರ ಸೈನ್ಯವೇ ೩೦ ಲಕ್ಷ.

ಒಂದು ವರ್ಷದಲ್ಲಿ ಶಿಕ್ಷಣಕ್ಕೆ ೨೯೦೦ ಕೋಟಿ ರೂಪಾಯಿ ವಿನಿಯೋಗ ಆಗುತ್ತದೆ. ಇಷ್ಟಾದರೂ ಭಾರತದಲ್ಲಿ ಶಿಕ್ಷಣದ ಪ್ರಗತಿ ತೃಪ್ತಿಕರವಾಗಿಲ್ಲ. ಎಂಬ ಕೂಗಿದೆ. ವಿದ್ಯಾವಂತ ನಿರುದ್ಯೋಗಿಗಳ ಸಂಖ್ಯೆ ಹೆಚ್ಚಿದೆ. ಶೇಕಡ ೮೦ ಮಂದಿ ಗ್ರಾಮಸ್ಥರ ಪರಿಸ್ಥಿತಿ ಶೋಚನೀಯ. ಅವರಲ್ಲಿ ಅನೇಕರಿಗೆ ಇನ್ನೂ ಶಾಲಾ ಶಿಕ್ಷಣದ ಸೌಲಭ್ಯವಿಲ್ಲ. ಇದ್ದರೂ ಶಾಲಾ ಶಿಕ್ಷಣ ಅವರಿಗೆ ಆಕರ್ಷಣೆ ಉಂಟು ಮಾಡಿಲ್ಲ. ಕಾರಣ, ಶಿಕ್ಷಣಕ್ಕೂ ಮತ್ತು ಉದ್ಯೋಗಕ್ಕೂ ಹಾಗೂಜೀವನಕ್ಕೂ ಒಂದು ರೀತಿಯ ಹೊಂದಾಣಿಕೆ ಇಲ್ಲ.

ವಿಶ್ವದ ಎರಡನೆಯ ಮಹಾಯುದ್ಧದ ಅಂತ್ಯದಲ್ಲಿ ಔಪಚಾರಿಕ ಶಾಲಾ ಶಿಕ್ಷಣ ವಿಶ್ವದಲ್ಲಿ ಬೃಹದಾಕಾರವಾಗಿ ಬೆಳೆಯಿತು. ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣದೊಂದಿಗೆ ಪ್ರೌಢಶಾಲೆ ಮತ್ತು ಕಾಲೇಜು ಶಿಕ್ಷಣ ವ್ಯಾಪಕವಾಗಿ ಹರಡಿತು. ಈ ಬಾಬಿಗೆ ಪ್ರತಿಯೊಂದು ಸರಕಾರವು ಹೇರಳವಾಗಿ ಹಣವನ್ನು ಹರಿಸುತ್ತಿದೆ. ಈ ವೆಚ್ಚ ವರ್ಷೇ, ವರ್ಷೇ ಹೆಚ್ಚುತ್ತಿದೆ. ಅಂತೆಯೇ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲೂ ಔಪಚಾರಿಕ ಶಾಲಾ ಶಿಕ್ಷಣ ಬಹುವಾಗಿ ಬೆಳೆಯುತ್ತಿದೆ. ಔಪಚಾರಿಕ ಶಾಲಾ ಶಿಕ್ಷಣವೊಂದೇ ರಾಷ್ಟ್ರದ ಪ್ರಗತಿಗೆ ಮದ್ದು ಎಂಬುದು ಅಭಿವೃದ್ಧಿಶೀಲ ರಾಷ್ಟ್ರಗಳು ಆಡಳಿತಗಾರರ ಮತ್ತು ಮುಖಂಡರ ಕಲ್ಪನೆ.

ಆದ್ದರಿಂದ ಈ ರಾಷ್ಟ್ರಗಳಲ್ಲೂ ಸಹ ಔಪಚಾರಿಕ ಶಾಲಾ ಶಿಕ್ಷಣಕ್ಕೆ ಹೆಚ್ಚಿನ ಮಾನ್ಯತೆ ದೊರೆಯುತ್ತಿದೆ. ಈ ದಿಸೆಯಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳು ಕೈ ಕೊಂಡಿರುವ ಪ್ರಯತ್ನವನ್ನೂ ಯುನೆಸ್ಕೋ ಸಹ ಮೆಚ್ಚಿಕೊಂಡಿದೆ. ಜೊತೆಗೆ ಕೆಲವು ಸಂದರ್ಭಗಳಲ್ಲಿ ತಾಂತ್ರಿಕ ಮತ್ತು ಧನಸಹಾಯವನ್ನು ಸಹ ನೀಡುತ್ತಿದೆ. ಇತ್ತೀಚೆಗೆ ಶಾಲಾ ಶಿಕ್ಷಣದ ಕೊರತೆಗಳು ಶಿಕ್ಷಣ ತಜ್ಞರಿಗೂ ಅರಿವಾಗಿದೆ. ಶಾಲಾಶಿಕ್ಷಣ ಒಂದೇ ವ್ಯಕ್ತಿಯ ಹಾಗೂ ಸಮಾಜದ ಎಲ್ಲ ಸಮಸ್ಯೆಗಳನ್ನು ಪರಿಹರಿಸಲಾರದು, ಎಂಬ ಅಂಶ ಅವರಿಗೆ ಮನವರಿಕೆ ಆಗಿದೆ. ಈಗ ಈ ತೆರನಾದ ಔಪಚಾರಿಕ ಶಾಲಾ ಶಿಕ್ಷಣ ದೀನ ದುರ್ಬಲ ವರ್ಗದವರನ್ನು ಹಿಂದೆಯೇ ತಿಳಿಸಿದಂತೆ ಅಷ್ಟಾಗಿ ಆಕರ್ಷಿಸುತ್ತಿಲ್ಲ.

### ೫.೨ ಅನೌಪಚಾರಿಕ ಶಿಕ್ಷಣ.

"ಸರ್ವರಿಗೂ ಶಿಕ್ಷಣ" -ಎಂಬ ಅಭಿಪ್ರಾಯ ಎಲ್ಲೆಡೆಯೂ ಕೇಳಿ ಬರುತ್ತಿದೆ. ರಾಷ್ಟ್ರ ಮತ್ತು ಅಂತರ ರಾಷ್ಟ್ರೀಯಮಟ್ಟದಲ್ಲಿ 'ಶಿಕ್ಷಣ'ಕ್ಕೆ ಹೆಚ್ಚಿನ ಒತ್ತು ಕೊಡಲಾಗಿದೆ. 'ಶಿಕ್ಷಣವು' ಈ ಕಾಲದ ಅತ್ಯಂತ ಮಹತ್ವದ ಸಾಧನ. ಶಿಕ್ಷಣ ಮನುಷ್ಯನಿಗೆ ಸ್ವಾವಲಂಬನೆ, ಆತ್ಮ ವಿಶ್ವಾಸ, ಮತ್ತು ಧೈರ್ಯವನ್ನು ತಂದು ಕೊಡುತ್ತದೆ.

ಆದರೆ ನಮ್ಮಲ್ಲಿ ಇಂತಹ ಶಿಕ್ಷಣ ಪಡೆದವರು ಎಷ್ಟು ಜನ? ಶಿಕ್ಷಣದ ಮೂಲಕ ಮಾನವ ಸಂಪನ್ಮೂಲಗಳನ್ನು ಸೃಷ್ಟಿಸಬಹುದೆಂಬ ಸಂಗತಿ ನಮ್ಮಲ್ಲಿ ಎಷ್ಟು ಜನರಿಗೆ ಗೊತ್ತಿದೆ? ಇಂದು ಅನಕ್ಷರಸ್ಥ, ಮೂಢ ಸಂಪ್ರದಾಯಗಳ ದಾಸನಾಗಿದ್ದಾನೆ. ವೈಚಾರಿಕವಾಗಿ, ವೈಜ್ಞಾನಿಕವಾಗಿ ಚಿಂತಿಸಲಾರ. ಏಕೆಂದರೆ ತನ್ನ ಸುತ್ತ ಮುತ್ತಣ ಹಾಗೂ ಹೊರಜಗತ್ತನಲ್ಲಿ ನಡೆಯುವ ಯಾವ ಘಟನೆಗಳೂ ಅವನಿಗೆ ತಿಳಿಯುವುದಿಲ್ಲ. ಇದರಿಂದಾಗಿ ಈತ ಅಕ್ಷರ ಕಲಿತವರ ಅಧೀನ. ಪರಾವಲಂಬಿ. ಹಾಗಾಗಿ ಯಾವುದೇ ರೀತಿಯ ಅಭಿವೃದ್ಧಿ ಕಾರ್ಯಗಳಲ್ಲಿ ಸಕ್ರೀಯವಾಗಿ ಭಾಗವಹಿಸಲಾರ. ಸರ್ಕಾರದ ಅಸಂಖ್ಯಾತ ಯೋಜನೆಗಳು ನಿಜವಾದ ಅರ್ಥದಲ್ಲಿ ಯಶಸ್ವಿಯಾಗಬೇಕಾದರೆ. ಜನರು ನೇರವಾಗಿ ಪಾಲ್ಗೊಂಡು ಪ್ರಯೋಜನ ಪಡೆಯುವಂತಿರಬೇಕು. ಅದಕ್ಕಾಗಿ ಅವರಿಗೆ ಸರಿಯಾದ ತಿಳಿವಳಿಕೆ ಇರಬೇಕು. ಆ ತಿಳಿವಳಿಕೆ ಮತ್ತು ವ್ಯವಹಾರ ಸಾಮರ್ಥ್ಯ ಬೆಳೆಯಬೇಕಾದರೆ, ತಕ್ಕ 'ವಿದ್ಯೆ' ಅಂದರೆ 'ಅಕ್ಷರ ಜ್ಞಾನ' ಜನ ಸಮುದಾಯಕ್ಕೆ ಅಗತ್ಯ.

'ಅಕ್ಷರವು ಈ ಶತಮಾನದ ಮುಖ್ಯ ಶಕ್ತಿಗಳಲ್ಲೊಂದು. ಈ ಶಕ್ತಿಯ ಸ್ವರೂಪದ ಬಗ್ಗೆ ಬೇರೆಬೇರೆ ಅಭಿಪ್ರಾಯಗಳು ಇರಬಹುದು. ಆದರೆ ಮೂಲಭೂತವಾಗಿ ಶಕ್ತಿ ಎಂಬುವುದರ ಬಗ್ಗೆ ಯಾವುದೇ ಎರಡು ಮಾತಿಲ್ಲ. ಶಕ್ತಿಯು ಪ್ರಕೃತಿ ಜನ್ಯವಾಗಿದ್ದರೆ ಅದು ಬರಿಯ ಶಕ್ತಿಯೆ. ಅದು ಮಾನವನಿಂದ ಉತ್ಪಾದನೆಗೊಂಡಿದ್ದಾದರೆ, ಕೇವಲ ಶಕ್ತಿಯಾಗಿರದೆ ಅಸ್ತ್ರವೂ ಅಗುತ್ತದೆ.ಹಲವಾರು ಕಾರಣಗಳಿಂದಾಗಿ ಎಳೆತನದಲ್ಲಿ ವಿದ್ಯೆಯಿಂದ ವಂಚಿತರಾದ ಅನಕ್ಷರಸ್ಥರಿಗೆ ಇಂದು ಅನೌಪಚಾರಿಕ ಶಿಕ್ಷಣದಾಟಿಯಲ್ಲಿ 'ಶಿಕ್ಷಣ'ವನ್ನು ನೀಡಲಾಗುತ್ತಿದೆ.

" ಶಾಲೆಯ ಹೊರಗೆ ವ್ಯವಸ್ಥೆಯಿಂದ ಕೂಡಿದ ಚೌಕಟ್ಟಿನಲ್ಲಿ ದೊರೆಯುವ ಶಿಕ್ಷಣವೇ ಅನೌಪಚಾರಿಕ ಶಿಕ್ಷಣ". ಶಾಲೆಯನ್ನು ತೊರೆದು ಹಾಗೂ ಶಾಲೆಗಳಿಲ್ಲದ ವಸತಿ ಸ್ಥಳಗಳ ಮಕ್ಕಳು, ಪೂರ್ಣಕಾಲದ ಶಾಲೆಗಳಿಗೆ ಬರಲಾಗದ ದುಡಿಯುವ ಮಕ್ಕಳು ಹಾಗೂ ಬಾಲಕಿಯರಿಗಾಗಿ ನೀಡುವ ಶಿಕ್ಷಣವೇ ಅನೌಪಚಾರಿಕ ಶಿಕ್ಷಣ.

"ಸರ್ವರಿಗೆ ಸಮಬಾಳು; ಸರ್ವರಿಗೆ ಸಮಪಾಲು"- ಎಂಬ ನವಯುಗ ವಾಣಿ ಕರೆಯುತ್ತಿದೆ ಕೇಳಿ- ಎಂಬ ಕುವೆಂಪುರವರ ನುಡಿ, ಎಲ್ಲರಿಗೂ ಇಂದು ಶಿಕ್ಷಣ, ಆರೋಗ್ಯ, ವಸತಿ ಅಗತ್ಯ ಎಂಬುವುದನ್ನು ಸೂಚಿಸುತ್ತದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಎಲ್ಲರೂ'ಸಮಾನರು' ಎಂಬುದಕ್ಕೆ ಎರಡು ಮಾತಿಲ್ಲ. ಶಿಕ್ಷಣದಿಂದ ವಂಚಿತರಾದವರಿಗೆ ಅನೌಪಚಾರಿಕ ಶಿಕ್ಷಣದ ಮೂಲಕ ಶಿಕ್ಷಣವನ್ನು ನೀಡಬೇಕಾಗಿದೆ.

ಅನೌಪಚಾರಿಕ ಶಿಕ್ಷಣವೆಂಬ ಕಲ್ಪನೆ ೧೯೬೦ ರಲ್ಲಿ ಹುಟ್ಟಿಕೊಂಡಿದೆ. ಭಾರತದಲ್ಲಿ ಇತ್ತೀಚೆಗೆ ಪ್ರಚಾರಕ್ಕೆ ಬಂದಿರುವ ಅದು ಹೊಸ ವಿದ್ಯಾ ಪದ್ಧತಿಯಂತೂ ಅಲ್ಲವೇ ಅಲ್ಲ. ಅನೌಪಚಾರಿಕ ಶಿಕ್ಷಣ ಒಂದು ಕಲಿಕೆಯ ವಿಧಾನ. ಇಂದಿನ ವಿದ್ಯಾಪದ್ಧತಿ ದೇಶದ ಪ್ರಚಲಿತ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಪ್ರತೀಕ ಆಗಿದೆ.

ಭಾರತಕ್ಕೆ ಅನೌಪಚಾರಿಕ ಶಿಕ್ಷಣ ಹೊಸದಲ್ಲ. ಪುರಾಣ ಶ್ರಾವಣ,ಪ್ರವಚನ, ಹರಿಕಥೆ, ಯಕ್ಷಗಾನ, ಬಯಲಾಟ, ಸೂತ್ರದಗೊಂಬೆ, ಚಕ್ಕಳಗೊಂಬೆ ಆಟ ಮುಂತಾದ ಜಾನಪದ ಮನರಂಜನ ಕಾರ್ಯಕ್ರಮಗಳು ಅನೌಪಲಚಾರಿಕ ಶಿಕ್ಷಣ ಮಾಧ್ಯಮಗಳು. ಇವೆಲ್ಲ ಬಹು ಹಿಂದಿನಿಂದ ಬಂದವು. ನಮ್ಮ ಗುರುಕುಲ ಪದ್ಧತಿ ಅನೌಪಚಾರಿಕ ಶಿಕ್ಷಣವೇ ಆಗಿದೆ.

ಅನೌಪಚಾರಿಕ ಶಿಕ್ಷಣದಲ್ಲಿ ನಿಗದಿಯಾದ ಪಠ್ಯಸೂಚಿಯಿಲ್ಲ. ಇದ್ದರೂ ಅದನ್ನು ಶಿಕ್ಷಣಾರ್ಥಿಗಳು ತಮ್ಮ ಅವಶ್ಯಕತೆಗೆ ತಕ್ಕಂತೆ ಬದಲಾಯಿಸಿಕೊಳ್ಳಬಹುದು. ಶಿಕ್ಷಣಾರ್ಥಿಗಳ ಆಸಕ್ತಿ, ಅಭಿರುಚಿ ಹಾಗೂಮನೋಭಾವನೆಯನ್ನು ಅನುಸರಿಸಿ ರೂಪಿಸುವುದು ಅನೌಪಚಾರಿಕ ಶಿಕ್ಷಣದ ಲಕ್ಷಣ. ಶಿಕ್ಷಣ ಕ್ರಮ ರೂಪಿಸುವುದರಲ್ಲಿ ಶಿಕ್ಷಣಾರ್ಥಿಗಳ ಪಾತ್ರವಿದೆ. ಕಲಿಯುವ ವೇಳೆ ಮತ್ತು ಸ್ಥಳ ಗೊತ್ತು ಮಾಡುವುದರಲ್ಲಿ ಅವರ ಅಭಿಪ್ರಾಯಕ್ಕೆ ಮನ್ನಣೆ ಉಂಟು ಶಿಕ್ಷಣಾರ್ಥಿಗಳ ಮತ್ತು ಉಪಾಧ್ಯಾಯರ ಮಧ್ಯೆ ಅಂತರವಿಲ್ಲ. ಇಬ್ಬರೂ ಕಲಿಕೆಯಲ್ಲಿ ಪಾಲುಗಾರರು.

'ಅನೌಪಚಾರಿಕ ಶಿಕ್ಷಣ'ವು ಶಾಲೆಗೆ ಸೇರದ, ಶಾಲೆ ಬಿಟ್ಟ ೧೦-೧೪ ವಯಸ್ಸಿನವರು, ೧೫-೩೫ರ ವಯಸ್ಸಿನವರು, ೩೫-೫೦ ವಯಸ್ಸಿನವರು, ೫೦ಕ್ಕೆ ಮೇಲ್ಪಟ್ಟ ವಯಸ್ಸಿನವರು ಹೀಗೆ ಎಲ್ಲರಿಗಾಗಿ ಇದೆ. ಇದರ ಉದ್ದೇಶ ಕೇವಲ ಸಾಕ್ಷರತೆ ಅಲ್ಲ. ಜ್ಞಾನ, ಕ್ರಿಯೆ ಹಾಗೂ ಕೌಶಲಗಳನ್ನು ಬೆಳೆಸಿಕೊಂಡು, ಬದುಕಿನ ಮಟ್ಟವನ್ನು ಎತ್ತರಿಸುವುದಾಗಿದೆ.

'ಅನೌಪಚಾರಿಕ ಶಿಕ್ಷಣ'ವು ಪ್ರತಿಯೊಬ್ಬ ಅನಕ್ಷರಸ್ಥರಿಗೆ ದೊರಕುವಂತಾಗಬೇಕು. ಸಾಕ್ಷರತಾ ಆಂದೋಲನಗಳು ಆ ನಿಟ್ಟಿನಲ್ಲಿ ಕೆಲಸ ಮಾಡುತ್ತಿವೆ. ಸರಕಾರವು ಅದಕ್ಕಾಗಿ ಹೆಚ್ಚಿನ ವೆಚ್ಚವನ್ನು ವ್ಯಯಮಾಡುತ್ತಿದೆ. "ಸದಾವಕಾಶವನ್ನು ಕಳೆದು ಕೊಂಡರೆ ತನ್ನನ್ನು ತಾನೇ ಕಳೆದು ಕೊಂಡಂತೆ" -ಎಂಬಗಾದೆ ಅನಕ್ಷರಸ್ಥರ ಜಾಗೃತಿಯನ್ನು ಸೂಚಿಸುತ್ತದೆ. " ನಿಜವಾದ ಆನಂದ, ಐಶ್ವರ್ಯ ಆರಾಮದಿಂದಾಗಲಿ, ಜನರ

ಹೊಗಳಿಕೆಯಿಂದಾಗಲಿ, ಬರುವುದಿಲ್ಲ. ಏನಾದರೂ ಯೋಗ್ಯ ಶಿಕ್ಷಣ ನೀಡುವುದರಿಂದ, ಪಡೆಯುವುದರಿಂದಲೇ ಅದು ದೊರಕುತ್ತದೆ". ಎಂಬ ಕಾರ್ಲೈಲ್ ರ ಅಭಿಪ್ರಾಯ ಶಿಕ್ಷಣದ ಮಹತ್ವವನ್ನು ತಿಳಿಸುತ್ತದೆ.

ನಮ್ಮ ಸಂವಿಧಾನದ ಪ್ರಕಾರ ಪ್ರತಿಯೊಬ್ಬರಿಗೂ ವಿದ್ಯಾಭ್ಯಾಸದ ಹಕ್ಕಿದೆ. ಅಷ್ಟೇ ಅಲ್ಲ. ಹುಡುಗನಿಗೇ ಆಗಲಿ, ಹುಡುಗಿಗೇ ಆಗಲಿ ಹದಿನಾಲ್ಕು ವರುಷ ತುಂಬುವವರೆಗೂ ಕಡ್ಡಾಯ ಉಚಿತ, ಶಿಕ್ಷಣ ಕೊಡಬೇಕೆಂದಿದೆದ. ಆದರೆ ನಾವು ನಮ್ಮ ಜನಸಂಖ್ಯೆಯ ಅರ್ಧವನ್ನೂ ಅಕ್ಷರಸ್ಥರನ್ನಾಗಿ ಮಾಡಲು ಸಾಧ್ಯವಾಗಿಲ್ಲ ಇದಕ್ಕೆ ಕಾರಣಗಳು ಹಲವಾರು . ಮೊದಲನೆಯದು ನಮ್ಮ ದೇಶದ ಅಪಾರ ಜನಸಂಖ್ಯೆ. ಎರಡನೆಯದು ಈ ಜನಸಂಖ್ಯೆಯ ಎಪ್ಪತ್ತೈದರಷ್ಟು ಜನ ವಾಸಿಸುವುದು ಗ್ರಾಮಾಂತರ ಪ್ರದೇಶಗಳಲ್ಲಿ. ಜೊತೆಗೆ ಬಡತನ. ಹುಟ್ಟಿದ್ದೇ ಅಪರಾಧವಾಗಿಬದುಕುವುದೇ ನರಕಸಾದೃವಾಗಿರುವಾಗ ಇನ್ನು ಶಿಕ್ಷಣವೆಲ್ಲಿ? ಅನೇಕರು ಶಾಲೆ ಸೇರಿದರೂ ಒಂದಲ್ಲ ಒಂದು ಕಾರಣಕ್ಕಾಗಿ ಒಂದೆರಡು ತರಗತಿಗಳಾದ ಮೇಲೆ ಬಿಟ್ಟು ಬಿಡುತ್ತಾರೆ. ಅನಕ್ಷರಸ್ಥರು ಅಜ್ಞಾನಿಗಳಲ್ಲ ನಿಜ. ಆದರೂ ಗಾಂಧೀಜಿ ಅವರು ಹೇಳಿದಂತೆ ಹೆಬ್ಬೆಟ್ಟೊತ್ತುವುದು-ರಾಷ್ಟ್ರಕ್ಕೇ ಅಪಮಾನ. ಪ್ರಜಾಪ್ರಭುತ್ವದ ಪ್ರಜೆಗಳಾದ ನಮಗೆ ನಮ್ಮ ಹಕ್ಕುಗಳು ಇವೆ. ಜವಾಬ್ದಾರಿಗಳೂ ಇವೆ. ನಮ್ಮದು ಪ್ರಜಾಪ್ರಭುತ್ವ, ತಮ್ಮ ನಾಯಕರನ್ನು ಆರಿಸುವವರು ನಾವು. ನಮ್ಮ ಸರ್ಕಾರ ಕಲ್ಪಿಸಿ ಕೊಡುವ ಸೌಕರ್ಯಗಳನ್ನು ಉಪಯೋಗಿಸಿಕೊಳ್ಳುವವರು ನಾವು. ನಮ್ಮ ನಮ್ಮ ಜವಬ್ದಾರಿಯಗಳನ್ನು ಅರಿತುಕೊಳ್ಳಬೇಕಾದರವರು ನಾವು. ಇಂತಹ ಪರಿಸ್ಥಿತಿಯಲ್ಲಿ ನಾವು ಹೆಬ್ಬೆಟ್ಟೊತ್ತವ ಸ್ಥಿತಿಯಲ್ಲಿದ್ದರೆ ನಮ್ಮ ಬೆಳವಣಿಗೆಯಾಗಲಿ, ರಾಷ್ಟ್ರದ ಬೆಳವಣಿಗೆಯಾಗಲಿ ಹೇಗೆ ಆಗಬೇಕು. ಈ ಪರಿಸ್ಥಿತಿಯಲ್ಲಿ ಪ್ರಜಾಪ್ರಭುತ್ವ ಬೆಳೆದು ಬಾಳುವುದಾದರೂ ಹೇಗೆ? ಆದುದರಿಂದ ಆರೋಗ್ಯವಂತ ಸಾಮಾಜಿಕ ಬದಲಾವಣೆಗೆ ಶಿಕ್ಷಣ ಅತ್ಯಗತ್ಯ.

ಅನೌಪಚಾರಿಕ ಶಿಕ್ಷಣವು ಒಂದು ಪದ್ಧತಿಯಲ್ಲ. ಹಲವು ಪದ್ಧತಿಗಳ ಸಂಕೀರ್ಣ. ವಯಸ್ಕರ ಕೆಲವು ನಿರ್ದಿಷ್ಟ ಗುಂಪುಗಳಿಗೆ, ಆರಿಸಿದ ಕೆಲವು ವಿಷಯಗಳಲ್ಲಿ ಸಾಂಪ್ರದಾಯಿಕ ಪದ್ಧತಿಯ ಚೌಕಟ್ಟಿನ ಹೊರಗೆ, ನೀಡುವ ಲಕ್ರಮಬದ್ಧವಾದ ಕಲಿಕೆಗೆ ಅನೌಪಚಾರಿಕ ಪದ್ಧತಿಯೆಂದು ಹೇಳಬಹುದು. ಕಟ್ಟಡಗಳ ಆಯ ಕಟ್ಟಿನೊಳಗೆ, ಸಿಬ್ಬಂದಿಯ ಸೇವಾ ಪರಂಪರೆಯಲ್ಲಿ, ನಿಯ ಕಾಲದ ಹಿಡಿತದಲ್ಲಿ ಪ್ರಾಥಮಿಕ ದರ್ಜೆಯಿಂದ ವಿಶ್ವವಿದ್ಯಾಲಯದವರೆಗೆ ಸೆರೆ ಆಗಿರುವ ಔಪಚಾರಿಕ ಪದ್ಧತಿಗೆ ಇದು ಪೂರಕವಾಗಿದೆ. ಅವುಗಳ ನಡುವೆ ಎಂದೂ ಸ್ಪರ್ಧೆಯಿರುವುದಿಲ್ಲ. ಹಲವಾರು ಶೈಕ್ಷಣಿಕ ಘೋಷಣೆ ಮತ್ತು ತತ್ತ್ವಗಳನ್ನು ಕೃತಗಿಳಿಸುತ್ತದೆ. ಪುಸ್ತಕ ಶಾಲೆಯನ್ನು ಶ್ರಮಿಕ ಶಾಲೆಯನ್ನಾಗಿ ಪರಿವರ್ತನೆ ಮಾಡುತ್ತದೆ. ಚೈನಾದೇಶದ ಗಾದೆಯೊಂದನ್ನು ಈ

ಸಂದರ್ಭದಲ್ಲಿ ಉಲ್ಲೇಖಿಸಬಹುದು. " ಕೇಳಿದ್ದನ್ನು ಮರೆಯುತ್ತೇನೆ. ನೋಡಿದ್ದನ್ನು ನೆನೆಸಿಕೊಳ್ಳುತ್ತೇನೆ. ಮಾಡಿದ್ದನ್ನು ಕಲಿಯುತ್ತೇನೆ"- ಎಂದು. ಗಾಂಧಿ, ಮಾರ್ಕ್ಸ್‌ರ ತತ್ತ್ವಬೋಧೆಯಂತೆ, ದುಡಿಮೆ ಮತ್ತು ಪ್ರಗತಿಗಳೇ ನಿಜವಾದ ಮೂಲಭೂತವಾದ ಅಂಶಗಳು. 'ಶಿಕ್ಷಣವಿಲ್ಲದ ದುಡಿಮೆ, ದುಡಿಮೆಯಿಲ್ಲದ ಶಿಕ್ಷಣ' ಇರಕೂಡದು. ಶಿಕ್ಷಣದ ಉದ್ದೇಶ ಜನರಲ್ಲಿ ಬದಲಾವಣೆಯನ್ನು ತರುವುದೇ ವಿನಹ ಯೋಜನೆಯಂತೆ ಚಟುವಟಿಕೆಗಳನ್ನು ನಡೆಸುವುದಲ್ಲ. ಅನೌಪಚಾರಿಕ ಶಿಕ್ಷಣಕ್ಕೆ 'ಶಿಕ್ಷಣದ ಮೂಲಕ ಪುನರ್ರಚನೆ, ಪುನರ್ರಚನೆಯ ಮೂಲಕ ಶಿಕ್ಷಣ' ಎಂಬುದು ಸರಿಯಾದ ಅಗ್ರಪಂಕ್ತಿಯಾಗಬಲ್ಲದು.

ಅಂಶಕಾಲಿಕ ಅನೌಪಚಾರಿಕ ಶಿಕ್ಷಣ ಪದ್ಧತಿಯನ್ನು ಔಪಚಾರಿಕ ಶಿಕ್ಷಣಕ್ಕೆ ಪರ್ಯಾಯವಾಗಿ ಅಭಿವೃದ್ಧಿಗೊಳಿಸಲಾಗುತ್ತಿದೆ. ಐದನೇ ಪಂಚವಾರ್ಷಿಕ ಯೋಜನೆಯ ಆರಂಭದಲ್ಲಿ ೧೫-೩೫ ವಯಸ್ಸಿನವರಿಗಾಗಿ ಅನೌಪಚಾರಿಕ ಶಿಕ್ಷಣ ಕಾರ್ಯಕ್ರಮ ಆರಂಭವಾಯಿತು. ಶಿಕ್ಷಣ ಸಚಿವಾಲಯ ಈ ಅನೌಪಚಾರಿಕ ಶಿಕ್ಷಣ ರೂಪರೇಷೆಗಳನ್ನು ಸ್ಪಷ್ಟವಾಗಿ ನಿರೂಪಿಸಿತ್ತು. ಅದಾಗ್ಯೂ ಕಾರ್ಯಕ್ಷೇತ್ರದಲ್ಲಿ ಇದರ ಬಗ್ಗೆ ಅರಿವಿನ ಮಿತಿಯಿಂದಾಗಿ ಈ ಕಾರ್ಯಕ್ರಮಕ್ಕೂ ಸಾಂಪ್ರದಾಯಿಕ ಸಾಕ್ಷರತಾ ಕಾರ್ಯಕ್ರಮಗಳಿಗೂ ವ್ಯತ್ಯಾಸವೇ ಇಲ್ಲದಂತಾಯಿತು. ಆರನೆ ಪಂಚವಾರ್ಷಿಕ ಯೋಜನೆಯಲ್ಲಿ ಅಳವಡಿಸಲಾದ ಅನೌಪಚಾರಿಕ ಶಿಕ್ಷಣ ೧೯೮೦ ರಲ್ಲಿ ಮೂಡಿ ಬಂದ ರಾಷ್ಟ್ರೀಯ ಶಿಕ್ಷಣ ನೀತಿಯಿಂದಾಗಿ ಪ್ರಾಥಮಿಕ ಶಿಕ್ಷಣ ಕ್ಷೇತ್ರದ ಗಮನಾರ್ಹ ಅಂಗವಾಯಿತು. ಶಿಕ್ಷಣ ಕ್ಷೇತ್ರದಲ್ಲಿ ಹಿಂದುಳಿದ ಹತ್ತು ರಾಜ್ಯಗಳನ್ನು ಪ್ರಮುಖವಾಗಿ ಅನೌಪಚಾರಿಕ ಶಿಕ್ಷಣಕ್ಕಾಗಿ ಆರಿಸಲಾಗಿದ್ದರೂ ಈ ವ್ಯವಸ್ಥೆ ದೇಶದ ಎಲ್ಲ ರಾಜ್ಯಗಳಿಗೂ ವಿಸ್ತರಿಸಿದೆ.

ಕ್ರಿ.ಶ.೨೦೦೦ದ ವೇಳೆಗೆ ಎಲ್ಲರಿಗೂ ಶಿಕ್ಷಣ ಎನ್ನುವುದನ್ನು 'ನೀಪಾ' (ನ್ಯಾಷನಲ್ ಇನ್ಸ್ ಟಿಟ್ಯೂಟ್ ಫಾರ್ ಎಜುಕೇಷನಲ್ ಪ್ಲ್ಯಾನಿಂಗ್ ಎಂಡ್ ಅಡ್ಮಿನಿಸ್ಟ್ರೇಷನ್ ) ಪ್ರಕಾರ ಅನೌಪಚಾರಿಕ ಶಿಕ್ಷಣ ಈ ಕೆಳಗಿನ ವೈಶಿಷ್ಟ್ಯಗಳಿಂದ ಕೂಡಿದೆ.

೧). ಅನೌಪಚಾರಿಕ ಶಿಕ್ಷಣದಲ್ಲಿ ಪಠ್ಯವನ್ನು ಕಲಿಯುವವರ ಆಸಕ್ತಿಗೆ ಹಾಗೂ ಅವಶ್ಯಕತೆಗಳಿಗೆ ಅನುಗುಣವಾಗಿ ರೂಪಿಸಿಕೊಳ್ಳಬಹುದು.

೨). ಅನೌಪಚಾರಿಕ ಶಿಕ್ಷಣದ ಅವಧಿ ಶಾಲಾ ಶಿಕ್ಷಣದ ಅವಧಿಗಿಂತ ಕಡಿಮೆ ಪ್ರಮಾಣದ್ದು.

೩). ಅನೌಪಚಾರಿಕ ಶಿಕ್ಷಣ ಕಲಿಯುವವರಿಗೆ ಸೂಕ್ತವಾದ ಅವಧಿಯಲ್ಲಿ ನಡೆಯುತ್ತದೆ. ಸಾಧಾರಣವಾಗಿ ಬಾಲಕಿಯರಿಗೆ ಮಧ್ಯಾಹ್ನ, ವೃತ್ತಿಪರರಿಗೆ ಸಂಜೆಯವೇಳೆ.

೪). ಹೀಗೆ ಕಲಿಯಬೇಕೆಂಬ ವಿಧಿ ನಿಯಮಗಳಿಲ್ಲ. ಪರೀಕ್ಷೆಯ ಭೀತಿಯಿಲ್ಲ.

ಅನೌಪಚಾರಿಕ ಶಿಕ್ಷಣ ಕಲಿಯುವವರನ್ನೇ ಕೇಂದ್ರವಾಗಿಟ್ಟುಕೊಂಡು ರೂಪಿತಗೊಂಡ ಶಿಕ್ಷಣ ವ್ಯವಸ್ಥೆ. ಅನೌಪಚಾರಿಕ ಶಿಕ್ಷಣದಲ್ಲಿ ಕಲಿಯುವವನು ಕಲಿಸುವವನು ಎಂಬ ಭೇದ ಮರೆಯಾಗಿ ಇಡೀ ಸಮಾಜವೇ ಭಾಗಿಯಾಗಬೇಕು.

## ಅನೌಪಚಾರಿಕ ಶಿಕ್ಷಣದ ಉದ್ದೇಶ

೧). ಜನತೆ ತಮ್ಮ ಸುತ್ತ ಮುತ್ತಲಿನ ಪರಿಸರವನ್ನರಿತು ಅದಕ್ಕೆ ತಕ್ಕಂತೆ ಹೊಂದಿಕೊಳ್ಳಬೇಕು. ಮೂಢನಂಬಿಕೆಗಳನ್ನೂ ಕೈಬಿಟ್ಟು ಅಗತ್ಯವಾದ ಮನೋಭಾವನೆಯನ್ನು ತಾಳಬೇಕು. ಮೇಲಾಗಿ ಸ್ವತಂತ್ರವಾಗಿ ಆಲೋಚಿಸುವ ಪ್ರವೃತ್ತಿಯನ್ನು ಬೆಳಸಿಕೊಳ್ಳುವುದು ಅಗತ್ಯ.

೨). ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯ ದೃಷ್ಟಿಯಿಂದ ಸರಕಾರ ಕೈಕೊಳ್ಳಬಹುದಾದ ಕಾರ್ಯಕ್ರಮಗಳಲ್ಲಿ ಸಕ್ರೀಯವಾಗಿ ಪಾಲುಗೊಳ್ಳಬೇಕು. ಅದಕ್ಕೆ ಮುನ್ನ ಅಂತಹ ಯೋಜನೆಗಳ ಪೂರ್ಣ ಪರಚಯವನ್ನು ಪಡೆಯುಬೇಕು. ೩). ಜನತೆಯ ಜೀವನ ಸುಧಾರಿಸಲು ಅವರ ಕನಿಷ್ಠ ಅವಶ್ಯಕತೆಗಳ ಪೂರೈಕೆಯಾಗ ತಕ್ಕದ್ದು. ಔದ್ಯೋಗಿಕ ನೈಪುಣ್ಯತೆ ಹೆಚ್ಚುವುದರಿಂದ ಉತ್ಪನ್ನ ಹೆಚ್ಚಲಿದೆ. ಹೆಚ್ಚಿನ ಉತ್ಪನ್ನ ಹೆಚ್ಚಿನ ಸಂಪಾದನೆಗೆ ಮೂಲ. ತತ್ಪರಿಣಾಮವಾಗಿ ಸಮೃದ್ಧಿ ಜೀವನ ನಡೆಸಲು ಅನುಕೂಲ. ಅನೌಪಚಾರಿಕ ಶಿಕ್ಷಣ ಅಂತಹ ಸಮೃದ್ಧಿ ಜೀವನ ನಡೆಸಲು ನೆರವಾಗತಕ್ಕದು.

೪). ಯಾವ ವ್ಯಕ್ತಿಯೇ ಆಗಲಿ ತನ್ನ ಔದ್ಯೋಗಿಕ ಕೌಶಲ್ಯವನ್ನು ಉತ್ತಮ ಪಡಿಸಿಕೊಳ್ಳಲು ವಯಸ್ಸು ಅಡ್ಡಿ ಬರಕೂಡದು. ಅವನು ಇಷ್ಟ ಪಟ್ಟಾಗ ತನ್ನ ಕಸಬಿನಲ್ಲಿ ಹೆಚ್ಚಿನ ನೈಪುಣ್ಯತೆಯನ್ನು ಮತ್ತು ಹೊಸ ಕೌಶಲ್ಯಗಳನ್ನು ಪಡೆಯಲು ಅವಕಾಶಗಳಿರತಕ್ಕದ್ದು. ಅದರಿಂದ ಅವನು ಒಳ್ಳೆಯ ಉದ್ಯೋಗಿಯಾಗಿ ಹೆಚ್ಚು ತಿಳುವಳಿಕೆಯುಳ್ಳವನಾಗಿ ಬಾಳಲು ಉತ್ತೇಜಿತನಾಗುವನು. ಆತನ ಸಂಪಾದನೆ ಹೆಚ್ಚಿ ಜೀವನ ಮಟ್ಟ ಸುಧಾರಿಸುವುದು. ಹಾಗೂ ಅವನು ಸುಸಂಸ್ಕೃತನಾಗಿ ಬಾಳಲು ಸಾಧ್ಯವಾಗುವುದು.

ಹಲವಾರು ಅನಿವಾರ್ಯಗಳ ದೆಸೆಯಿಂದ ಅನೇಕ ಮಂದಿ ಬಾಲ್ಯದಲ್ಲೇ ಶಿಕ್ಷಣ ಪಡೆಯಲು ಸಾಧ್ಯವಾಗುವುದಿಲ್ಲ. ಅಂತಹವರಿಗೆ ಬಿಡುವಿನ ವೇಳೆಯಲ್ಲಿ ಬೇಕಾದ ಶಿಕ್ಷಣ ನೀಡುವುದೇ ಅನೌಪಚಾರಿಕ ಶಿಕ್ಷಣದ ಗುರಿ. ಶಿಕ್ಷಣಕ್ಕೂ ಮತ್ತು ರಾಷ್ಟ್ರದ ಅಭಿವೃದ್ಧಿಗೂ ಸಂಬಂಧವಿದೆ ಎಂಬ ಅಂಶವನ್ನು ಎಲ್ಲರೂ ಒಪ್ಪುವರು. ಶಾಲಾ ಶಿಕ್ಷಣದಿಂದ ಉಂಟಾಗುವ ಪರಿಣಾಮ ದೀರ್ಘಕಾಲ ಪ್ರಯತ್ನದ ಫಲ ಮತ್ತು ನೇಮಿತ. ಅಭಿವೃದ್ಧಿ ಶೀಲ ರಾಷ್ಟ್ರಗಳಲ್ಲಿ ಬಡತನ, ಅನಾರೋಗ್ಯ ಮತ್ತು ಅಜ್ಞಾನ ಜನಜೀವನವನ್ನು ಕಾಡುತ್ತಿವೆ. ಆದ್ದರಿಂದ ರಾಷ್ಟ್ರದ ಸಾಮಾಜಿಕ ಮತ್ತು ಆರ್ಥಿಕ ಕ್ರಾಂತಿಗೆ ಅನೌಪಚಾರಿಕ ಶಿಕ್ಷಣ ಪ್ರಬಲವಾದ, ಪರಿಣಾಮಕಾರಿಯಾದ ಹಾಗೂ ಶೀಘ್ರಕಾಲದಲ್ಲಿ ಫಲ ನೀಡುವ ಅಸ್ತ್ರ ಎಂಬುವುದನ್ನು ಶಿಕ್ಷಣ ತಜ್ಞರು ಮತ್ತು ಸಮಾಜಶಾಸ್ತ್ರ ಪಂಡಿತರು ಮನಗಂಡಿದ್ದಾರೆ.

ಭಾರತ ಸರಕಾರ ಕಳೆದ ಆರು ಪಂಚವಾರ್ಷಿಕ ಯೋಜನೆಗಳಲ್ಲಿ ರಾಷ್ಟ್ರದ ಅಭಿವೃದ್ಧಿಗೆ ೨,೫೫,೬೨೧ ಕೋಟಿ ರೂಪಾಯಿಗಳನ್ನು ವೆಚ್ಚಮಾಡಿದೆ. ಆದರೆ ಶಿಕ್ಷಣಕ್ಕೆ ತಗಲಿರುವ ವೆಚ್ಚ ೩೮೨೯.೬೫ ಕೋಟಿ ರೂಪಾಯಿಗಳು. ಅದರ ಪೈಕಿ ವಯಸ್ಕರ ಶಿಕ್ಷಣಕ್ಕೆ ಆಗಿರುವ ಖರ್ಚು ೧೬೮.೮೧ ಕೋಟಿ ರೂಪಾಯಿಗಳು ಮಾತ್ರ. ಇಷ್ಟೊಂದು ಹಣ ವಿನಿಯೋಗವಾಗಿದ್ದರೂ ಇಂದು ಸೇಕಡ ೪೬ ಮಂದಿ ಬಡತನದ ರೇಖೆಯ ಅಂಚಿನಲ್ಲೇ ಉಳಿದಿರುವರು. ಆದ್ದರಿಂದ ಅನೌಪಚಾರಿಕ ಶಿಕ್ಷಣದ ಮೂಲಕ ಜನತೆಯನ್ನು ಜಾಗೃತ ಗೊಳಿಸಿ ಅವರು ರಾಷ್ಟ್ರೀಯ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಸಕ್ರೀಯವಾಗಿ ಪಾಲುಗೊಳ್ಳುವಂತೆ ಮಾಡುವ ವ್ಯವಸ್ಥೆ ೧೯೭೧ ರಲ್ಲಿ ಜಾರಿಗೆ ಬಂದಿತು. ಈ ಯೋಜನೆಯೂ ಸಹ ಇತರ ಹಿಂದಿನ ಯೋಜನೆಗಳಂತೆ ಆಗಬಾರದು ಎಂಬುದಾಗಿ ಶಿಕ್ಷಣ ತಜ್ಞರಾಗಿದ್ದ ಡಾ॥ ಜೆ.ಪಿ.ನಾಯಕ್ ಎಚ್ಚರಿಸಿದರು. ಆದರೆ ಅದು ಅವರ ಮನಸ್ಸಿನಲ್ಲಿದ್ದಂತೆ ಆಯಿತು. ೧೯೭೮ ರಲ್ಲಿ ರಾಷ್ಟ್ರೀಯ ವಯಸ್ಕರ ಶಿಕ್ಷಣ ಪ್ರಾರಂಭವಾಯಿತಷ್ಟೆ. ಈ ಸಂದರ್ಭದಲ್ಲಿ ಅನೌಪಚಾರಿಕ ಶಿಕ್ಷಣ ಗ್ರಾಮೀಣ ಕ್ರಿಯಾತ್ಮಕ ಸಾಕ್ಷರತೆಯ ಯೋಜನೆಯಲ್ಲಿ ಐಕ್ಯವಾಯಿತು.

ಅನೌಪಚಾರಿಕ ಶಿಕ್ಷಣ ವ್ಯಕ್ತಿಗಳ ಆಸಕ್ತಿ ಮತ್ತು ಅವಶ್ಯಕತೆಗಳನ್ನು ಅವಲಂಬಿಸಿದೆ. ಆದ್ದರಿಂದ ಆಯಾ ಕೇಂದ್ರದ ಸಮಸ್ಯೆಗಳನ್ನು ಮತ್ತು ವಾತಾರವಣವನ್ನು ತಿಳಿಯುವುದು ಅಗತ್ಯ. ಅದಕ್ಕಾಗಿ ಭಾರತ ಸರಕಾರ ಒಂದು ಸರ್ವೇಕ್ಷಣೆ ನಮೂನೆಯನ್ನು ತಯಾರಿಸಿದೆ.

## ಅನೌಪಚಾರಿಕ ಶಿಕ್ಷಣದ ಅವಧಿ

ಅನೌಪಚಾರಿಕ ಶಿಕ್ಷಣ ಕೇಂದ್ರದ ಅವಧಿ ಅರಿಂದ ೯ತಿಂಗಳು. ವಾರದಲ್ಲಿ ಐದು ದಿನ ಮಾತ್ರ ಕೇಂದ್ರ ನಡೆಯುವುದು. ನಿರುದ್ಯೋಗಿ ಪದವೀದರರು, ಉಪಾಧ್ಯಾಯರು, ಸುಶಿಕ್ಷಿತ ಮಹಿಳೆಯರು ಕೇಂದ್ರದ ಉಪಾಧ್ಯಾಯರಾಗಿ ಸೇವೆ ಸಲ್ಲಿಸಬಹುದು. ಬೋಧನಾ ವಿಷಯ ಮತ್ತು ವಿಧಾನ ಎಲ್ಲ ಕೇಂದ್ರಗಳಿಗೂ ಒಂದೇ ಆಗಿರುವುದಿಲ್ಲ. ಅದು ಆಯಾ ಕೇಂದ್ರದ ಅವಶ್ಯಕತೆಗಳಿಗೆ ಅನುಗುಣವಾಗಿ ಬದಲಾಗುವುದು. ಉಪಾಧ್ಯಾಯರು ಸಮಯೋಚಿತವಾಗಿ ಪಾಠವನ್ನು ಸಿದ್ಧಪಡಿಸಬೇಕಾಗುವುದು. ಇಡೀ ಭಾರತದ ಗ್ರಾಮೀಣ ಸಮುದಾಯದ ಸಮಸ್ಯೆಗಳನ್ನರಿತು ಭಾರತ ಸರಕಾರ ವಿಶಾಲ ವ್ಯಾಪ್ತಿಯುಳ್ಳ ಒಂದು ಪಠ್ಯ ಸೂಚಿಯನ್ನು ತಯಾರಿಸಿದೆ.

## ವಿಧಾನ

ಈ ಕಾರ್ಯಕ್ರಮವನ್ನು ವಿದ್ಯಾರ್ಥಿಗಳ ಮೇಲೆ ಹೊರಿಸಲು ಸಾಧ್ಯವಿಲ್ಲ. ಕಾರ್ಯಕ್ರಮ ಮತ್ತು ವಿಧಾನ ರೂಪಿಸುವುದರಲ್ಲಿ ಶಿಕ್ಷಣಾರ್ಥಿಗಳ ಪಾತ್ರವಿದೆ. ಇಲ್ಲಿ ಉಪಾಧ್ಯಾಯರ ಅಧಿಕಾರ ಮತ್ತು ದರ್ಪಕ್ಕೆ ಅವಕಾಶವಿಲ್ಲ. ಪ್ರೀತಿ ಮತ್ತು ವಿಶ್ವಾಸದಿಂದ ಶಿಕ್ಷಣಾರ್ಥಿಗಳ ಮನಸ್ಸನ್ನು ಒಲಿಸಿಕೊಳ್ಳುವುದು ಉಪಾಧ್ಯಯರಿಗೆ ಸೇರಿದ್ದು. ಸಾಂಪ್ರದಾಯಿಕ ಶಾಲಾ ಶಿಕ್ಷಣಕ್ಕೂ ಮತ್ತು ಅನೌಪಚಾರಿಕ ಶಿಕ್ಷಣಕ್ಕೂ ಬಹಳ ವ್ಯತ್ಯಾಸವಿದೆ. ಅನೌಪಚಾರಿಕ ಶಿಕ್ಷಣದಲ್ಲಿ ನಿರತರಾದ ಉಪಾಧ್ಯಾಯರಿಗೆ ತಾಳ್ಮೆ, ಅನುಭವ, ಹೊಂದಾಣಿಕೆ, ಚಾಕಚಕ್ಯತೆ ಮತ್ತು ಬುದ್ಧಿವಂತಿಕೆ ಇರಬೇಕು. ಅವರಲ್ಲಿ ಸಂಘಟನಾ ಚಾತುರ್ಯ ಅಗತ್ಯ. ಎಲ್ಲರಿಗೂ ಈ ಕೆಲಸ ಸಾಧ್ಯವಿಲ್ಲ. ಈ ಕೆಲಸದಲ್ಲಿ ಸೇವೆ ಸಲ್ಲಿಸಲು ಇಚ್ಛಿಸುವವರಿಗೆ ತೀವ್ರ ತೆರನಾದ ತರಬೇತಿ, ಮಾರ್ಗದರ್ಶನ ಮತ್ತು ಪ್ರೋತ್ಸಹ ಅಗತ್ಯ.

೧೯೮೬ರ ಹೊಸ ರಾಷ್ಟ್ರೀಯ ಶೈಕ್ಷಣಿಕ ನೀತಿಯಲ್ಲಿ ಕಡ್ಡಾಯ ಪ್ರಾಥಮಿಕ ಶಾಲಾ ಶಿಕ್ಷಣಕ್ಕೆ ಹೆಚ್ಚು ಒತ್ತನ್ನು ಕೊಟ್ಟಿದೆ. ಈಗ ಈ ಕಾರ್ಯಕ್ರಮವನ್ನು ಕನಿಷ್ಠ ಅವಶ್ಯಕತೆಗಳಲ್ಲಿ ಒಂದನ್ನಾಗಿ ಪರಿಗಣಿಸಲಾಗಿದೆ. ಜೊತೆಗೆ ೨೦ ಅಂಶಗಳಲ್ಲಿ ಸೇರಿದೆ. ಶೈಕ್ಷಣಿಕ ನೀತಿಯ ಸುಧಾರಣೆಯ ಪ್ರಕಾರ ೧೯೯೦ನೆಯ ಸಾಲಿನ ಹೊತ್ತಿಗೆ ೧೧ ವಯಸ್ಸಿನ ಮಕ್ಕಳೆಲ್ಲರೂ ಐದು ವರ್ಷದ ಪ್ರಾಥಮಿಕ ವಿದ್ಯಾಭ್ಯಾಸ ಪೂರೈಸಬೇಕು. ಅಥವಾ ಅದಕ್ಕೆ ಸಮನಾದ ಶಿಕ್ಷಣದ ಹಂತವನ್ನು ಅನೌಪಚಾರಿಕ ಶಿಕ್ಷಣ ಪ್ರಕಾರದಲ್ಲಿ ಪಡೆದಿರಬೇಕು. ಇದು ಭಾರತ ಸರಕಾರದ ಆಶಯ.

ಅನೌಪಚಾರಿಕ ಶಿಕ್ಷಣವು ಒಂದು ಕಲಿಕೆಯ ವಿಧಾನ. ಔಪಚಾರಿಕ ಶಿಕ್ಷಣದಷ್ಟೇ ಸಮರ್ಥವಾದದ್ದು, ಅನೌಪಚಾರಿಕ ಶಿಕ್ಷಣ. ಆದುದರಿಂದ ಔಪಚಾರಿಕ, ಅನೌಪಚಾರಿಕ ಮತ್ತು ಪ್ರಾಸಂಗಿಕ ಶಿಕ್ಷಣಗಳನ್ನು ಪ್ರತ್ಯೇಕವಾಗಿ ವಿಂಗಡಿಸಲು ಸಾಧ್ಯವಿಲ್ಲ. ಅನೌಪಚಾರಿಕ ಶಿಕ್ಷಣ ಕೊಂಚಭಾಗವು, ಔಪಚಾರಿಕ ಶಿಕ್ಷಣವೂ, ಸ್ವಲ್ಪ ಭಾಗವು ಪ್ರಾಸಂಗಿಕ ಶಿಕ್ಷಣವೂ ಆಗಿರುವುದುಂಟು ಪ್ರಾಸಂಗಿಕ ಶಿಕ್ಷಣದ ಕೆಲವು ಭಾಗಗಳು ಸಂದರ್ಭಕ್ಕೆ ಅನುಗುಣವಾಗಿ ಅನೌಪಚಾರಿಕ ಶಿಕ್ಷಣವೂ ಆಗಬಹುದು. ಕೆಲವು ಭಾಗಗಳು ಮೂರು ವಲಯಗಳಲ್ಲಿಯೂ ಕಾಣಸಿಗುವುವು. ಈ ವಿಷಯಗಳಿಗೆ ಸಂಬಂಧಿಸಿದಂತೆ ರಾಮಮೂರ್ತಿ ಸಮಿತಿಯ ಅಭಿಪ್ರಾಯ ಈ ರೀತಿ ಇದೆ, "ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ, ಔಪಚಾರಿಕ ಶಿಕ್ಷಣ, ಅನೌಪಚಾರಿಕ ಶಿಕ್ಷಣ, ಅಥವಾ ಔಪಚಾರಿಕವಲ್ಲದ ಶಿಕ್ಷಣ, ಕೇವಲ ಜ್ಞಾನಪರ ಹಾಗೂ ವೃತ್ತಿಪರ, ಶಾಂತ್ರಿಕ, ತಾಂತ್ರಿಕವಲ್ಲದ ,- ಹೀಗೆ ದ್ವೈಧೀಭಾವದಿಂದ ಶಿಕ್ಷಣವನ್ನೂ ಪ್ರತ್ಯೇಕ, ಪ್ರತ್ಯೇಕವಾಗಿ ಪರಿಗಣಿಸಲಾಗಿದೆ. ಈ ರೀತಿ ಪರಿಗಣಿಸುವುದು ಶಿಕ್ಷಣ ಪದ್ಧತಿಯ ಆಮೂಲಾಗ್ರ ಬದಲಾವಣೆಗೆ, ಆ ಬದಲಾವಣೆಯ ಪ್ರಯತ್ನಗಳಿಗೆ ನಿರೋಧಕವಾಗುವುದು. ಆದುದರಿಂದ ಈ ದ್ವೈಧೀಭಾವವನ್ನು ತೊರೆದು ಸಂಘಟಿತ, ಸಮಗ್ರತೆಯ ದೃಷ್ಟಿಕೋನದಿಂದ ಶಿಕ್ಷಣವನ್ನು ಕುರಿತು ಚಿಂತಿಸಬೇಕೆಂಬುದು ರಾಮಮೂರ್ತಿ ಸಮಿತಿಯ ಅಭಿಪ್ರಾಯ". ಆದರೂ ಭಾರತದ ಅಕ್ಷರ ಕ್ರಾಂತಿಯಲ್ಲಿ ಅನೌಪಚಾರಿಕ ಶಿಕ್ಷಣದ ಪಾತ್ರ ಅನುಪಮವಾದದ್ದು.

### ೫.೪. ಪ್ರಾಸಂಗಿಕ ಶಿಕ್ಷಣ

ಮಾನವ ಸಮಾಜದಲ್ಲಿ ಶಿಕ್ಷಣದ ಪಾತ್ರವೇನು? ಉದ್ದೇಶವೇನು? ಎಂಬುದು ವಿಚಾರಾರ್ಹ ಅಂಶ. ಇದನ್ನು ಹಲವಾರು ತಜ್ಞರು ಹಲವಾರು ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಅದೇನೆಂದರೆ " ಜೀವನದಲ್ಲಿ ಒದಗಿ ಬರುವ ಸನ್ನಿವೇಶಗಳಿಗೆ ಸೂಕ್ತ ರೀತಿಯಲ್ಲಿ ಹೊಂದಾಣಿಕೆ ಮಾಡಿಕೊಳ್ಳುವ ಸಾಮರ್ಥ್ಯದ ಗಳಿಕೆಯೇ ಶಿಕ್ಷಣ". ಇದರಿಂದ ಬದಲಾದ ಪರಿಸರಕ್ಕೆ ಸರಿಯಾಗಿ ಹೊಂದಿಕೊಳ್ಳುವ ಸಾಮರ್ಥ್ಯವನ್ನು ಗಳಿಸಿಕೊಳ್ಳಬೇಕು. ಇದು ಶಿಕ್ಷಣದಿಂದ ಸಾಧ್ಯವಾಗುತ್ತದೆ. ಇಂದು ಸಾರ್ವತ್ರಿಕವಾಗಿ, ಸಾರ್ವಕಾಲಿಕವಾಗಿ ಅಂಗೀಕರಿಸಬಹುದಾದ ಗುರಿಗಳಲ್ಲಿ ಒಂದೆಂದರೆ" ಶಿಕ್ಷಣ-ಅಭಿವೃದ್ಧಿ"ಎಂದಾಗಿದೆ. ಇಲ್ಲಿ ಎರಡು ರೀತಿಯ ಸಂಪನ್ಮೂಲಗಳ ಅಗತ್ಯವಿದೆ. ಒಂದು ನೈಸರ್ಗಿಕ ಸಂಪತ್ತು, ಮತ್ತೊಂದು ಮಾನವ ಸಂಪತ್ತು. ಯಾವುದೇ ರಾಷ್ಟ್ರದ ಅಭಿವೃದ್ಧಿಯನ್ನು, ಪ್ರಗತಿಯನ್ನು ಆ ದೇಶದ ಭೌತಿಕ ಸಂಪತ್ತಿನಿಂದ ಅಳೆಯದೆ, ಆ ದೇಶದ ಜನತೆ ಯಾವ ಮಟ್ಟದಲ್ಲಿ

ಸಾಕ್ಷರರಾಗಿದ್ದಾರೆ, ಎಂಬ ಆಧಾರದಿಂದ ನಿರ್ಧರಿಸಬಹುದು. ಈ ವಿಚಾರ ಇಂದಿಗೂ ಸತ್ಯವಾಗಿದೆ.

ಪ್ರಾಸಂಗಿಕ ಶಿಕ್ಷಣವೆಂದರೆ," ಪತ್ರಿಕೆಗಳು, ರೇಡಿಯೋಗಳು, ದೂರದರ್ಶನ. ಇತ್ಯಾದಿಗಳ ಮೂಲಕ ದೊರಕುವ ಶಿಕ್ಷಣವನ್ನು ಪ್ರಾಸಂಗಿಕ ಶಿಕ್ಷಣ" ವೆಂದು ಕರೆಯಲಾಗುತ್ತದೆ. ಕಲಿಯಲು ಹಲವಾರು ಮಾಧ್ಯಮಗಳಿವೆ. ಎಂಬುದು ಹಿಂದಿನಿಂದಲೂ ನಡೆದು ಬಂದಿದೆ. ಅದು ಇಂದಿಗೂ ಸತ್ಯ.

" ಕೆಲವಂ ಬಲ್ಲವರಿಂದ ಕಲ್ತು, ಕೆಲವಂ ಶಾಸ್ತ್ರಂಗಳಂ ಕೇಳುತಂ।
ಕೆಲವಂ ಮಾಳ್ಪವರಿಂದ ಕಂಡು, ಕೆಲವಂ ಸುಜ್ಞಾನದಿಂ ನೋಡುತಂ
ಕೆಲವಂ ಸಜ್ಜನ ಸಂಗದಿಂದಲರಿಯಲ್ ಸರ್ವಜ್ಞನಪ್ಪಂ ನರಂ
ಕೆಲವಂ ಪಳ್ಳ ಸಮುದ್ರವೈ ಹರಿಹರಾ ಶ್ರೀ ಚೆನ್ನಾ ಸೋಮೇಶ್ವರಾ" ||

ತಿಳಿದವರಿಂದ ಕಲಿಯುವುದಿದೆ. ನೋಡಿ ಕಲಿಯಬಹುದು. ವಿದ್ಯಾವಂತರ ಮತ್ತು ತಿಳುವಳಿಕೆ ಉಳ್ಳವರ ಸಂಗ ಕಲಿಯಲು ಮೂಲ. ವಿವೇಕದಿಂದ ವಿಚಾರ ಮಾಡುವುದೂ ಒಂದು ವಿಧಾನ. ಗ್ರಂಥಗಳ ಅಧ್ಯಯನ ಜ್ಞಾನಕ್ಕೆ ಸಾಧನ. ಎಲ್ಲವೂ ಸರಿ." ವ್ಯಕ್ತಿಯಲ್ಲಿ ಅಡಗಿರುವ ಸಾಮರ್ಥ್ಯಗಳನ್ನು ಕಂಡು ಹಿಡಿದು, ಅವುಗಳನ್ನು ಬೆಳೆಸಿ, ಸಮಾಜದ ಮೂರೂ ವರ್ಗಗಳಿಗೆ ಆತನನ್ನು ಹೊಂದಿ ಕೊಳ್ಳುವಂತೆ ಮಾಡುವುದೇ ಶಿಕ್ಷಣ".- ಎಂಬ ಜಾನ್ ಡ್ಯೂಯಿಯ ನುಡಿ ನಿತ್ಯಸತ್ಯ. ಒಬ್ಬ ವ್ಯಕ್ತಿ ತನ್ನ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಯಶಸ್ವಿಯಾಗಿ ಪಾಲುಗೊಳ್ಳುವಂತೆ ಮಾಡಲು ಶಿಕ್ಷಣ ಅಗತ್ಯ. ವಿವಿಧ ಹಂತಗಳ ಆರ್ಥಿಕ ಪರಿಸ್ಥಿತಿಗೆ ತಕ್ಕಂತೆ ಶಿಕ್ಷಣವು ಮಾನವ ಶಕ್ತಿಯನ್ನು ಅಭಿವೃದ್ಧಿ ಪಡಿಸುತ್ತದೆ. ನಮ್ಮ ರಾಷ್ಟ್ರೀಯ ದೃಷ್ಟಿಯಲ್ಲಿ ಶಿಕ್ಷಣವು ಪ್ರತಿಯೊಬ್ಬರಿಗೂ ಅತ್ಯಾವಶ್ಯಕವಾಗಿದೆ. ಇದು ನಮ್ಮ ಸರ್ವೋತೋಮುಖ ಬೆಳವಣಿಗೆಗೆ ಅಂದರೆ ಭೌತಿಕ ಮತ್ತು ಅಧ್ಯಾತ್ಮಿಕ ಬೆಳವಣಿಗೆಗೆ ಮೂಲಭೂತವಾದದ್ದು.

'ಪ್ರಾಸಂಗಿಕ ಶಿಕ್ಷಣವು ' ಮುಖ್ಯವಾಗಿ, ತಲತಲಾಂತರದಿಂದ ತಂದೆಯಿಂದ ಮಗನಿಗೆ, ತಾಯಿಯಿಂದ ಮಗಳಿಗೆ, ಯಜಮಾನನಿಂದ ಸೇವಕನಿಗೆ, ಸಾಗಿ ಹೋಗುವ ಅನುಭವ ಪರಂಪರೆಯಾಗಿದೆ. ತಂದೆಯಿಂದ ಮಗನು ವೃತ್ತಿ ಕೌಶಲ್ಯವನ್ನು, ತಾಯಿಯಿಂದ ಮಗಳು ಕೌಟುಂಬಿಕ ವಿಷಯಗಳನ್ನು, ಯಜಮಾನನಿಂದ ಸೇವಕನು ಕಸುಬುಗಳನ್ನು ನೋಡಿ, ಮಾಡಿ ಚರ್ಚಿಸುವುದರ ಮೂಲಕ ಕಲಿಯುತ್ತಾರೆ. ಈ ಬಗೆಯ ಶಿಕ್ಷಣವು ಜೀವನದ ಸಮಸ್ಯೆಗಳೊಡನೆ ನಿಕಟ ಸಂಬಂಧವನ್ನು ಹೊಂದಿರುತ್ತದೆ. ಹೊಸ ಸಮಸ್ಯೆಗಳು ಹುಟ್ಟುತ್ತವೆ. ಅವುಗಳಿಗೆ

ಪರಿಹಾರವನ್ನು ಪ್ರಾಸಂಗಿಕ ಶಿಕ್ಷಣದ ಮೂಲಕ ಕಂಡು ಕೊಳ್ಳಬೇಕಾಗುತ್ತದೆ. ಅದಕ್ಕೆ ನಿರ್ದಿಷ್ಟವಾದ ವ್ಯವಸ್ಥೆ ಇರುವುದಿಲ್ಲ. ಪ್ರತಿಯೊಬ್ಬ ವ್ಯಕ್ತಿಯ ಜೀವನದಲ್ಲಿ ದೈನಂದಿನ ಅನುಭವ, ಕೌಶಲ್ಯ, ಮೌಲ್ಯಗಳು, ಮತ್ತು ದೃಷ್ಟಿಕೋನಗಳ ಗಳಿಕೆಯ ವಿಧಾನವೇ ಪ್ರಾಸಂಗಿಕ ವಿಧಾನ.

ಪ್ರತಿ ಕುಟುಂಬದ ಅಥವಾ ನೆರೆಹೊರೆಯ ಪರಸರದಿಂದ, ಕೆಲಸ ಮತ್ತು ಕ್ರೀಡೆಯಿಂದ, ಪುಸ್ತಕ ಭಂಡಾರಗಳಿಂದ,-ಸಮುದಾಯ ಮಾಧ್ಯಮಗಳಿಂದ ದೊರಕುವ ಬೋಧಪ್ರದವಾದ ಮತ್ತು ಜೀವನಾದ್ಯಂತ ದೊರಕುವ ಶಿಕ್ಷಣದ ಕ್ರಮವೇ ಪ್ರಾಸಂಗಿಕ ಶಿಕ್ಷಣ. ವೈವಿಧ್ಯಮಯ ಸಾಮಾಜಿಕ ಸಾಂಸ್ಕೃತಿಕ ಪರಿಸ್ಥಿತಿಯಲ್ಲಿ ಲಕ್ಷಾನುಗಟ್ಟಲೆ ಮಕ್ಕಳಿಗೆ, ಅವರ ಮನೆ ಬಾಗಿಲಿಗೆ ಶಿಕ್ಷಣವು ಮುಟ್ಟುವಂತಾಗಬೇಕು. ಪ್ರತಿಯೊಂದು ಮಗುವು ವೈಶಿಷ್ಟ್ಯಪೂರ್ಣ ಹುದುಗಿದ ಶಕ್ತಿಯುಳ್ಳದ್ದು. ಆ ಶಕ್ತಿಯ ಮುಖಗಳು, ಬೇರುಗಳು ಬೇರೆ ಬೇರೆಯವರಲ್ಲಿ ಬೇರೆಯಾಗಿಯೇ ಇರುತ್ತವೆ.

ಮಗುವಿಗೆ ಮನೆಯೇ ಮೊದಲಶಾಲೆ. ತಾಯಿಯೇ ಮೊದಲ ಗುರು 'ತಾಯಿಯಂತೆ ಮಗು, ನೂಲಿನಂತೆ ಸೀರೆ' ಎಂಬ ನಾಣ್ಣುಡಿ ಇದೆ. ಮಗು ಮೊದಲಾಗಿ ಮಾತನ್ನು ಕಲಿಯುವುದು ತಾಯಿಯ ಮಡಿಲಲ್ಲೇ. ಒಳ್ಳೆಯ ನಡೆನುಡಿಯನ್ನು ಕಲಿಯುವುದು ತಾಯಿಯ ಸಹವಾಸದಲ್ಲಿ. ತಾಯಿ ಮಗುವಿನ ಭವಿಷ್ಯದ ಮೇಲೆ ಹೆಚ್ಚಿನ ಪ್ರಭಾವ ಬೀರುವಳು. ಅದಕ್ಕೆ ಶಿವಾಜಿಯ ಜೀವನವೇ ಉದಾಹರಣೆ. ಒಬ್ಬ ಗಂಡಸು ವಿದ್ಯೆ ಕಲಿತರೆ ಅವನಿಗೆ ಮಾತ್ರ ಲಾಭ. ಅದೇ ಒಬ್ಬ ಹೆಂಗಸು ವಿದ್ಯಾವಂತಳಾದರೆ ಇಡೀ ಸಂಸಾರವೇ ವಿದ್ಯಾವಂತರಾದಂತೆ ಎಂಬ ಮಾತು ಜನಜನಿತವಾಗಿದೆ. ಉದಾಹರಣೆಗೆ, ಜನೋಪಕಾರಿಯಾದ, ನೂರಾರು ವೈಜ್ಞಾನಿಕ ಸಂಶೋಧನೆಗಳನ್ನು ಮಾಡಿದ ಮಹಾ ವಿಜ್ಞಾನಿ ಥಾಮಸ್ ಆಲ್ವಾ ಎಡಿಸನ್ ರ ಹೆಸರನ್ನು ಯಾರು ತಾನೆ ಕೇಳಿಲ್ಲ? ಎಲ್ಲವನ್ನೂ ಪ್ರಶ್ನಿಸುವ ಸ್ವಭಾವವುಳ್ಳ ಆತ ಅತ್ಯಂತ ಚುರುಕು ಬುದ್ಧಿಯ ವಿದ್ಯಾರ್ಥಿಯಾಗಿದ್ದ, ಅವನ ಕುತೂಹಲ. ಅವನ ಸೂಕ್ಷ್ಮ ದೃಷ್ಟಿಯನ್ನು ಅವನ ಪ್ರಶ್ನಿಸುವ ಸ್ವಭಾವವನ್ನು ಅವನ ಶಾಲೆಯ ಉಪಾಧ್ಯಾಯರು ಗುರುತಿಸದೇ " ದಡ್ಡನಿರುವುದಕ್ಕಾಗಿ ಪ್ರಶ್ನೆ ಕೇಳುತ್ತಿದ್ದಾನೆ" - ಎಂದು ತಪ್ಪಾಗಿ ಭಾವಿಸಿಕೊಂಡರು. ಎಲ್ಲವನ್ನೂ ಪ್ರಶ್ನಿಸುವ ಇಂಥ "ದಡ್ಡ" ಅವರಿಗೆ ಹಿಡಿಸಲಿಲ್ಲ. ಅವನನ್ನು ಶಾಲೆಯಿಂದ ಹೊರ ಹಾಕಿದರು. ತನ್ನ ಮಗನ ಬುದ್ಧಿ ಸಾಮರ್ಥ್ಯವನ್ನು ಬಲ್ಲ ತಾಯಿ, ತನ್ನ ಮಗನನ್ನು ಅರ್ಥ ಮಾಡಿಕೊಳ್ಳದೆ ಶಾಲೆಯಿಂದ ಹೊರಹಾಕಿದ ಉಪಾಧ್ಯಾಯರನ್ನು ಚೆನ್ನಾಗಿ ಬಯ್ದಳು. " ನನ್ನ ಮಗನಿಗೆ ನಾನು ಪಾಠ ಹೇಳಿಕೊಡುತ್ತೇನೆ"- ಎಂದು ಆತ್ಮ ವಿಶ್ವಾಸದಿಂದ ನುಡಿದು, ತನ್ನ ಮಗನಿಗೆ ತಾನೇ ಗುರುವಾಗಿ ಮನೆಯಲ್ಲೇ ಪಾಠ ಹೇಳಿಕೊಟ್ಟಳು. ಆ ತಾಯಿ

ಎಂತಹ ಪಾಠ ಹೇಳಿಕೊಟ್ಟಿರಬಹುದು? ತನ್ನ ಮಗನನ್ನು ಮಹಾನ್ ವಿಜ್ಞಾನಿಯನ್ನಾಗಿ ತಯಾರಿಸಿದ ಆ ತಾಯಿ ಎಂತಹ ಆದರ್ಶ ಗುರುವಾಗಿದ್ದಿರ ಬಹುದು? ಇಂತಹ ನಿಜವಾದ ಗುರುಗಳಿಗೆ, ಎಷ್ಟೋ ಸಲ ಶಾಲೆಯಲ್ಲಿ 'ಟೀಚರ್ ' ಆಗುವ ಅವಕಾಶ ಸಿಕ್ಕಿರುವುದಿಲ್ಲ. ಅವಕಾಶ ಸಿಕ್ಕವರಲ್ಲಿ ಅಂತಹ ಸಾಮರ್ಥ್ಯ ಇರುವುದಿಲ್ಲ. ಇದೊಂದು ವೈಪರಿತ್ಯ ವಿಪರ್ಯಾಸ.

ಕಲಿತು ಹೆಣ್ಣು ಏನು ಮಾಡಬಹುದು, ಎಂತಹ ಅದ್ಭುತವನ್ನು ಸಾಧಿಸಿ ತೋರಿಸಬಹುದು, ಹೆಣ್ಣು ಏಕೆ ಕಲಿಯಬೇಕು, ಎಂಬ ಪ್ರಶ್ನೆಗಳಿಗೆ, ಉಪಾಧ್ಯಾಯರು ಹೇಗೆ ಇರಬೇಕು ಎಂಬ ಪ್ರಶ್ನೆಗೆ -ಉತ್ತರವಾಗಿ- ಬಹುಶಃ ಇದೊಂದು ಘಟನೆಯ ಸ್ಮರಣೆ ಸಾಕೆನಿಸುತ್ತದೆ. ಒಟ್ಟಿನಲ್ಲಿ ತಾಯಿಯ ಸಂಸ್ಕಾರ ಮಗುವಿನ ಮೇಲೆ ಹೆಚ್ಚಿನ ಪ್ರಭಾವ ಬೀರಬಲ್ಲದು. ಆದ್ದರಿಂದ ಇದೊಂದು ಕೊರತೆಯೂ ಹೌದು. ಕಾರಣ ಸುಸಂಸ್ಕೃತರಾದ ಸಂಸಾರದಲ್ಲಿ ಬೆಳೆದ ಲಕ್ಷಣಗಳೇ ಬೇರೆ. ಕೊಳಚೆ ಪ್ರದೇಶಗಳಲ್ಲಿ ಬೆಳೆದ ಮಕ್ಕಳ ಲಕ್ಷಣಗಳೇ ಬೇರೆ. ಈ ಎರಡು ವಿಭಿನ್ನ ವಾತಾರವಣದಲ್ಲಿ ಬೆಳೆಯುವ ಮಕ್ಕಳ ನಡೆನುಡಿಗಳು ಬೇರೆಬೇರೆ. ಋಷಿಯ ಸಹವಾಸದಲ್ಲಿದ್ದ ಗಿಳಿ ಒಳ್ಳೆಯ ನಡವಳಿಕೆಗಳನ್ನು, ಕಟುಕನ ಸಹವಾಸದಲ್ಲಿದ್ದ ಗಿಳಿ ಕೆಟ್ಟ ನಡವಳಿಕೆಗಳನ್ನು ಕಲಿತ್ತಿದ್ದನ್ನು 'ನೀತಿ ಚಿಂತಾಮಣಿ' ಯಲ್ಲಿ ಓದಿದ್ದೇವೆ. ಗಿಳಿಯ ಮೇಲೆ ಪರಿಸರ ಅಷ್ಟೊಂದು ಪ್ರಭಾವ ಬೀರಿರುವಾಗ ಇನ್ನು ಮನುಷ್ಯನ ಮೇಲೆ ಪರಸರ ಎಷ್ಟರಮಟ್ಟಿನ ಪ್ರಭಾವ ಬೀರಬಲ್ಲದು ಎಂಬುದು ವಾಚಕರ ಊಹೆಗೆ ಬಿಟ್ಟದ್ದು.

ಒಂದು ಕಾಲಕ್ಕೆ ಸಂಸಾರದಲ್ಲಿ ಅಜ್ಜ ಅಜ್ಜಿಯರ ಪಾತ್ರ ಹೆಚ್ಚಿನ ರೀತಿಯಲ್ಲಿತ್ತು ಅವರು ಸಂಜೆಯ ವೇಳೆ ತಮ್ಮ ಮೊಮ್ಮಕ್ಕಳನ್ನು ಒಂದು ಕಡೆ ಕಲೆಹಾಕುತ್ತಿದ್ದರು. ನೆರೆಹೊರೆಯ ಮಕ್ಕಳಿಗೂ ಸಹ ಸ್ವಾಗತವಿತ್ತು. ಅವರಿಗೆಲ್ಲಾ ಅಜ್ಜ ಅಜ್ಜಿಯರು ಬಾಯಿಪಾಠ ಹೇಳಿಕೊಡುವ ರೂಢಿಯಿತ್ತು.ಅಕ್ಷರ, ಮಗ್ಗಿ, ವಾರ ತಿಥಿ, ನಕ್ಷತ್ರ, ತಿಂಗಳು ಮುಂತಾದವುಗಳನ್ನು ಬಾಯಿಪಾಠ ಮಾಡಿಸುತ್ತಿದ್ದರು. ಒಳ್ಳೆಯ ಶ್ಲೋಕಗಳನ್ನು ಹೇಳಿಕೊಡುತ್ತಿದ್ದರು. ನೀತಿಯುತವಾದ ಕಥೆಗಳನ್ನು ಅಜ್ಜ ಅಜ್ಜಿಯರ ಬಾಯಿಂದ ಕೇಳುವುದು ಹಬ್ಬವಾಗಿತ್ತು. ಕೆಲವು ವೇಳೆ ಮಕ್ಕಳು ಊಟವನ್ನೂ ಸಹ ಮರೆತು ಕಥೆ ಕೇಳುತ್ತಿದ್ದವು. ಅನೇಕ ವೇಳೇ ಅವು ಕಥೆ ಕೇಳುತ್ತಿದ್ದಂತೆಯೇ ನಿದ್ರೆ ಹೋಗುತ್ತಿದ್ದರಬಹು. ಈ ಪದ್ಧತಿ ಹಿರಿಯರು ಇರುವ ಮನೆಯಲ್ಲಿ ಈಗಲೂ ನಡೆಯುತ್ತದೆ. ಆದರೆ ಮೊದಲಿದ್ದ ಪ್ರಾಶಸ್ತ್ಯ ಈಗಿಲ್ಲ. ಕಾರಣ, ಸಮಷ್ಟಿ ಕುಟುಂಬ ಜೀವನ ಈಗ ಮರೆಯಾಗುತ್ತಿದೆ. ಅಜ್ಜ ಅಜ್ಜಿಯರ ಸ್ಥಾನವನ್ನು ಒಂದು ನರ್ಸರಿ ಶಾಲೆಗಳು ಆಕ್ರಮಿಸಿವೆ. ಆದರೂ ಅವು ಅಜ್ಜ ಅಜ್ಜಿಯರ ಸಂಜೆಯ ಶಾಲೆಯ ಮಟ್ಟಕ್ಕೆ ಬರಲಾರವು. ಒಂದು ರೀತಿಯಲ್ಲಿ ಪ್ರತಿಯೊಂದು ಮನೆಯೂ ವೆಚ್ಚವಿಲ್ಲದ ನರ್ಸರಿ ಶಾಲೆ ಆಗಿತ್ತು.

'ಮಕ್ಕಳು ಮಾನವರಾಗಿ, ನಾಗರಿಕರಾಗಿ, ಇನ್ನೊಬ್ಬರೊಡನೆ, ಪ್ರೀತಿ- ಗೌರವ ಘನತೆಗಳಿಂದ ವರ್ತಿಸುವಂತೆ ಮಾಡಿ, ಮಕ್ಕಳಲ್ಲಿ ಔದಾರ್ಯ, ಸೋದರಭಾವನೆ, ಸಹಾನುಭೂತಿ, ಬೆಳೆಯುವಂತೆ ಮಾಡುವುದೇ ಶಿಕ್ಷಣ'- ಎಂಬ ಡಾ|| ರಾಧಾಕೃಷ್ಣನ್ ರ ಅಭಿಪ್ರಾಯ ನಿಜಕ್ಕೂ ಶ್ಲಾಘನೀಯವಾದದ್ದು.

## ೫.೫. ಪ್ರಾಚೀನ ಭಾರತದ ಶಿಕ್ಷಣ ಪದ್ಧತಿ

ಪ್ರಾಚೀನ ಭಾರತೀಯರು 'ವಿದ್ಯೆಗೆ' ಬಹಳ ಮಹತ್ವ ಕೊಟ್ಟಿದ್ದರು. ಅವರ ಜೀವನದಲ್ಲಿ ಶಿಕ್ಷಣ ಒಂದು ಭಾಗವಾಗಿದ್ದಿತು. ಖ್ಯಾತ ವಿಶ್ವವಿದ್ಯಾಲಯಗಳಾದ 'ತಕ್ಷಶಿಲೆ' 'ನಳಂದ' ಮತ್ತು ಕಾಂಚೀಪುರಕ್ಕೆ ವಿದೇಶಗಳಿಂದ ವಿದ್ಯಾರ್ಥಿಗಳು ಶಿಕ್ಷಣ ಪಡೆಯಲು ಬರುತ್ತಿದ್ದರು. 'ಗುರುಕುಲಪದ್ಧತಿ' ಮುಖ್ಯವಾಗಿದ್ದಿತು. ವೇದ,ಉಪನಿಷತ್ತುಗಳಂತೆ ಗ್ರಂಥಗಳನ್ನು, ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಗಳನ್ನು ಮೊಟ್ಟಮೊದಲು ಪ್ರಪಂಚಕ್ಕೆ ಪರಿಚಯಿಸಿದ ಕೀರ್ತಿ ಪ್ರಾಚೀನ ಭಾರತೀಯರದ್ದಾಗಿದೆ. ಪ್ರಾಚೀನಕಾಲದಲ್ಲಿ ಸಮಾಜವು ಸಂಪ್ರದಾಯ ಬದ್ಧವಾಗಿದ್ದಿತು. ಅಲ್ಲದೆ ಬದಲಾವಣೆಗೆ ಅವಕಾಶಗಳು ಕಡಿಮೆಯಾಗಿದ್ದವು. ತನ್ನ ಗತಕಾಲದಲ್ಲಿ ಸಮಾಜವು ಗಳಿಸಿದ್ದುದನ್ನು ಶಿಕ್ಷಣವು ರಕ್ಷಿಸಿಕೊಂಡು ಬರಲು ಪ್ರಯತ್ನಿಸುತ್ತಿದ್ದಿತು. "ನಮ್ಮ ಉಪನಿಷತ್ ಕಾಲದಿಂದಲೂ ಮನುಷ್ಯನ ಉನ್ನತಿಗೆ ವಿದ್ಯೆ ಅಗತ್ಯವೆಂದು ಪರಿಭಾವಿಸಿಯೂ ತೋರಿಸಬಲ್ಲುದೇ ವಿದ್ಯೆ ಎಂದು ಹೇಳಲಾಗುತ್ತಿತ್ತು. ವಿದ್ಯೆ ಇಲ್ಲದವನು ಹದ್ದಿಗಿಂತಲೂ ಕಡೆಯಾಗಿದ್ದನು. "ವಿದ್ಯೆಉಳ್ಳವನ ಮುಖವು ಮುದ್ದು ಬರುವಂತಿಕ್ಕು ವಿದ್ಯೆ ಇಲ್ಲದವನ ಬರಿ ಮುಖವು ಹಾಳೂರು ಹದ್ದಿಗಿಂತಲೂ ಕಡೆ ಸರ್ವಜ್ಞ" ಎಂಬ ಸರ್ವಜ್ಞನ ನುಡಿ ವಿದ್ಯೆಯ ಮಹತ್ವವನ್ನು ಸೂಚಿಸುತ್ತದೆ.

ಪ್ರಾಚೀನರಲ್ಲಿ ಆಳಿಹೋದ ಎಲ್ಲ ರಾಜರಿಂದಲೂ, ರಾಜಮನೆತನದಿಂದಲೂ ಈ ನಾಡಿನ ಶಿಕ್ಷಣಕ್ಕೆ ಹಿರಿದಾದ ಕಾಣಿಕೆಗಳು ಸಂದಿದೆಯೆಂದೇ ಹೇಳಬೇಕು. ಮಹತ್ವದ ಊರುಗಳಲ್ಲಿ ಅಗ್ರಹಾರಗಳು, ಬ್ರಹ್ಮಪುರಿಗಳು, ಗುಡಿಗಳು ಮತ್ತು ಮಠಮಾನ್ಯಗಳು ಈ ಲೋಕ ಶಿಕ್ಷಣದ ಗುರುತರ ಜವಾಬ್ದಾರಿಯನ್ನು ಹೊತ್ತಿದ್ದವಲ್ಲದೆ,ಅದನ್ನು ಸಮರ್ಥ ರೀತಿಯಲ್ಲಿ ನಿತ್ತರಿಸಿಯೂ ಇದ್ದವು. ಕನ್ನಡ ನಾಡಿನಲ್ಲಿ ಇಟ್ಟಗೆ, ಕುಪ್ಪತ್ತೂರು, ಹರಿಹರ, ಬಳ್ಳಿಗಾವಿ, ಸಾಲೋಟಗಿ, ಕಳಸ, ಐಹೊಳೆ, ಮುತ್ತಗೆ, ಇಂಗಳೇಶ್ವರ, ವಿಜಾಪುರ, ರಾಜಭಾಗ, ದೇಗಾವಿ- ಮುಂತಾದ ಊರುಗಳಲ್ಲಿ ವಿಶ್ವವಿದ್ಯಾಲಯಗಳೇ ಇದ್ದವು.

ಭರತಖಂಡದ ಅತ್ಯಂತ ಉದಾತ್ತ ಚಿಂತನ ಪ್ರವಾಹವೂ ಈ ಅರಣ್ಯಶಾಲೆ ಮತ್ತು ಆಶ್ರಮಗಳಿಂದಲೇ ಹೊರಹೊಮ್ಮಿತು. ಹೀಗಾಗಿ ಶತಶತಮಾನಗಳ ಭಾರತೀಯ ಸಂಸ್ಕೃತಿ ಬಹುಮಟ್ಟಿಗೆ ಈ ಅರಣ್ಯಶಾಲೆ ಹಾಗೂ ಆಶ್ರಮಗಳ ಕೊಡುಗೆಯಾಗಿದೆ. ಅದು ಗ್ರಾಮೀಣ ಸಂಸ್ಕೃತಿಯ ರೂಪದಲ್ಲಿ ದಾಂಗುಡಿಯಿಟ್ಟಿತೇ ಹೊರತು ನಗರ ಸಂಸ್ಕೃತಿಯ ರೂಪದಲ್ಲಲ್ಲ. ಸಂಸ್ಕೃತ, ಧಾರ್ಮಿಕ, ಸಾಹಿತ್ಯದ ಒಂದು ಶಾಖೆಯನ್ನು 'ಆರಣ್ಯಕ' ಅಂದರೆ, 'ಅರಣ್ಯಶಾಲೆಗಳಲ್ಲಿ ಮೂಡಿದ ಸಾಹಿತ್ಯ' -ಎಂದು ಕರೆದಿರುವುದು ಸಾರ್ಥಕವಾಗಿಯೇ ಇದೆ. ಅವುಗಳ ಅರ್ಥಗೋಚರಿಸಿದ್ದೂ ಅರಣ್ಯಶಾಲೆಯ ಪ್ರಶಾಂತ,ಏಕಾಂತ ವಾತಾವರಣದಲ್ಲಿಯೆ.

ಶಿಕ್ಷಣವನ್ನೂ, ಶಿಕ್ಷಣಾವಧಿಯನ್ನೂ ರೂಪಿಸುವ, ನಿರ್ದೇಶಿಸುವ, ಅನುಪಮ ಆಚಾರ್ಯನಾಗಿದ್ದ 'ಗುರು'ವೇ ಶಿಕ್ಷಣಕ್ಷೇತ್ರದಲ್ಲಿ ನಿಜವಾದ ಕ್ರಿಯಾತ್ಮಕ ಶಕ್ತಿಯ ಮೂಲ- ಸ್ರೋತವಾಗಿದ್ದನು. ಆತನ ಮನೆಯೇ ಶಾಲೆಯಾಗಿತ್ತು. ಹೀಗಾಗಿ ಶಾಲೆ ಸ್ವಭಾವಿಕವಾಗಿ ರೂಪುಗೊಂಡ ಸಂಸ್ಥೆಯಾಗಿತ್ತೇ ಹೊರತು ಕೃತಕವಾಗಿ ನಿರ್ಮಿಸಿದ ಸಂಸ್ಥೆಯಾಗುತ್ತಿರಲಿಲ್ಲ. ವಿದ್ಯಾರ್ಥಿಯು ಗುರುವನ್ನು ಸಂದರ್ಶಿಸಿ ಆತನ ಶಿಷ್ಯತ್ವವನ್ನು ಪಡೆದು ಕೊಂಡ ದಿವಸದಿಂದಲೇ ಶಿಕ್ಷಣ ಪ್ರಾರಂಭವಾಗುತ್ತಿತ್ತು. ಶಿಷ್ಯತ್ವ ಪ್ರಧಾನ ಒಂದು ಶಾಸ್ತ್ರೋಕ್ತ, ಪವಿತ್ರವಾಗಿದ್ದು ಅದನ್ನು "ಉಪನಯನ" ವೆಂದು ಕರಯಲಾಗುತ್ತಿತ್ತು. ಅದು ಅರ್ಥರಹಿತವಾದ ಸಂಸ್ಕಾರವಾಗಿರಲಿಲ್ಲ.

"ಪರಾವಿದ್ಯೆ"-ಯ ಸಾಧನೆಯಲ್ಲಿ ಮೂರು ಹಂತಗಳನ್ನು ಗುರುತಿಸಲಾಗಿದೆ. 'ಶ್ರವಣ','ಮನನ',ಮತ್ತು 'ನಿಧಿಧ್ಯಾಸನ'-ಎಂಬುದೇ ಆ ಮೂರು ಹಂತಗಳು. 'ಶ್ರವಣ'ಎಂದರೆ ಗುರುವು ಉಚ್ಚರಿಸಿದ ಶಬ್ದಗಳನ್ನು ಕೃತಿಗಳನ್ನು ಗಮನವಿಟ್ಟು ಕೇಳುವುದು. ಗುರು ಪರಂಪರೆ ಅಥವಾ ಸಂಪ್ರದಾಯಕ್ಕೆ ಅನುಗುಣವಾಗಿ ಶ್ರುತಿ ಪದ್ಧತಿಯನ್ನು ಅನುಸರಿಸಿ ಶಿಷ್ಯನಿಗೆ ಜ್ಞಾನದಾನವನ್ನು ಮಾಡಲಾಗುತ್ತಿತ್ತು. ಇದೇ ಪ್ರಾಚೀನ ಭಾರತದಲ್ಲಿ ಪ್ರಚಲಿತವಾಗಿದ್ದ ಚಿರಪ್ರಶಂಸಿತ ಶಿಕ್ಷಣ ಪದ್ಧತಿ. ಪರಿಮಿತ ಶಬ್ದಗಳಲ್ಲಿ ಅಪರಿಮಿತ ಅರ್ಥವನ್ನು ಅಡಗಿಸಿಕೊಳ್ಳುವ 'ಮಂತ್ರ' ಅಥವಾ ಸೂತ್ರರೂಪದಲ್ಲಿ ಇಂತಹ ಜ್ಞಾನವನ್ನು ಉಪದೇಶಿಸಲಾಗುತ್ತಿತ್ತು. ಅರ್ಥಲೋಕವನ್ನೇ ತನ್ನಲ್ಲಿ ಅಡಗಿಸಿಕೊಂಡಿರುವ 'ಪ್ರಣವ' ಅಥವಾ 'ಓಂ' ಕಾರ ಇದಕ್ಕೆ ಅತ್ಯುತ್ತಮ ಉದಾಹರಣೆ. ಅಂದಿನ ಜ್ಞಾನವೆಲ್ಲವೂ ಗುರು-ಶಿಷ್ಯರಿಗೆ ಸೀಮಿತವಾಗಿ ಬಿಟ್ಟಿದ್ದಿತ್ತು. ಗುರುವೇ ಚಲಿಸುವ ಪುಸ್ತಕ ಭಂಡಾರವಾಗಿದ್ದ ಜ್ಞಾನ ಸ್ರೋತ್ರವಾಗಿದ್ದ. ನೇರವಾಗಿ ಆ ಜ್ಞಾನವಾಹಿನಿ ತನ್ನತ್ತ ಹರಿಯುವಂತೆ ಮಾಡಿಕೊಳ್ಳುವುದೇ ಶಿಷ್ಯನ ಕರ್ತವ್ಯವಾಗಿತ್ತು. ಗುರುವು ಉಚ್ಚರಿಸಿದಂತೆಯೇ ಕಂಠಪಾಠ ಮಾಡಿ ಉಚ್ಚರಿಸುವ ಪದ್ಧತಿಯೇ ಜ್ಞಾನರ್ಜನೆಯ ಮಾಧ್ಯಮವಾಗಿ ಬಿಟ್ಟಿದ್ದುದರಿಂದ ಅದಕ್ಕೆ ತನ್ನದೇ ಆದ ಮಹತ್ವವೂ ಇದ್ದಿತು.

ಪ್ರತಿದಿನವೂ ಭಿಕ್ಷೆಯನ್ನು ಬೇಡಿ, ಶರಲು ಹೋಗಿ ಬರುವುದು ಬ್ರಹ್ಮಚಾರಿಯ ಮತ್ತೊಂದು ಕರ್ತವ್ಯವಾಗಿತ್ತು. ತನ್ನ ಹೊಟ್ಟೆಹೊರೆಯುವ ದೃಷ್ಟಿಯಿಂದ ಮಾತ್ರ ಬೇಡುವ ಭಿಕ್ಷೆ ಆದಾಗಿರದೆ, ಅದು ತನ್ನ ವಿದ್ಯಾಸಂಸ್ಥೆಗಾಗಿ ಬೇಡವ ವಂತಿಗೆಯಾಗಿತ್ತು. ಅದರ ಶೈಕ್ಷಣಿಕ ಮಹತ್ವವೇನೆಂಬುದನ್ನೂ "ಶತಪಥ ಬ್ರಾಹ್ಮಣ"ದಲ್ಲಿ ವಿವರಿಸಲಾಗಿದೆ. ವಿದ್ಯಾರ್ಥಿಯಲ್ಲಿ ವಿನಯ, ಮತ್ತು ತ್ಯಾಗದ ಭಾವನೆಗಳನ್ನು ರೂಪಿಸುವ ದೃಷ್ಟಿಯಿಂದ ಭಿಕ್ಷಾಟನವನ್ನು ಅನಿವಾರ್ಯ ವಿಧಿಯನ್ನಾಗಿ ಮಾಡಲಾಗಿದೆ ಎಂದು ಅಲ್ಲಿ ಹೇಳಲಾಗಿದೆ.

ಉಚ್ಚಶಿಕ್ಷಣಕ್ಕೆಂದೇ ನಿಯತವಾಗಿದ್ದ ಸಂಸ್ಥೆಗಳೂ ಇದ್ದುವು. ಅವುಗಳನ್ನು "ಪರಿಷತ್ತು" ಗಳೆಂದು ಕರೆಯಲಾಗುತ್ತಿತ್ತು. ಅಂದು ಅತ್ಯಂತ ವಿಖ್ಯಾತವಾಗಿದ್ದ ಪರಿಷತ್ತು ಎಂದರೆ, ಪಾಂಚಾಲ ಪರಿಷತ್ತು. ಪಾಂಚಾಲ ದೇಶದ ರಾಜರ್ಷಿ ಪ್ರವಹಣದ ಜೈವಲಿ ಅದಕ್ಕೆ ಪ್ರೋತ್ಸಾಹ ಪೀಯುತ್ತಿದ್ದನು. ಪ್ರತಿದಿನ ಆತನು ತನ್ನ ಅರಮನೆಯನ್ನು ಬಿಟ್ಟು ರಥವನ್ನೇರಿ ಸಭಾ ನಿಲಯಕ್ಕೆ ಹೋಗಿ ಪರಿಷತ್ತಿನ ಸಭೆಗಳಲ್ಲಿ ಭಾಗವಹಿಸುತ್ತಿದ್ದನು.

ಹತ್ತುಸಾವಿರಕ್ಕಿಂತ ಹೆಚ್ಚು ಸಂಖ್ಯೆಯ ವಿದ್ಯಾರ್ಥಿಗಳಿಗೆ ಅಶನವಸನ ವಸತಿಗಳನ್ನಿತ್ತು, ವಿದ್ಯಾಭ್ಯಾಸದ ವ್ಯವಸ್ಥೆಯನ್ನು ಮಾಡುವವನನ್ನು "ಕುಲಪತಿ" ಎಂದು ಕರೆಯುತ್ತಿದ್ದರು. ಕುಲಪತಿಯಾದವನು ಇಷ್ಟು ದೊಡ್ಡ ಸಂಖ್ಯೆಯ ವಿದ್ಯಾರ್ಥಿಗಳಿಗೂ, ಅವರಿಗೆ ವಿದ್ಯೆ ಕಲಿಸುವ ಸಾವಿರ -ಸಾವಿರ ಸಂಖ್ಯೆಯಲ್ಲಿದ್ದ ಅಧ್ಯಾಪಕರಿಗೂ ಅವರ ಕುಟುಂಬಗಳಿಗೂ ವಸತಿ ಅಶನವಸನಾದಿ ಎಲ್ಲ ಅನುಕೂಲಗಳನ್ನು ಕಲ್ಪಿಸಬೇಕಾಗಿತ್ತು. ಇಷ್ಟುದೊಡ್ಡ ಹೊರೆಯನ್ನು ನಿರ್ವಹಿಸಲು ಬೇಕಾದ ಧನಸಂಪತ್ತು ಅವರಿಗೆ ಎಲ್ಲಿಂದ ಬರುತ್ತಿತ್ತು? ರಾಜನಾದವನು ತನ್ನ ರಾಜ್ಯದಲ್ಲಿ ಎಲ್ಲೆಲ್ಲಿ ಗುರುಕುಲಗಳಿವೆ, ಕುಲಪತಿಗಳಿದ್ದಾರೆ, ಎಂಬುದನ್ನು ತಾನೇ ವಿಚಾರಿಸಿ ತಿಳಿದು ಅಲ್ಲಲ್ಲಿಗೆ ಬೇಕಾದ ಎಲ್ಲ ಸಹಾಯ ಸಂಪತ್ತನ್ನು ಒದಗಿಸಿ ಕೊಡಬೇಕಾಗಿತ್ತು. ಇದು ರಾಜನ ಕರ್ತವ್ಯ. ಕುಲಪತಿಗಳು ಅರಮನೆಗೆ ಹೋಗಿ ಯಾಚಿಸಬೇಕಾದ ಸಂದರ್ಭವೇ ಬರಬಾರದು. ಆ ಕಾಲದ ಶಿಕ್ಷಣ ಈ ಕ್ರಮದಲ್ಲಿ ನಡೆಯುತ್ತಿತ್ತು.

ಕಾಡುಗಳಲ್ಲಿ ವಾಸಿಸುತ್ತಿದ್ದ ಋಷಿಗಳೂ ರಾಜ್ಯದ ಬೊಕ್ಕಸಕ್ಕೆ ತೆರಿಗೆಗಳನ್ನು ಸಂದಾಯ ಮಾಡುತ್ತಿದ್ದರು. ಆದರೆ ಆ ತೆರಿಗೆಯು ಹಣಕಾಸಿನ ರೂಪದಲ್ಲಿ ಅಥವಾ ವಸ್ತುಗಳ ರೂಪದಲ್ಲಿ ಇರಲಿಲ್ಲ. ಈ ತಪಸ್ವಿಗಳು ತಾವು ಮಾಡಿದ ತಪಸ್ಸಿನ-ದುಡಿಮೆಯ ಆರನೇ ಒಂದು ಭಾಗವನ್ನು ರಾಜನಿಗೆ ಒಪ್ಪಿಸುತ್ತಿದ್ದರು. ತಪಸ್ಸಿನ ಫಲವನ್ನು ಕೊಡುವುದೆಂದರೇನು?

ಅದನ್ನು ಅಳತೆ, ತೂಕಮಾಡಿ ಕೊಡಲಾಗುತ್ತದೆಯೇ? ಅಂದರೆ ಇಲ್ಲಿ ಗೂಢವಾದ ರಹಸ್ಯ ಒಂದಿದೆ. ಕುಲಪತಿಗಳು ನಿಯಮಬದ್ಧವಾಗಿ ಕೊಡುವ ವಿದ್ಯಾಭ್ಯಾಸದಿಂದ ದೇಶದ ಸಾವಿರಾರು ತರುಣರು ಒಳ್ಳೆಯ ಗುಣವಂತರಾಗಿ, ಸದಾಚಾರ ಸಂಪನ್ನರಾಗಿ, ಜ್ಞಾನಿಗಳಾಗಿ, ಗುರುಕುಲಗಳಿಂದ ಹೊರಬರುತ್ತಿದ್ದರು. ಇಂತಹ ಸುಸಂಸ್ಕೃತ ವಿದ್ಯಾವಂತರೇ ಸತ್ಪ್ರಜೆಗಳಾಗಿ, ರಾಜ್ಯದಲ್ಲಿ ತುಂಬಿರುವುದರಿಂದ ರಾಜನಿಗೆ ಈಗಿನಂತೆ, ಪೋಲೀಸು, ಕೋರ್ಟ್, ಕಾನೂನು, ಶಿಕ್ಷೆ, ಜೈಲು, ನ್ಯಾಯದಾನ ಮುಂತಾದ ಹಲವು ಆಡಳಿತ ಕಾರ್ಯಗಳಿಗೆ ಅನವಶ್ಯಕವಾಗಿ ವೆಚ್ಚ ಮಾಡಬೇಕಾದ ಸಂದರ್ಭಗಳೇ ಬರುತ್ತಿರಲಿಲ್ಲ. ಕಳ್ಳತನ, ಕೊಲೆ, ಸುಲಿಗೆ, ದರೋಡೆ- ಮುಂತಾದ ಹೀನ ಕಾರ್ಯಗಳಿಗೆ ಕೈ ಇಕ್ಕದೇ ಪ್ರಜೆಗಳು ಪ್ರೀತಿ, ವಿಶ್ವಾಸಗಳಿಂದ ಪರಸ್ಪರ ಸಹಕರಿಸುತ್ತ ಶಾಂತಿ ಸಮಾದಧಾನಗಳಿಂದ ಬದುಕುತ್ತಿದ್ದರು. ಇದನ್ನೇ "ರಾಮರಾಜ್ಯ'' ವೆಂದು ಈಗಲೂ ನಾವು ಸ್ಮರಿಸುತ್ತೇವೆ. ಈಗಿನಂತೆ ವಿದೇಶಿಯರ ಅನುಕರಣೆಯಿಂದ ವಿದ್ಯೆಯನ್ನು ಉದ್ಯೋಗ ಮತ್ತು ಶ್ರೀಮಂತಿಕೆಯ ಸಾಧನವೆಂದು ತಿಳಿಯದೆ, ಮನುಷ್ಯ ಸ್ವಭಾವವನ್ನು ತಿದ್ದಿ ತೀಡಿ ಅವನನ್ನು ಯೋಗ್ಯ ಮನುಷ್ಯನನ್ನಾಗಿ ರೂಪಿಸುವ ಸಾಧನವೆಂದು ತಿಳಿದಾಗ ಮಾತ್ರ "ವಿದ್ಯಾದದಾತಿ ವಿನಿಯಂ" ಎಂಬ ಮಾತು ಸಾರ್ಥಕವಾದೀತು. ನಮ್ಮ ಸಂಸ್ಕೃತಿಯು ಈ ಸತ್ಯವನ್ನು ಸಾಕ್ಷಾತ್ಕರಿಸಿತ್ತು.

ಪರಮೋತ್ಕೃಷ್ಟ ಜ್ಞಾನವನ್ನು ಸಂಪಾದಿಸಲು ಅಗತ್ಯವಾದ ಯೋಗ್ಯತೆ ಮತ್ತು ಸಾಮರ್ಥ್ಯಗಳನ್ನು ಪುರುಷರಂತೆಯೇ ಸ್ತ್ರೀಯರೂ ಹೊಂದಿರಬಲ್ಲರು ಎಂದು, ಅಂದು ಪರಿಗಣಿತವಾಗಿತ್ತು. ಯಾಜ್ಞವಲ್ಕ್ಯನಿಗೆ ಯೋಗ್ಯ ಪತ್ನಿಯಾಗಿದ್ದು, ಅತ್ಯುಚ್ಚ ಜ್ಞಾನ ಸಾಧನೆಯಲ್ಲಿ ಸಹಭಾಗಿಯಾಗಿದ್ದ ಮೈತ್ರೇಯಿಯ ಕಥೆಯೂ ನಮಗೆ ಉಪನಿಷತ್ತುಗಳಲ್ಲಿ ಕಾಣ ದೊರೆಯುತ್ತದೆ. ಆರ್ಯರ ಕಾಲದಲ್ಲಿ ಸ್ತ್ರೀಗೆ ವಿದ್ಯಾಭ್ಯಾಸ ಹಾಗೂ ಆಸ್ತಿಹಕ್ಕು ಇದ್ದಿತು. ಪತ್ನಿ-ಪತಿಯಲ್ಲಿ ಸರಿ ಸಮಾನತೆ ಇತ್ತು. ಸ್ತ್ರೀ ಎಲ್ಲದರಲ್ಲಿಯೂ ಸಮಪಾಲುದಾರಳಾಗಿದ್ದಳು. "ಜ್ಞಾನದಿಂದ ಅಜ್ಞಾನ ಅಳಿಯುವುದು, ಅಂತಹ ಜ್ಞಾನ ಸೂರ್ಯನಂತೆ ಪ್ರಕಾಶಮಾನವೂ,- ಪರಬ್ರಹ್ಮವೂ ಆಗಿರುತ್ತದೆ"-ಎಂದು ಮಹಾಭಾರತದ ಶ್ರೀಕೃಷ್ಣ ಪರಮಾತ್ಮ ಹೇಳಿದ ವಾಕ್ಯ ಜನಜನಿತವಾಗಿದೆ.

ಇನ್ನೂ ಘಟಿಕಾಸ್ಥಾನ ಇತ್ಯಾದಿಗಳ ಕಡೆಗಮನ ಹರಿಸಿದಾಗ, ಘಟೀ ಎನ್ನುವುದು ಘಳಿಗೆಯ ಸೂಚಕವಾದ ಅಳತೆ. ಘಳಿಗೆಯನ್ನು ಅಳೆಯುವ ಘಟಿಕಾಯಂತ್ರಗಳಿದ್ದ ಪ್ರೌಢವಿದ್ಯಾಕೇಂದ್ರಗಳೇ ಘಟಿಕಾಸ್ಥಾನಗಳು. ಕಾಲದ ಅಳತೆಗೆ ಘಟಿಕೆ (ಗಡಿಗೆ-ಮಡಕೆ) ಯನ್ನು ಬಳಸುತ್ತಿದ್ದುದರಿಂದ ಈ ಅರ್ಥ ಬಂದಿರುವ ಸಾಧ್ಯತೆ ಇದೆ. ಘಟಿಕಾಸ್ಥಾನವೆಂದರೆ, ಉಚ್ಚಶಿಕ್ಷಣಕೇಂದ್ರಗಳು. ಈಬಗ್ಗೆ ಅಭಿಪ್ರಾಯ ಭೇದವಿಲ್ಲ.

ಅವುಗಳ ಸ್ವರೂಪದ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಧಾರ್ಮಿಕ ಕೇಂದ್ರದಲ್ಲಿ 'ಬ್ರಾಹ್ಮಣರು ಒಂದೆಡೆ ಸೇರುತ್ತಿದ್ದ 'ಸಾರ್ವಜನಿಕ ಮಂದಿರ' 'ಬ್ರಹ್ಮಪುರಿ' ಎಂಬ ಅಭಿಪ್ರಾಯಗಳೇ ಅಲ್ಲದೇ ಉಪಾಧ್ಯಾಯರೂ ವಿದ್ವಾಂಸರೂ ವಿದ್ಯಾರ್ಥಿಗಳೂ ಒಟ್ಟಾಗಿ ಪರಸ್ಪರ ಚರ್ಚೆಯಿಂದ ಧರ್ಮದ ವಿಷಯದಲ್ಲಿ ಹೆಚ್ಚಿನ ಜ್ಞಾನವನ್ನು ಪಡೆಯಲು ಸಾಧ್ಯವಾಗಿದ್ದ ಸಂಸ್ಥೆ ಎಂಬ ಅಭಿಪ್ರಾಯವೂ ಇದೆ. ಉಚ್ಚ ಶಿಕ್ಷಣ ಸಂಸ್ಥೆಯ ಪ್ರತಿಯೊಂದು ಕಾರ್ಯದಲ್ಲೂ ಸಮಯದ ಶಿಸ್ತು ಅನಿವಾರ್ಯವೂ, ಮಹತ್ವಪೂರ್ಣವೂ ಆಗಿರುತ್ತಿದ್ದುದರಂದ ಅಲ್ಲಿ ಘಟಿಕಾಯಂತ್ರಗಳನ್ನು ಸ್ಥಾಪಿಸಲಾಗುತ್ತಿತ್ತು. ಅದನ್ನು ನೋಡಿಕೊಳ್ಳಲು ಘಳಿಗೆಯ ಮಾಣಿ ಅಥವಾ ಘಳಿಯಾರದ ಮಾಣಿಯರನ್ನು ನೇಮಿಸಲಾಗುತ್ತಿತ್ತು. ಆಯಾ ಸಮಯಕ್ಕೆ ಸರಿಯಾಗಿ ಕಾಲ ಸೂಚಕ ಸದ್ದನ್ನು ಮಾಡುತ್ತಿದ್ದವನೇ 'ಘಟಿಕಾ ಪ್ರಹಾರಿ', ಘಟಿಕಾಸ್ಥಾನದಲ್ಲಿ ಪರೀಕ್ಷೆಗಳನ್ನು ನಡೆಸುವಾಗಲೂ ಸಮಯದ ಗಣನೆ ಮುಖ್ಯವಾಗಿದ್ದು, ನಿಗದಿತ ಸಮಯದಲ್ಲಿ ಗೆಲುವನ್ನು ಪಡೆಯುತ್ತಿದ್ದ ಅಥವಾ ಸಮಸ್ಯೆಯನ್ನು ಬಿಡಿಸುತ್ತಿದ್ದ ವಿದ್ವಾಂಸನನ್ನು 'ಘಟಿಕಾ ಸಾಹಸಿ', ಘೈಸಾಸಿ' ಎಂದು ಕರೆಯಲಾಗುತ್ತಿತ್ತು.

ಇನ್ನೂ ಪ್ರಾಚೀನ ವಿಶ್ವ ವಿದ್ಯಾಲಯಗಳ ಕಡೆ ಗಮನಹರಿಸಿದಾಗ, ಪ್ರಾಚೀನ ಶಿಕ್ಷಣ ವ್ಯವಸ್ಥೆಯಲ್ಲಿ ನಲಂದಾ ವಿಶ್ವವಿದ್ಯಾಲಯ ಅಗ್ರಸ್ಥಾನವನ್ನು ಹೊಂದಿದೆ. ನಲಂದಾ ವಿಶ್ವವಿದ್ಯಾಲಯದಲ್ಲಿ ಹತ್ತು ಸಾವಿರ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು. ಅವರಿಗೆ ಬೋಧಿಸಲು ಒಂದು ಸಾವಿರದ ಐದುನೂರು ಶಿಕ್ಷಕರಿದ್ದರು. ಪ್ರತಿಯೊಬ್ಬ ಶಿಕ್ಷಕರೂ ಸಹ. ಮೂವತ್ತು ವಿಷಯಗಳನ್ನು ಬೋಧಿಸುವ ಮಹಾಪಂಡಿತರಾಗಿದ್ದರು. ಅಂದರೆ ಒಬ್ಬ ಅಧ್ಯಾಪಕ ಕೇವಲ ಅರೇಳು ವಿದ್ಯಾರ್ಥಿಗಳಿಗೆ ಬೋಧಿಸುವ ಕಾಯಕವಿತ್ತು. ಮತ್ತು ವಿದ್ಯಾರ್ಥಿಗಳನ್ನು ಕಠಿಣ ಪರೀಕ್ಷೆಗಳಿಗೆ ಒಳಪಡಿಸಿ, ಪ್ರತಿದಿನ ರಸಪ್ರಶ್ನೆ, ಆಶುಭಾಷಣ, ಪ್ರಬಂಧ, ಚರ್ಚಾಸ್ಪರ್ಧೆ-ಹೀಗೆ ಒಂದಲ್ಲ ಒಂದು ಚಟುವಟಿಕೆ ಇದ್ದು ಪ್ರತಿಯೊಬ್ಬರಿಗೂ ಅದರಲ್ಲಿ ಭಾಗವಹಿಸುಲು ಮುಕ್ತಾ ಅವಕಾಶವಿದ್ದಿತು.

ವಿದ್ಯಾರ್ಥಿಗಳಿಗೆ ಬಹಳ ಕಠಿಣವಾದ ಶಿಸ್ತುಕ್ರಮ ಅಳವಡಿಸಿದ್ದರು. ಸರಳವಾದ ಉಡುಗೆ, ಮಿತ ಆಹಾರ, ನಿರ್ದಿಷ್ಟ ಸಮಯದ ವಿಶ್ರಾಂತಿ, ಉಳಿದೆಲ್ಲ ಸಮಯ ವ್ಯಾಸಂಗಕ್ಕೆ ಮೀಸಲು. ಪ್ರತಿಯೊಬ್ಬ ವಿದ್ಯಾರ್ಥಿಯೂ ಯಾವುದಾದರೊಂದು ವಿಷಯದಲ್ಲಿ ಅಥವಾ ಪ್ರತಿಭೆಯಲ್ಲಿ ಪರಿಣಿತನಾಗಿ ಸಮಾಜದ ರಂಗಕ್ಕೆ ಧುಮುಕಿದರೆ ಅಲ್ಲಿ ಒಂದು ಸುಂದರ ಸಮಾಜವು ನಿರ್ಮಾಣವಾಗುತ್ತಿತ್ತು. ಅಂದಿನ ಶೈಕ್ಷಣಿಕ ಸ್ಥಿತಿಗಳು, ಮತ್ತು ಶಿಕ್ಷಣ ಕ್ರಮ ನಮಗೆ ಆಶ್ಚರ್ಯನ್ನುಂಟು ಮಾಡಬಹುದು. ವ್ಯಕ್ತಿ ಜೀವನದಲ್ಲಿ ಶಿಕ್ಷಣದಿಂದ ಮೋಕ್ಷ ಎಂಬ ಕಲ್ಪನೆಯೂ ಸಹ ಪ್ರಾಚೀನರಿಗೆ ಇದ್ದಿತು.

"ಧೈರ್ಯವಿಲ್ಲದೇ ಧನವಿಲ್ಲ
ಶೌರ್ಯವಿಲ್ಲದೆ ಜಯವಿಲ್ಲ
ಜ್ಞಾನವಿಲ್ಲದೆ ಮೋಕ್ಷವಿಲ್ಲ
ದಾನವಿಲ್ಲದೆ ಯಶಸ್ಸಿಯಿಲ್ಲ"

-ಎಂಬುವುದಾಗಿ 'ಸಭಾರಂಜನ ಶತಕ'ದಲ್ಲಿ ನಿರೂಪಿತವಾಗಿರುವುದನ್ನು ನೋಡಬಹುದು. ಕರ್ನಾಟಕದಲ್ಲಿ ಶಾತವಾಹನರ ಕಾಲದಿಂದಲೂ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ದೊರೆತಿರುವ ಸುಳಿವುಗಳಿವೆಯಾದರೂ ವಿದ್ಯಾಕೇಂದ್ರಗಳು ಮತ್ತು ವಿದ್ಯಾಕ್ರಮದ ಬಗ್ಗೆ ಹೆಚ್ಚಿನ ಮಾಹಿತಿಗಳು ದೊರೆತಿಲ್ಲ. 'ಕವಿರಾಜ ಮಾರ್ಗವೂ' "ಪದನ ರದು ನುಡಿಯಲುಂ ನುಡಿದುದನ ರದಾರಯಲು ಮಾರ್ಪರಾ ನಾಡವರ್ಗಳ್ . ಚದುರರ್ ನಿಜದಿಂ ಕುರತೋದದೆಯುಂ ಕಾವ್ಯ ಪ್ರಯೋಲಗ ಪರಿಣಿತ ಮಾತಿಗಳ್ "- ಎಂದು ಕನ್ನಡಿಗರ ಜಾಣತನವನ್ನು ವರ್ಣಿಸಿದೆ. ಇದರಿಂದ "ಕುರಿತು ಓದುವ" ಪದ್ಧತಿಯು ಇತ್ತು ಎಂದು ತಿಳಿಯುತ್ತದೆ. ಕ್ರಿ.ಶ. ೮ನೆಯ ಶತಮಾನದ ವೇಳೆಗಾಗಲೇ 'ಕವಿರಾಜಮಾರ್ಗ' ದಂತಹ ಲಕ್ಷಣಗ್ರಂಥವೊಂದರ ಅವಶ್ಯಕತೆ ಇತ್ತು ಎಂದು ಒಪ್ಪುವ ಸಂದರ್ಭದಲ್ಲಿ ಆ ಕಾಲಕ್ಕೆ ವಿದ್ಯಾಭ್ಯಾಸವೂ ಪ್ರೌಢಸ್ಥಿತಿಯನ್ನು ತಲುಪಿತ್ತು ಎಂದೂ ಒಪ್ಪಬೇಕಾಗುತ್ತದೆ. ಆದಿಕವಿ ಪಂಪನು ಕೂಡ ತನ್ನ 'ವಿಕ್ರಮಾರ್ಜುನ ವಿಜಯುದಲ್ಲಿ' "ಚಾಗದ ಭೋಗದಕ್ಕರದಗೇಯದ ಗೊಟ್ಟಿಯಲಂಪಿನಿಂಪುಗಳಾಗರಮಾದ ಮಾನಿಸರೆ ಮಾನಿಸರ್" -ಎಂದು ವಿದ್ಯೆಯ ಬಗ್ಗೆ -ವರ್ಣಿಸಿದ್ದಾನೆ. ಇದರಿಂದ ಕ್ರಿಶ. ೧೦ನೆಯ ಶತಮಾನದ ವೇಳೆಗೆ ಕರ್ನಾಟಕದಲ್ಲಿ ವಿದ್ಯಾಭ್ಯಾಸವು ಉನ್ನತ ಸ್ಥಿತಿಯಲ್ಲಿತ್ತು ಎಂದು ತಿಳಿಯುತ್ತದೆ. ಪಂಪಕವಿಯು ಮುಂದುವರೆದು, ಕೃಪಾಚಾರ್ಯರ ಬಳಿ ಪಾಂಡವರ ವಿದ್ಯಾಭ್ಯಾಸ ನಡೆದ ಕ್ರಮವನ್ನು ವಿವರಿಸಿದ್ದಾನೆ. ಬಹುಶಃ ಅದೇ ಕ್ರಮವು ಪಂಪನ ಕಾಲದಲ್ಲಿ ಉಳಿದಿತ್ತೆಂದು ಭಾವಿಸಿದರೆ ತಪ್ಪಾಗಲಾರದು.

ಪಂಪನು ತನ್ನ 'ಆದಿಪುರಾಣ'ದಲ್ಲಿ ಆದಿತೀರ್ಥಕರನಾದ ವೃಷಭನಾಥನುತನ್ನ ಹೆಣ್ಣು ಮಕ್ಕಳಾದ ಬ್ರಹ್ಮಿ ಮತ್ತು ಸೌಂದರಿಯರಿಗೆ ವಿದ್ಯಾಭ್ಯಾಸ ಆರಂಭ ಮಾಡಿಸಿದ್ದನ್ನು ವರ್ಣಿಸಿದ್ದಾನೆ. ಅವನ ಎರಡೂ ಕಾವ್ಯಗಳಿಂದ ಅವನ ಕಾಲಕ್ಕೆ ಪ್ರಚಲಿತದಲ್ಲಿದ್ದ ವಿದ್ಯೆಯ ಸ್ವರೂಪದ ಬಗೆಗೆ ತಿಳಿಯುತ್ತದೆ. ಮನೆಗಳಲ್ಲಿ ಮಕ್ಕಳಿಗೆ ಪಾಠ ಹೇಳಿಕೊಡುತ್ತಿದ್ದುದನ್ನು 'ವಡ್ಡಾರಾಧನೆ' ತಿಳಿಸುತ್ತದೆ. ಕರ್ನಾಟಕದ ಹಲವು ಶಾಸನಗಳು 'ಬಾಲಶಿಕ್ಷೆ' ಮತ್ತು 'ಕಂನಡಕ್ಷರ ಶಿಕ್ಷೆ' ಗಳನ್ನು ಪ್ರಸ್ತಾಪಿಸಿವೆ. 'ಬಾಲಶಿಕ್ಷೆಯಂತಹ ವ್ಯವಸ್ಥೆಯು ಎಲ್ಲಾ

ಅಗ್ರಹಾರಗಳಲ್ಲೂ ಸಾಮಾನ್ಯವಾಗಿದ್ದಿರಬಹುದಾದ ವ್ಯವಸ್ಥೆಯಾಗಿದ್ದುದರಿಂದ ಅದರ ಉಲ್ಲೇಖಗಳು ಕಡಿಮೆ ಎಂದು ತಿಳಿದರೆ ತಪ್ಪಾಗಲಾರದು. ಇವೆಲ್ಲವುಗಳಿಂದ ಕ್ರಿ.ಶ.೧೦ನೆಯ ಶತಮಾನದ ವೇಳೆಗಾಗಲೇ ಕರ್ನಾಟಕದಲ್ಲಿ ಉತ್ತಮ ವಿದ್ಯಾಭ್ಯಾಸ ವ್ಯವಸ್ಥೆ ಇತ್ತೆಂದು ಊಹಿಸಿಬಹುದಾಗಿದೆ.

ಪ್ರಾಚೀನ ಭಾರತದಲ್ಲಿ ಸರ್ವದಾ ಬ್ರಹ್ಮ ಚಿಂತನ ಮಾಡುತ್ತಿದ್ದ ಅನೇಕ ಮಂದಿ ಜ್ಞಾನಿಗಳಿದ್ದುದರಿಂದ ಇಲ್ಲಿ ಶ್ರೇಷ್ಠ ವರ್ಗದ ನಾಗರಿಕತೆಯು ಹೂವಿನಂತೆ ಅರಳಿತು. ದರ್ಶನಗಳ ಪ್ರೌಢಿಮೆಯಲ್ಲೂ, ಮತ, ವಿಚಾರಗಳ ಆಧ್ಯಾತ್ಮಿಕ ಸ್ವರೂಪದಲ್ಲೂ, ಕ್ರಮಬದ್ಧವಾಗಿ ಮೆಟ್ಟಲು, ಮೆಟ್ಟಲಾಗಿ ಮೇಲಕ್ಕೇರಿದ ಪ್ರಜಾಧರ್ಮ-ರಾಷ್ಟ್ರಧರ್ಮಗಳ ಪೂರ್ಣತೆಯಲ್ಲೂ, ದ್ವಂದ್ವಗಳಿಗೆ ಸಿಕ್ಕದ ಚಿತ್ತಸಮತ್ವದ ಅಥವಾ ಯೋಗದ ಪ್ರಭಾವದಲ್ಲೂ, ಮತ್ತಾವ ನಾಗರಿಕತೆಯೂ ಅದಕ್ಕೆ ಎಣೆಯೆನಿಸಲಿಲ್ಲ. ಇತರ ದೇಶಗಳ ಸಮಕಾಲೀನ ನಾಗರಿಕತೆಗಳೆಲ್ಲಾ, ಕಾಲಪ್ರವಾಹದ ಆಘಾತಕ್ಕೆ ಸಿಕ್ಕಿ ನುಚ್ಚುನೂರಾಗಿ ಕೊಚ್ಚಿ ಹೋಗಿದ್ದರೂ ಅದು ಮಾತ್ರ ಅಳಿಯದೆ ಉಳಿದೇ ಉಳಿಯಿತು.

"ಇಂದಿನವರೆಗೂ ಉಳಿದು ಬಂದಿರುವ ಭಾರತೀಯ ಕಲೆ ಸಾಹಿತ್ಯಗಳು ಪ್ರಾಚೀನಕಾಲದ ಸಾಂಸ್ಕೃತಿಕ ಸಂಸ್ಥೆಗಳ ಮಹತ್ವವನ್ನು ಸಾರಿ ಹೇಳುತ್ತವೆ. ಆಸಂಸ್ಥೆಗಳು ಹಲವು ಸಾವಿರ ವರ್ಷಗಳ ಕಾಲ ಬಾಳಿವೆ. ಅದಕ್ಕೆ ಭಾರತೀಯ ಶಿಕ್ಷಣ ಪದ್ಧತಿಯು ಅಸಾಧಾರಣ ರೀತಿಯಲ್ಲಿ ಸತ್ವಶಾಲಿಯಾಗಿದ್ದುದೇ ಕಾರಣವೆಂದು, ಅಂಗೀಕೃತವಾಗಿದೆ" ಎಂದು ರಾಧಾಕುಮುದ ಮುಖರ್ಜಿಯವರು ಹೇಳಿದ್ದಾರೆ.

"ಮನುಷ್ಯನ ಮೇಧಾಶಕ್ತಿಯು ಎಷ್ಟು ಮೇಲ್ಮೆಯನ್ನು ಪಡೆದು ಯಾವ ಉಚ್ಚಹಂತಕ್ಕೆ ಏರುವುದು ಸಾಧ್ಯವೋ, ಭಾರತೀಯರ ಮೇಧಾಶಕ್ತಿ ಅಷ್ಟು ಮೇಲ್ಮೆಯನ್ನು ಪಡೆದು ಉಚ್ಚ ಹಂತಕ್ಕೆ ಏರಿತ್ತು"-ಎಂದು ಶ್ರೀಮತಿ ಮ್ಯಾನಿಂಗ್ ಹೇಳಿದ್ದಾಳೆ. ಭಾರತೀಯರ ಮೇಧಾಶಕ್ತಿಯು ಎಷ್ಟು ಅಧಿಕವಾಗಿತ್ತೆಂಬುದಕ್ಕೆ ಅನೇಕ ನಿದರ್ಶನಗಳುಂಟು. ಭಾರತೀಯರು ಸಂಖ್ಯೆಗಳನ್ನೂ, ಸೊನ್ನೆಯನ್ನು, ದಶಮಾಂಶ ಪದ್ಧತಿಯನ್ನೂ , ನಿರ್ಮಿಸಿ ಪ್ರಪಂಚಕ್ಕೆ ಉಪಕಾರ ಮಾಡಿ ಆ ಮೂಲಕ ವಿಜ್ಞಾನದ ಬೆಳವಣಿಗೆಗೆ-ಅಸಾಧಾರಣ ರೀತಿಯಲ್ಲಿ ನೆರವಾದರು.

ಋಗ್ವೇದವೇ ಇಡೀ ಪ್ರಪಂಚದಲ್ಲಿ ಅತ್ಯಂತ ಪ್ರಾಚೀನವೆನಿಸುವ ಮೊಟ್ಟ ಮೊದಲನೆಯ ಗ್ರಂಥ, ಅದರಲ್ಲಿ ವರ್ಣಿತವಾಗಿರುವ ಭಾವನೆ, ಕಲೆ, ವಾದ್ಯ,ಲೋಹ, ವೃತ್ತಿಗಳನ್ನು ನೋಡಿದರೆ ವಿಸ್ಮಯವಾಗುತ್ತದೆ.

ಅಷ್ಟು ಪ್ರಾಚೀನ ಕಾಲದಲ್ಲೇ ಭಾರತೀಯರು ಎಷ್ಟು ಮಹತ್ವದ ಸಂಗತಿಗಳನ್ನು ಅರಿತಿದ್ದರೆಂಬುದೂ, ಎಷ್ಟರಮಟ್ಟಿಗೆ ನಾಗರಿಕತೆಯನ್ನು ವೃದ್ಧಿಗೊಳಿಸಿದ್ದರೆಂಬುದೂ ತಿಳಿದು ಆನಂದವಾಗುತ್ತದೆ.

ವೇದಗಳ ಜೊತೆಗೆ ಉಪನಿಷತ್ತುಗಳ ಮಹತ್ವವನ್ನು ಎಷ್ಟು ವರ್ಣಿಸಿದರೂ ಸಾಲದು. ಪ್ಲೇಟೋ ಮತ್ತು ಕ್ಯಾಂಟ್ ಎಂಬಿಬ್ಬರು ಪ್ರಚಂಡ ಮೇಧಾವಿಗಳು ಕೂಡ ಉಪನಿಷ್ಯತ್ತುಗಳಿಂದ ಕೆಲವು ಭಾಗಗಳನ್ನು ಆರಿಸಿ ತಮ್ಮ ಗ್ರಂಥಗಳಲ್ಲಿ ಸೇರಿಸಿದ್ದಾರೆ. "ಉಪನಿಷತ್ತಿನ ವ್ಯಾಸಂಗದಷ್ಟು ಕಲ್ಯಾಣದಾಯಕವಾದ ಮತ್ತು ಮೇಲ್ಮೆಗೆ ಕಾರಣವಾದ ವ್ಯಾಸಂಗವೂ ಇಡೀ ಪ್ರಪಂಚದಲ್ಲಿ ಮತ್ತಾವುದೂ ಇಲ್ಲ. ನನ್ನ ಜೀವನದಲ್ಲಿ ಆದರಿಂದ ಶಾಂತಿಲಭಿಸಿದೆ. ಮರಣಕಾಲದಲ್ಲೂ ಅದರಿಂದಲೇ ನನಗೆ ಶಾಂತಿ ಲಭಿಸುತ್ತದೆ"-ಎಂದು ಷೋಪನ್ಹಾರ್ ಹೇಳಿದ್ದಾನೆ.

ಭಾರತೀಯರ ವಿದ್ಯಾ ಪ್ರೇಮವು ಎಷ್ಟು ಗಾಢವಾದುದು ಎಂಬುದು ಪುರಾಣದ ಕಥೆಗಳಿಂದಲು ವ್ಯಕ್ತವಾಗುತ್ತದೆ. ಮಹರ್ಷಿ ಭರದ್ವಾಜನು ಗ್ರಂಥ ವ್ಯಾಸಂಗದಲ್ಲೇ ಮೂರು ಜನ್ಮಗಳನ್ನು ಕಳೆದು, ಮತ್ತೊಂದು ಜನ್ಮ ಲಭಿಸಿದರೆ ಅದನ್ನೂ ವ್ಯಾಸಂಗಕ್ಕಾಗಿಯೇ ಮುಡುಪಾಗಿಡುವೆನು ಎಂದು ಹೇಳಿದನಂತೆ ಜ್ಞಾನಕ್ಕೆ ಸಮಾನವಾದಂತಹ ಪವಿತ್ರ ವಸ್ತುವು ಮತ್ತೊಂದಿಲ್ಲ ಎಂಬುದು ಭಗವದ್ಗೀತೆಯ ಅಮೃತವಾಣಿಯಾಗಿದೆ.

ಒಂದು ಜನಾಂಗದ ಹಿರಿಮೆ, ಮೇಲ್ಮೆ ಹೆಚ್ಚಬೇಕಾದರೆ, ಆ ಜನರ ಜ್ಞಾನ ಭಂಡಾರವು ವೃದ್ಧಿಯಾಗುವುದು ಅತ್ಯವಶ್ಯಕ. ಜ್ಞಾನಭಂಡಾರವು ವೃದ್ಧಿಯಾಗುವುದಕ್ಕೆ ಉತ್ತಮವಾದ ಶಿಕ್ಷಣ ಪದ್ಧತಿಯೇ ಮುಖ್ಯ ಅವಲಂಬನ. ಜನಾಂಗದ ಉನ್ನತಿಯನ್ನು ಶಿಕ್ಷಣ ಪದ್ಧತಿಯಷ್ಟರ ಮಟ್ಟಿಗೆ ಮತ್ತಾವುದೂ ಪ್ರಭಾವಶಾಲೀ ಆಗಲಾರದು. ಶಿಕ್ಷಣ ಪದ್ಧತಿಲ, ಅದರ ಧ್ಯೇಯಗಳು, ಅದರ ನಿಯಮ- ನಿಬಂಧನೆಗಳು ಆಯಾ ಜನಾಂಗದ ಜಾಯಮಾನಕ್ಕೆ ವಿರುದ್ಧವಾಗಿರಬಾರದು. ಏಕೆಂದರೆ ವಿರುದ್ಧವಾಗಿರುವ ಶಿಕ್ಷಣ ಪದ್ಧತಿಯಿಂದ ಜನಾಂಗದ, ಕಲ್ಯಾಣ ಸಾಧನೆ ಆಗಲಾರದು. ಭಾರತದ ಜಾಯಮಾನಕ್ಕೆ ತಕ್ಕ ಶಿಕ್ಷಣ ಪದ್ಧತಿಯು ಏರ್ಪಟ್ಟದ್ದುದು ದೊಡ್ಡ ವೈಶಿಷ್ಟ್ಯ. 'ಶಿಕ್ಷಣ ವಿಜ್ಞಾನ ಸಂಬಂಧವಾಗಿ ಈಚಿನ ಶತಮಾನಗಳಲ್ಲಿ ಪಾಶ್ಚಾತ್ಯ ದೇಸಗಲ್ಲಿ ಪ್ರತಿಪಾದಿತವಾಗಿರುವ ಸಂಗತಿಗಳಲ್ಲಿ ಕೆಲವು ಪ್ರಾಚೀನ ಭಾರತದ ಶಿಕ್ಷಣ ಪದ್ಧತಿಯಲ್ಲಿ ಅಡಕವಾಗಿರುವುದನ್ನು ನೋಡಬಹುದು. ಪೆಸ್ಟಾಲಜಿಯು ಹುಟ್ಟುವುದಕ್ಕೆ ಎಷ್ಟೋ ಶತಮಾನಗಳ ಹಿಂದೆಯೇ ಭಾರತೀಯ ಶಿಕ್ಷಣ ಪದ್ಧತಿಯಲ್ಲಿ ಮಕ್ಕಳನ್ನು ಪ್ರೀತಿಯಿಂದ ಆದರಿಸಿ ಶಿಕ್ಷಣ ಕೊಡುತ್ತಿದ್ದರು. ಗುರುವೂ, ಗುರುಪತ್ನಿಯೂ ಶಿಷ್ಯರನ್ನು, ತಂದೆ

ತಾಯಿಗಳಂತೆ 'ವತ್ಸ' ಎಂದು ಸಂಭೋದಿಸಿ ತಮ್ಮ ಮಕ್ಕಳಂತೆ ಕಾಣುತ್ತಿದ್ದರು. "ಭಾರತದಲ್ಲಿ ಉಪಾಧ್ಯಾಯರು ಆಗಾಗ ಹಿರಿಯ ವಿದ್ಯಾರ್ಥಿಗಳಿಂದ ಕಿರಿಯ ವಿದ್ಯಾರ್ಥಿಗಳಿಗೆ ಪಾಠಹೇಳಿಸುವ ಪದ್ಧತಿ ಆಚರಣೆಯಲ್ಲಿತ್ತು. ಸುಲಭವಾಗಿ ಪಾಠಶಾಲೆಯ ಕೆಲಸ ನಡೆಯುವ ಆ ಕಾರ್ಯಕ್ರಮವನ್ನು 'ಹಿರಿಯಮಣಿಪದ್ಧತಿ' ಎಂಬ ಹೆಸರಿನಲ್ಲಿ ಭಾರತವನ್ನು ಅನುಸರಿಸಿ ಇಂಗ್ಲೇಂಡಿನಲ್ಲಿ ಆಂಡ್ರೋಬೆಲ್ ಎಂಬುವನಿಂದ ಆಚರಣೆಗೆ ತರಲ್ಪಟ್ಟಿತು. ಎಂದು ಎನ್.ಎನ್. ಮಜಮ್ ದಾರ ಹೇಳಿದ್ದಾರೆ

"ಭಾರತೀಯಲ್ಲಿ ಯಾರೂ ಸುಳ್ಳು ಹೇಳುವುದಿಲ್ಲ. ಸತ್ಯವನ್ನು ಅಡುವುದಲ್ಲಿ ಇತರ ಸದ್ಗುಣಗಳಲ್ಲಿ ಅವರಿಗೆ ಬಹಳ ಪ್ರೀತಿ. ಅವರು ಪ್ರಾಮಾಣಿಕರು. ಕಳವು ನಡೆಯುವುದಿಲ್ಲವಾದುದರಿಂದ ಮನೆಗಳಿಗೆ ಬೀಗ ಹಾಕಿಕೊಂಡು ಹೋಗಬೇಕಾದ ಅವಶ್ಯಕತೆಯಿಲ್ಲ. ಮನೆಗಳಿಗೆ ಕಾವಲು ಇರಬೇಕಾದುದಿಲ್ಲ. ಅವರ ವಶಕ್ಕೆ ಒಪ್ಪಿಸಿದ ಎಷ್ಟೋ ಅನರ್ಘ್ಯವಾದ ವಸ್ತುಗಳನ್ನೂ ಅವರು ಹಿಂತಿರುಗಿ ಕೊಡುತ್ತಾರೆ. ಸಾಕ್ಷಿಗಳಾಗಲಿ, ಮೊಹರುಗಳಾಗಲಿ, ಅನಾವಶ್ಯಕ" -ಎಂಬುದಾಗಿ ಮೆಗಾಸ್ತಾನೀಸ್ ಹೇಳಿದ್ದಾನೆ.

"ಭಾರತೀಯರು ಮೋಸ ಮಾಡುವುದಿಲ್ಲ. ನ್ಯಾಯಕ್ಕೆ ತಪ್ಪಿನಡೆಯುವುದಿಲ್ಲ. ಭಾರತೀಯ ವರ್ತಕರು ಅಪರಿಚಿತರಾದ ವಿದೇಶಿಯ ವರ್ತಕರ ಸಾಮಾನುಗಳನ್ನು ಕೂಡ ಮಾರಾಟಮಾಡಿ ಅವರಿಗೆ ಮೋಸ ಮಾಡದೆ ಹಣವನ್ನು ಕೊಡುತ್ತಿದ್ದರು"- ಎಂದು ಹ್ಯೂಯನ್ ತ್ಸಾಂಗ್ ಮತ್ತು ಮಾರ್ಕೋಪೋಲೋ- ಮುಂತಾದವರು ಬರೆದಿಟ್ಟಿದ್ದಾರೆ. "ಭಾರತದ ಬ್ರಾಹ್ಮಣ ವರ್ತಕರಷ್ಟು ಪ್ರಾಮಾಣಿಕರಾದ ವರ್ತಕರು ಇಡೀ ಪ್ರಪಂಚದಲ್ಲಿ ಮತ್ತಾವ ದೇಸದಲ್ಲೂ ಇರಲಿಲ್ಲವೆಂದು ಮಾರ್ಕೋಪೋಲೋ ಮುಂತಾದ ಪ್ರವಾಸಿಗಳು ಕೊಂಡಾಡಿದ್ದಾರೆ". ಬೇರೆ,ಬೇರೆ ಕಾಲಗಳಲ್ಲಿ ಬಂದ ಬೇರೆ,ಬೇರೆ ಮತಗಳ ಜನರೆಲ್ಲ ಭಾರತೀಯರ ಶೀಲ ಶುದ್ಧತೆಯನ್ನು ಏಕಪ್ರಕಾರವಾಗಿ ಕೊಂಡಾಡಿದ್ದಾರೆ. - ಹೀಗೆ ಭಾರತದ ಶಿಕ್ಷಣ ಪದ್ಧತಿಯು ರಾಷ್ಟ್ರಶೀಲವನ್ನು, ಉಚ್ಚಹಂತಕ್ಕೆ ಏರಿಸುವ ಧ್ಯೇಯ ಸಾಧನೆಯಲ್ಲಿ, ಅಸಾಧಾರಣವಾದ ರೀತಿಯಲ್ಲಿ ಯಶಸ್ವಿಯಾಗಿತ್ತೆಂದು ನಾವು ಧಾರಾಳವಾಗಿ ತರ್ಕಿಸಬಹುದು.

ಪ್ರಾಚೀನ ಹಾಗೂ ಮಧ್ಯಕಾಲೀನ ಯುಗಗಳಲ್ಲಿ ಕರ್ನಾಟಕವು ಸಹ ತನ್ನದೇ ಆದ ಶಿಕ್ಷಣ ವ್ಯವಸ್ಥೆಯನ್ನು ಹೊಂದಿತ್ತು. ಪ್ರಮುಖವಾಗಿ ಶೈವ ಮತ್ತು ವೈಷ್ಣವ ಮಠಗಳು ಶಿಕ್ಷಣವನ್ನು ಕೊಡುವ ವ್ಯವಸ್ಥೆಗಳನ್ನು ಹೊಂದಿದ್ದವು. ಅಂಥ ಕೇಂದ್ರಗಳಲ್ಲಿ ಸಾಮಾನ್ಯರಿಗೆ ಅವಕಾಶವಿತ್ತೇ ಎಂಬುವುದು

ಅನುಮಾನಾಸ್ಪದವಾದರೂ ಜಾಗೃತ ವರ್ಗದವರಿಗೆ ಶಿಕ್ಷಣ ಸವಲತ್ತುಗಳು ಮೀಸಲಾಗಿದ್ದವು. ಎನ್ನುವುದರಲ್ಲಿ ಸಂಶಯವಿಲ್ಲ. ಕಲಿಕೆಯಲ್ಲಿ ಸಂಪ್ರದಾಯಿಕ ವಿಷಯಗಳು ಪ್ರಧಾನವಾಗಿದ್ದವು. ವೇದಾಧ್ಯಾಯನ, ಕಲೆ, ಸಂಗೀತ, ಸಾಹಿತ್ಯ,- ಮುಂತಾದ ವಿಷಯಗಳಲ್ಲದೆ ವರ್ಗದ ಆಧಾರದ ಮೇಲೂ ಕೆಲವೊಮ್ಮೆ ಪಠ್ಯಗಳು ಜಾರಿಯಲ್ಲಿರುತ್ತಿದ್ದವು.

೧೬೭೨ ರಿಂದ ೧೭೦೪ ರವರೆಗೆ ಮೈಸೂರು ಸಂಸ್ಥಾನವನ್ನು ಆಳಿದ ಚಿಕ್ಕದೇವರಾಜ ಒಡೆಯರವರ ವಿದ್ಯಾಭ್ಯಾಸ ಕ್ರಮವನ್ನು ಅವರ ಮಂತ್ರಿಯಾಗಿದ್ದ ಪಂಡಿತ ತಿರುಮಾಲಾರ್ಯನ "ಚಿಕ್ಕದೇವರಾಜ ವಿಜಯ"ದಿಂದ ತಿಳಿಯಬಹುದಾಗಿದೆ. ಸಾಹಿತ್ಯದಲ್ಲಿ ಗಣಿತವನ್ನೂ ತಂದ ಶ್ರೇಯಸ್ಸು ನಮ್ಮ ಭಾಸ್ಕರ ಕವಿಗೆ ಸಲ್ಲಬೇಕು. ೧೬೭೦ರ ಸುಮಾರಿಗಿದ್ದ ಈ ಕವಿ ಗಣಿತಜ್ಞನೂ ಆಗಿದ್ದನು. "ಗಣಿತ ವಿಳಾಸ"ಅವನಿಗೆ ಕೊಟ್ಟ ಆಗಿನ ಬಿರುದು 'ಬೇಹಾರ ಗಣಿತ' ಎಂಬ ಕಾವ್ಯಮಯ ಗ್ರಂಥದಲ್ಲಿ ಅವನು ಗಣಿತವನ್ನು ವಿವರಿಸಿದ್ದಾನೆ

ಅಂದಿನ ರಾಜರು, ಸಿರಿವಂತರು ಮತ್ತು ದಾನಿಗಳು ಈ ಶಿಕ್ಷಣ ಸಂಸ್ಥೆಗಳಿಗೆ 'ಪುದವಟ್ಟು' ಕೊಡುವುದರಲ್ಲಿ ಪೈಪೋಟಿಯನ್ನು ನಡೆಸುತ್ತಿದ್ದರು. ಆಗಿನ ಕಾಲದಲ್ಲಿ ಜನಸಾಮಾನ್ಯರು ತಮಗೆ ಬೇಕಾದ ಶಿಕ್ಷಣವನ್ನೂ ಪಡೆಯಬಹುದಾಗಿತ್ತು. ತಾಳಗುಂದದ ಮಯೂರ ಶರ್ಮನು ತಮಿಳುನಾಡಿನ ಕಂಚಿಗೆ ವಿದ್ಯಾಭ್ಯಾಸಕ್ಕೆ ಹೋಗುವುದು ಅಂದು ಸಾಧ್ಯವಾಗಿತ್ತು. ಕಂಚಿಯಂತಹ ಘಟಿಕಾಸ್ಥಾನಗಳು ಆಗ ನಮ್ಮ ನಾಡಿನಲ್ಲಿಯೂ ಇದ್ದವು. ಗಂಗರಾಜರಲ್ಲಿ ಅನೇಕ ಬುದ್ಧಿವಂತ, ಸುಶಿಕ್ಷಿ ರಾಜಕುಮಾರರಿದ್ದ ಬಗ್ಗೆ ನಲ್ಲಾಳದ ಫಲಕವು ಹೇಳುತ್ತದೆ. ಅದು ಅಂದಿನ ಶಿಕ್ಷಣದ ಬಗ್ಗೆ ವಿಶೇಷ ಬೆಳಕನ್ನು ಚೆಲ್ಲುತ್ತದೆ.

ಬೌದ್ಧಕಾಲದಲ್ಲಿ ಬೌದ್ಧ ವಿಹಾರಗಳು ಮಹತ್ವದ ಶಿಕ್ಷಣ ಕೇಂದ್ರಗಳಾಗಿದ್ದವು. ಏಳನೆಯ ಶತಮಾನದಲ್ಲಿ ಪುಲಕೇಶಿಯ ರಾಜ್ಯದಲ್ಲಿ ೧೦೦ ಬೌದ್ಧವಿಹಾರಗಳು, ೫೦೦೦ ಯತಿಗಳು ಇದ್ದರೆಂದು ಆಗ ಕನ್ನಡನಾಡಿನಲ್ಲಿ ಪ್ರವಾಸ ಮಾಡಿದ ಹುಯೆನ್ ತ್ಸಾಂಗ್ ಹೇಳುತ್ತಾನೆ.

ಅಂದಿನ ಶಿಕ್ಷಣದ ಬಗೆಗೆ ಹೇಳುವಾಗ ಒಂದು ಮಾತು ನಿಜವಾಗಿಯೂ ಗಮನಾರ್ಹವಾಗಿದೆ. 'ವರ್ಣಮಾತ್ರಂ ಕಲಿಸಿದಾತಂ ಗುರು' ಎಂಬುದು ಅಂದಿನ ಕಲಿಯುವವನ ಭಾವನೆಯಾಗಿತ್ತು. ಬಸವಣ್ಣನವರ ಮಾತುಗಳಲ್ಲಿಯಂತೂ ಗುರುವು ಇನ್ನೂ ಹೆಚ್ಚಿನ ಮಹತ್ವವನ್ನು ಕಂಡಿದ್ದಾನೆ. ಅವರು ಹೇಳಿದರು "ಗುರು-

ಶಿಷ್ಯ ಸಂಬಂಧವಾಯಿತ್ತೆಂದೊಡೆ, ಕಿಚ್ಚಿನಲ್ಲಿ ಕೋಲ ಬಯ್ಚಿಟ್ಟಂತಿರಬೇಕು"-ಎಂದು ಗುರುವಿನ ತೊತ್ತಾಗಿ, ಗುಲಾಮನಾಗಿ ಗುರುಸೇವೆಯಿಂದ ವಿದ್ಯೆ ಪಡೆಯಬೇಕೆಂಬುದು ಅಂದಿನ ಶಿಕ್ಷಣ ತತ್ತ್ವಜ್ಞಾನವಾಗಿತ್ತು. ಗುರುವು ತನ್ನ ಶಿಷ್ಯನಿಂದ ನಿರೀಕ್ಷಿಸಿದ್ದು ಆಗ 'ಪರಾಜಯ'ವನ್ನು ತನಗಿಂತಲೂ ತನ್ನ ಶಿಷ್ಯ ಮುಂದುವರಿಯಬೇಕೆಂಬ ಕಳಕಳಿ ಅಂದಿನ ಶಿಕ್ಷಕರ ಚರಮಗುರಿಯಾಗಿತ್ತು. ವಿದ್ಯೆಯನ್ನು ಕಲಿಸುವುದು ವಿದ್ವಾಂಸರ ಕರ್ತವ್ಯವಾಗಿದ್ದಂತೆ, ತಾವು ಮಾತ್ರ ಕಲಿತು ಇತರರಿಗೆ ಕಲಿಸದವರು ಅಸ್ಪೃಶ್ಯರೆಂದು ಪುರಂದರದಾಸರ ಒಂದು ಪದದಲ್ಲಿ ಕಾಣಬಹುದು.

ಆಗಿನ ಶಿಕ್ಷಣವು ಅನೇಕ ಧ್ಯೇಯಗಳಿಂದ ಕೂಡಿದ್ದಿತಾದರೂ, ಒಂದು ಮುಖ್ಯ ಉದ್ದೇಶ ಅಲ್ಲಿ ಆಗಾಗ ಧ್ವನಿತವಾಗುತ್ತದೆ. ಪಂಚಮುಖಿಯವರ ಮಾತಿನಲ್ಲಿ ಹೇಳಬೇಕೆಂದರೆ, ಆಗಿನ "ಶಿಕ್ಷಣದ ಮುಖ್ಯ ಧ್ಯೇಯವು -ಅಜ್ಞಾನ-ವಿಪರೀತ ಜ್ಞಾನಗಳನ್ನು ಹೋಗಲಾಡಿಸಿ, ತತ್ತ್ವಜ್ಞಾನದಿಂದ ಆಯಾ ವ್ಯಕ್ತಿಗೆ ಯೋಗ್ಯವಾದ ಸ್ವರೂಪಾನಂದವನ್ನು ಅನುಭವಕ್ಕೆ ತಂದು ಕೊಳ್ಳುವದಾಗಿದೆ. ಅಂತಹ ಒಂದು ವಿಶಿಷ್ಟ ಶಿಕ್ಷಣ ಪದ್ಧತಿ ಇದ್ದಿತೆಂದೇ ಅನೇಕ ವಿದ್ವಾಂಸರು, ವೀರರು, ತ್ಯಾಗಿಗಳು, ಕಲಾವಿದರು, ಸಾಹಸಿಗಳು, -ನಮ್ಮಲ್ಲಿ ಹುಟ್ಟಿ ಈ ನಾಡಿನ ಕೀರ್ತಿ, ಪತಾಕೆಯನ್ನು ದಿಗ್ದೇಶಗಳಲ್ಲಿ ಬೆಳಗಿದ್ದಾರೆ.

ತೈತ್ತರೀಯ ಉಪನಿಷತ್ತಿನಲ್ಲಿ ದೊರೆಯುವ ಒಂದು ಗುರೂಪದೇಶ, ಅಂದಿನ ಗುರುಗಳ ಮಾರ್ಗದರ್ಶನದ ರೀತಿಯನ್ನು ವಿವರಿಸುತ್ತದೆ. ಸಮಾವರ್ತನವೆಂದು ಕರೆಯಲ್ಪಡುವ ಆ ಸಮಾರಂಭದಲ್ಲಿ ಗುರುವು ಹೇಳುವ ಅನೇಕ ಮಾತುಗಳಲ್ಲಿಯ ಈ ನಾಲ್ಕು ಮಾತುಗಳು ಇಂದಿಗೂ ಪಥ್ಯವಾಗಬೇಕಾಗಿದೆ.

"ಮಾತೃದೇವೋಭವ
ಪಿತೃದೇವೋಭವ
ಆಚಾರ್ಯದೇವೋಭವ
ಅತಿಥಿ ದೇವೋಭವ".

ಈ ಉದಾತ್ತ ಉಪದೇಶವು ಇಂದಿನ ನಮ್ಮ ಹೊಸ ಪೀಳಿಗೆಗೆ ಪ್ರಮುಖ ದಾರಿದೀಪವಾಗ ಬೇಕಾಗಿದೆ. ಒಟ್ಟಿನಲ್ಲಿ ಪ್ರಾಚೀನ ಕಾಲದ "ಭಾರತೀಯರು ವಿದ್ಯೆಯೇ ಕಲ್ಪತರು" ಎಂದು ಭಾವಿಸಿ ಆಗಿನ ಕಾಲ ಪರಿಸ್ಥಿತಿಗೆ ತಾವು ಅತ್ಯುತ್ತಮವೆಂದು ಭಾವಿಸಿದ ಶಿಕ್ಷಣ ಪದ್ಧತಿಯನ್ನು ಏರ್ಪಡಿಸಿದ್ದರು.

## ೫.೬ ಆಧುನಿಕ ಭಾರತದ ಶಿಕ್ಷಣ ಪದ್ಧತಿ

'ಶಿಕ್ಷಣ'ಎನ್ನುವ ಪದಕ್ಕೆ ಒಂದು ನಿರ್ದಿಷ್ಟ ಅರ್ಥ ಹೇಳುವುದು ಕಠಿಣವಾದ ಕಾರ್ಯವಾಗಿದೆ. ನಮಗೆಲ್ಲಾ ಸಾಮಾನ್ಯವಾಗಿ ಶಿಕ್ಷಣ ಎನ್ನುವ ಪದಕ್ಕೆ ಅರ್ಥ ತಿಳಿದಿರುತ್ತದೆ. 'ಶಿಕ್ಷಣ'ಎಂಬ ಪದದ ಮೂಲ ಇಂಗ್ಲೀಷಿನ ಶಬ್ದ 'ಎಜುಕೇಶನ್ ' ಎಂದಾಗುತ್ತದೆ. ಅಂದರೆ ಬೆಳೆಯಿಸು ಎಂದರ್ಥ. ಅಂದರೆ ಮಗುವಿಗೆ ಕೆಲವು ನಿರ್ದಿಷ್ಟಾರ್ಥ. ವಿಶ್ವದ ವಿವಿಧ ತತ್ವಜ್ಞಾನಿಗಳು, ಶಿಕ್ಷಣ ತಜ್ಞರು, ಜ್ಞಾನಿಗಳು, ರಾಜಕಾರಣಿಗಳು, ಧರ್ಮಗುರುಗಳು-ತಮ್ಮ ವಿಚಾರಕ್ಕನುಗುಣವಾಗಿ ಹಾಗೂ ಪರಿಸ್ಥಿತಿಗನುಗುಣವಾಗಿ ತಾವು ಎದುರಿಸುವ ಸಂದರ್ಭಗಳನ್ನು ಸಾರವಾಗಿ ಬೇರೆ ಬೇರೆ ಅರ್ಥಗಳನ್ನು ಶಿಕ್ಷಣಕ್ಕಾಗಿ ನೀಡಿದ್ದಾರೆ. ಏಕೆಂದರೆ ಪ್ರಾಚೀನ ಕಾಲದಿಂದ, ಇಂದಿನ ಆಧುನಿಕ ವಿಜ್ಞಾನಯುಗದವರೆಗೂ ಅವ್ಯಾಹಿತವಾಗಿ ನಡೆದುಬಂದಿರುವ ಒಂದು ನಿರಂತರ ಯೋಜನೆ ಶಿಕ್ಷಣವಾಗಿದೆ. ಶಿಕ್ಷಣವು ಎಷ್ಟೋ ಶತಮಾನಗಳಿಂದ ನಡೆದು ಬಂದಿರುವ ದಾರಿಕಾರನಂತಿದೆ. ಅದರ ಅನುಭವ ಅಪಾರವಾಗಿದೆ. ಅದರ ಆಯುಷ್ಯ ಅನಂತವಾಗಿದೆ. ಒಂದೊಂದು ಜನಾಂಗದ ಸ್ವಭಾವ ಪರಿಸ್ಥಿತಿಗಳಿಗೆ ಅನುಗುಣವಾಗಿ ಅದರದರ ಆಲೋಚನಾಲಹರಿ ಹಾಗೂ ಧ್ಯೇಯಗಳು ಇರುತ್ತವೆ. ಪ್ರತಿಯೊಂದು ಜನಾಂಗದವರೂ ತಾವು ಉತ್ತಮವೆಂದು ಭಾವಿಸಿದ, ಹಾಗೂ ತಮ್ಮ ಆದರ್ಶ ಧ್ಯೇಯಗಳ ಜೀವಸ್ವರದಂತಿರುವ ಶಿಕ್ಷಣ ಪದ್ಧತಿಯನ್ನೇ ಏರ್ಪಡಿಸಿ ಕೊಂಡಿರುತ್ತಾರೆ. ಪ್ರಾಚೀನ ಕಾಲದ ಭಾರತೀಯರೂ ತಮಗೆ ಉತ್ತಮವೆಂದು ತೋರಿದ ಶಿಕ್ಷಣ ಪದ್ಧತಿಯೊಂದನ್ನು ಏರ್ಪಡಿಸಿಕೊಂಡು ಯಶಸ್ವಿಗಳಾಗಿದ್ದರು.

ಆದರೆ ಇಂದಿನ ಶಿಕ್ಷಣ ಪದ್ಧತಿ ಕಾಲ ಹಾಗೂ ಪರಿಸ್ಥಿತಿಗನುಸಾರವಾಗಿ ಭಾರತದಲ್ಲಿ ಪ್ರಾಚೀನತೆಯಿಂದ ಆಧುನಿಕತೆಯನ್ನು ಕಂಡಿದೆ. ಭಾರತಕ್ಕೆ ಬಂದ ಪಾಶ್ಚಾತ್ಯರಿಂದ ಈ ಬದಲಾವಣೆ ಇನ್ನೂ ಅನಂತ ಕಾಲದವರೆಗೂ ಶಿಕ್ಷಣ ನಾಶವಿಲ್ಲದೆ ನಡೆಯುವದಾಗಿದೆ. ಶೈಕ್ಷಣಿಕ ತಜ್ಞರು ತಮ್ಮ ತತ್ವದಂತೆ ಅದನ್ನು ವರ್ಣಿಸಿದ್ದಾರೆ. ಜೀವನದ ವಿವಿಧ ಹಂತಗಳಲ್ಲಿ ಅದು ನಮಗೆ ಸಹಕಾರಿಯಾಗುತ್ತದೆಂಬುದನ್ನು ವೇದಗಳ ಕಾಲದಿಂದ ಭಾರತೀಯರು ಬಲ್ಲರು. ಪ್ರತಿಯೊಂದು ದೇಶಕ್ಕೂ ಅದರ ಸ್ವಂತ ಧ್ಯೇಯಗಳಿರುತ್ತವೆ. ಈ ಧ್ಯೇಯಗಳು ಆಯಾದೇಶದ ಭಾವನೆಗೆ ಅನುಸಾರವಾಗಿ ಇರುತ್ತವೆ. ಅಲ್ಲದೆ ಶಿಕ್ಷಣವು ಪ್ರತಿಯೊಂದು ದೇಶದ ಸರ್ವತೋಮುಖ ಅಭಿವೃದ್ಧಿಗೆ ಪ್ರಮುಖವಾಗಿರುತ್ತದೆ.

ಆಧುನಿಕ ಪ್ರಪಂಚದಲ್ಲಿ ಮುನ್ನಡೆದವರು ಪಾಶ್ಚಾತ್ಯರು. ಅವರು ಮುನ್ನಡೆಗೆ ಅವರಲ್ಲಿ ಪ್ರಸಾರಗೊಂಡ ಶಿಕ್ಷಣವೇ ಪ್ರಮುಖ ಕಾರಣ. ಬ್ರಿಟಿಷರು ಭಾರತದಲ್ಲಿ ಒಂದು ರಾಜಕೀಯ ಶಕ್ತಿಯಾಗಿ ಬೆಳೆಯುವವರೆಗೂ ಇಲ್ಲಿನ ಹಿಂದೂಗಳು ಮತ್ತು ಮುಸ್ಲಿಮರು ತಮ್ಮದೇ ಆದ ರೀತಿಯ ಶಿಕ್ಷಣ ಸಂಸ್ಥೆಗಳನ್ನು ಹೊಂದಿದ್ದರು. ಹಿಂದೂಗಳ ಶಿಕ್ಷಣ ಸಂಸ್ಥೆಗಳನ್ನು 'ಪಾಠಶಾಲೆ'ಗಳೆಂದು ಕರೆಯುತ್ತಿದ್ದರು. ಅವುಗಳಲ್ಲಿ ಪಂಡಿತರು ಸಂಸ್ಕೃತದಲ್ಲಿ ಧಾರ್ಮಿಕ ವಿಷಯಗಳಿಗೆ ಸಂಬಂಧಪಟ್ಟ ಶಿಕ್ಷಣ ನೀಡುತ್ತಿದ್ದರು. ಬಹುತೇಕವಾಗಿ ಹಿಂದೂಗಳಿಗೆ 'ದೇವಾಲಯಗಳು' ಪಾಠಶಾಲೆಗಳ ಮುಖ್ಯ ಕೇಂದ್ರಗಳಾಗಿದ್ದವು. ರಾಜರು ಅಥವಾ ಧನಿಕರು ನೀಡುತ್ತಿದ್ದ ಭತ್ಯೆ ಪಡೆದ ಬ್ರಾಹ್ಮಣರು ಉಪಾಧ್ಯಾಯರಾಗಿದ್ದರು. ಮುಸ್ಲಿಮರು ಶಿಕ್ಷಣ ಸಂಸ್ಥೆಗಳನ್ನು 'ಮುಕ್ತಾಬ್'ಗಳು ಮತ್ತು 'ಮದರಸಾ'ಗಳೆಂದು ಕರೆಯುತ್ತಿದ್ದರು. ಅವು ಹೆಚ್ಚು ಮಸೀದಿಗಳಲ್ಲಿ ನಡೆಯುತ್ತಿದ್ದವು. ಮುಸ್ಲಿಂ ಮೌಲ್ವಿಗಳು ಅಲ್ಲಿ ಪರ್ಶಿಯಾನ್ ಮತ್ತು ಧರ್ಮಶಾಸ್ತ್ರ ಬೋಧಿಸುತ್ತಿದ್ದರು. ಈ ದೇಶೀಯ ಪದ್ಧತಿಯ ಶಿಕ್ಷಣ ಸಂಸ್ಥೆಗಳಲ್ಲಿ ಸ್ತ್ರೀಯರಿಗೂ ಹರಿಜನರಿಗೂ ಅವಕಾಶವಿರಲಿಲ್ಲ.

ಭಾರತದಲ್ಲಿ ಬ್ರಿಟಿಷ್ 'ಕಂಪನಿ'ಯ ಆಡಳಿತವು ಅಧಿಕಾರಕ್ಕೆ ಬಂದಾಗ ಈ ದೇಶದಲ್ಲಿ ಆಂಗ್ಲ ಶಿಕ್ಷಣ ಕ್ರಮವನ್ನು ಜಾರಿಗೊಳಿಸಲು ಹಾತೊರೆಯಿತು. ೧೮೧೩ರ ನಂತರ ಕಂಪನಿಯ ಶಿಕ್ಷಣ ನೀತಿಯಲ್ಲಿ ಮಾರ್ಪಾಡು ಕಂಡುಬಂದಿತು. ಭಾರತದಲ್ಲಿ ಶಿಕ್ಷಣದ ವಿಸ್ತಾರಣೆಯ ಬಗ್ಗೆ ಬ್ರಿಟಿಷ್ ಸರಕಾರಕ್ಕೆ ಮೇಲಿಂದ ಮೇಲೆ ಅಧಿಕಾರಿಗಳಿಂದ ಒತ್ತಾಯ ಬರುತ್ತಲೇ ಇತ್ತು. ಇದರ ಫಲವಾಗಿ ಭಾರತದಲ್ಲಿ ವಿದ್ಯಾಭ್ಯಾಸದ ಖರ್ಚಿಗಾಗಿ ವರ್ಷಕ್ಕೆ ಒಂದು ಲಕ್ಷ ರೂಪಾಯಿಯನ್ನು ಬ್ರಿಟಿಷ್ ಸರ್ಕಾರ ೧೮೧೩ರ ಸಂಸತ್ತಿನ ಶಾಸನದಲ್ಲಿ ಒದಗಿಸಿತ್ತು. ಆದರೆ ವಿದ್ಯಾಭ್ಯಾಸ ಯಾವ ಭಾಷೆಯಲ್ಲಿರಬೇಕೆಂಬುದು ವ್ಯವಸ್ಥಿತಗೊಳ್ಳದೆ, ಆ ಹಣ ಸುಮಾರು ಇಪ್ಪತ್ತು ವರ್ಷಗಳು ಶೇಖರಣೆಯಾಯಿತು. ಈ ಮಧ್ಯೆ ವಿದ್ಯಾಭ್ಯಾಸದ ಮಾಧ್ಯಮದಲ್ಲಿ ವಿವಾದ ಪ್ರಾರಂಭವಾಗಿ ಓರಿಯಂಟಲಿಸ್ಟ್ ಮತ್ತು ಆಂಗ್ಲಿಸಿಸ್ಟ್ಸ್ ಎಂಬ ಎರಡು ವಿರೋಧ ಪಂಗಡಗಳು ಹುಟ್ಟಿಕೊಂಡವು. ಭಾರತದಲ್ಲಿನ ವ್ಯಾಸಂಗ ದೇಶೀಯವಾಗಿರಬೇಕೆಂಬುದೇ ಓರಿಯಂಟಲಿಸ್ಟ್ ರ ಅಭಿಮತ. ಆದರೆ ಇಂಗ್ಲೀಷ್ ಮಾಧ್ಯಮದ ಅವಶ್ಯಕತೆಯನ್ನು ಪ್ರತಿಪಾದಿಸಿದವರು ಆಂಗ್ಲಿಸಿಸ್ಟ್ಸ್ ರು. ಅವರ ನಾಯಕ ಮೆಕಾಲೆ.

ಭಾರತದ ಈಗಿನ ವಿದ್ಯಾಭ್ಯಾಸ ಪದ್ಧತಿಯನ್ನು ರೂಪಿಸಿದವನು ಮೆಕಾಲೆ. ಮತ್ತು ಅದನ್ನು ಆಚರಣೆಗೆ ತರಬೇಕು ಎಂದು ಅನುಮೋದಿಸಿ ಒತ್ತಾಸೆ ಕೊಟ್ಟವನು ವುಡ್. ಆಗಿನಿಂದ ಅದರಲ್ಲಿ ಕೆಲವು ಮಾರ್ಪಾಟುಗಳು ನಡೆದಿದ್ದರೂ, ಅದು ಈಗಲೂ ಬಹುಮಟ್ಟಿಗೆ ಮೆಕಾಲೆಯು ರೂಪಿಸದಂತೆಯೇ ಇದೆ. ರಾಜಾರಾಮ್

ಮೋಹನರಾಯ್ ಅವರು ಇಂಗ್ಲೀಷ್ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಿ ಮೆಕಾಲೆಯ ಪದ್ಧತಿಗೆ ಪುಷ್ಟಿಕೊಟ್ಟರು ಎಂಬುವುದನ್ನು ಮರೆಯುವಂತಿಲ್ಲ. ಭಾರತದಲ್ಲಿ ಈಗ ಆಚರಣೆಯಲ್ಲಿರುವ ಶಿಕ್ಷಣ ಪದ್ಧತಿಯಲ್ಲಿ ಗುಣಭಾಗವು ಗಣನೀಯವಾಗಿದ್ದರೂ, ಒಂದೆರಡು ಸಂಗತಿಗಳನ್ನು ಮರೆಯುವಂತಿಲ್ಲ. ಈ ಶಿಕ್ಷಣ ಪದ್ಧತಿಯು 'ಈಸ್ಟ್ ಇಂಡಿಯಾ ಕಂಪನಿಗೆ ಗುಮಾಸ್ತರು ಮತ್ತಿತರ ಕೆಲಸಗಳಿಗೆ ಬೇಕಾಗಿದ್ದ ಜನರನ್ನು ಒದಗಿಸುವ ತಾತ್ಕಾಲಿಕ ಪ್ರಯೋಜನ ದೃಷ್ಟಿಯಿಂದ ರೂಪಿತವಾಯಿತು. ಭಾರತೀಯ ಮತ್ತಿತರ ಪೌರಸ್ತ್ಯ ನಾಗರಿಕತೆಗಳು ತೀರ ನಿಕೃಷ್ಟವಾದುವು. ಪಾಶ್ಚಾತ್ಯರು ಅತ್ಯಂತ ಶ್ರೇಷ್ಠರು, ಅವರ ನಡೆ, ನುಡಿಗಳ ಅನುಕರಣದಿಂದಲೇ ಭಾರತೀಯರು ಉದ್ಧಾರವಾಗಬೇಕು, ಎಂಬ ಭಾವನೆಯು ಅದಕ್ಕೆ ಮೂಲವಾಗಿತ್ತು.

ಕ್ರಿ.ಶ. ಹತ್ತೊಂಬತ್ತನೆ ಶತಮಾನದಲ್ಲಿ ನಡೆದ ಯುದ್ಧಗಳಲ್ಲಿ ಪಡೆದ ವಿಜಯ, ಕೈಗಾರಿಕಾ ಕ್ರಾಂತಿಯ ಫಲವಾಗಿ ಸಂಪತ್ತಿನವೃದ್ಧಿ, ಇವುಗಳಿಂದ ಇಂಗ್ಲೀಷರಿಗೆ ತಮ್ಮ ಜನಾಂಗವು ಅತ್ಯಂತ ಶ್ರೇಷ್ಠ ಎಂಬ ದುರಹಂಕಾರ ತುಂಬಿತ್ತು. ಜೊತೆಗೆ ಭಾರತವೇ ಮುಂತಾದ ಜನಾಂಗಗಳು ತೀರ ನಿಕೃಷ್ಟವಾದ ಅನಾಗರಿಕ ಜನಾಂಗಗಳೆಂಬ ತಿರಸ್ಕಾರವೂ ತುಂಬಿತ್ತು. ಆ ಭಾವನೆಯ ಪ್ರತೀಕವಾಗಿದ್ದ ಮೆಕಾಲೆಯು ಭಾರತೀಯರ ಸ್ವಭಾವ, ಅದರಲ್ಲಿ ಅನೂಚಾನವಾಗಿ ಬಂದಿದ್ದ ಶಿಕ್ಷಣ ಪದ್ಧತಿಯನ್ನು ರೂಪಿಸಿ, ಅದರ ಸ್ಥಾನದಲ್ಲಿ ಒಳಪಡುವಂತೆ ಮಾಡಿದ್ದನು. "ಬ್ರಿಟಿಷರ ನಾಗರಿಕತೆಯ ಗಿಡವನ್ನು ಅದಕ್ಕೆ ಒಗ್ಗದ ಭಾರತ ಭೂಮಿಯಲ್ಲಿ ಬೆಳೆಸಬೇಕಾಗಿದ್ದರೆ ಬೀಜವನ್ನು ನೆಟ್ಟು ಆ ರೀತಿ ಮಾಡಬೇಕಾಗಿತ್ತೇ ಹೊರತು, ಬೇರೆ ಕಡೆ ಬೆಳೆದ ಮರ-ಕೊಂಬೆಗಳನ್ನು ನೆಟ್ಟು ಬೆಳೆಸಬಾರದಾಗಿತ್ತೆಂಬುದು ಅವರಿಗೆ ತೋರದೆ ಹೋಯಿತು".

ಇಂಗ್ಲೀಷ್ ವಿದ್ಯಾಭ್ಯಾಸದ ಬಗ್ಗೆ ಜವಾಹರಲಾಲ್ ನೆಹರೂರವರ ಅಭಿಪ್ರಾಯ ಈ ರೀತಿ ಇದೆ. "ಇಂಗ್ಲೀಷ್ ವಿದ್ಯಾಭ್ಯಾಸದಿಂದ ಭಾರತೀಯರ ಮನಸ್ಸಿನ ದಿಗಂತವು ವಿಸ್ತಾರವಾಯಿತು. ಭಾರತೀಯರು ಇಂಗ್ಲೀಷ್ ಸಾಹಿತ್ಯವನ್ನೂ, ಇಂಗ್ಲೀಷರ ಸಂಸ್ಥೆಗಳನ್ನೂ ಮೆಚ್ಚಿಕೊಳ್ಳುವಂತಾಯಿತು. ಭಾರತೀಯ ಜೀವನದಲ್ಲಿ ನೆಲಸಿದ್ದ ಕೆಲವು ಕೆಟ್ಟ ಪದ್ಧತಿಗಳನ್ನು, ಕೆಲವು ಹೇಯ ಭಾವನೆಗಳನ್ನು ಕಂಡು ಅಸಹ್ಯಪಟ್ಟು ಅವುಗಳನ್ನು ಹೋಗಲಾಡಿಸುವ ಪ್ರಯತ್ನಗಳನ್ನು ನಡೆಯಿಸುವಂತಾಯಿತು. ರಾಜಕೀಯ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಪ್ರೇರಣೆ ದೊರೆಯಿತು. ಇಂಗ್ಲೀಷ್ ವಿದ್ಯಾಭ್ಯಾಸದಿಂದ ಪಾಶ್ಚಾತ್ಯರ ಉದಾರಭಾವಗಳು ಭಾರತೀಯರಿಗೆ ಗೊತ್ತಾದುವು. ಚಿರಕಾಲದಿಂದ ಮಲಗಿ ನಿದ್ರಿಸುತ್ತಿದ್ದ ಭಾರತೀಯರನ್ನು ಬಡಿದೆಬ್ಬಿಸಿದವು. ಅವರ ಮನಸ್ಸನ್ನು ಕಲಕಿದುವು. ಎಚ್ಚೆತ್ತ ಭಾರತೀಯರು ಪೂರ್ವಸಂಪ್ರದಾಯಗಳ ಗುಣದೋಷಗಳ ವಿಮರ್ಶೆ ಮಾಡಲು

ಆರಂಭಿಸಿದರು. ಭವಿಷ್ಯದ ಆಶೋತ್ತರಗಳನ್ನು ಕಲ್ಪಿಸಿಕೊಂಡು. ಕೇಳಿದುದನ್ನೆಲ್ಲಾ ನಂಬುತ್ತಿದ್ದುದನ್ನು ಬಿಟ್ಟು ವಿಚಾರಮಾಡಿ ವಿವೇಚಿಸಿ ನೋಡಲು ಆರಂಭಿಸಿದರು. ಅಂಧಶ್ರದ್ಧೆಗೆ ಬದಲಾಗಿ ವಿಜ್ಞಾನದಲ್ಲಿ ವಿಶ್ವಾಸವಿಟ್ಟರು. ನಿಲುಗಡೆಯಲ್ಲಿದ್ದ ಮನಸ್ಸನ್ನು ಪ್ರಗತಿಯ ಕಡೆಗೆ ಹರಿಯಬಿಟ್ಟರು. ಕೆಟ್ಟ ಪದ್ಧತಿಗಳೆಂದು ಕಂಡುಬಂದವುಗಳನ್ನೆಲ್ಲಾ ಬಿಟ್ಟು ಸುಧಾರಣೆಗಳನ್ನು ಆಚರಣೆಗೆ ತರಬೇಕೆಂಬ ತೀವ್ರಭಿಲಾಷೆಯಿಂದ ಕಳಕಳಿಸತೊಡಗಿದರು. ಬಹುಕಾಲದಿಂದ ನಡೆದು ಬಂದಿದ್ದ ಅಲಸತನ, ಉದಾಸೀನತೆ, ಸಮಾಜದಲ್ಲಿ ನೆಲಸಿದ್ದ ನಡೆವಳಿಕೆಗಳೆಲ್ಲವೂ ಶ್ರೇಷ್ಠವೆಂಬ ಮನೋಧರ್ಮ, ಎಲ್ಲವನ್ನೂ ಬಿಟ್ಟು ಬಿಟ್ಟರು. ಶಾಸ್ತ್ರಗಳ ವಿಚಾರದಲ್ಲಿ ಸಂಪ್ರದಾಯಬದ್ಧವಾಗಿ ಹಲವು ತಲೆಮಾರುಗಳಿಂದ ಬಂದಿದ್ದ ಅರ್ಥ ಸರಿಯೇ ಅಥವಾ ತಪ್ಪೇ ಎಂಬ ವಿಚಾರ ಸರಣಿಯು ಪ್ರಾರಂಭವಾಯಿತು. ವಿವೇಚನೆ ಮಾಡದೆ ಹಿಂದಿನ ಪದ್ಧತಿ, ನಂಬಿಕೆಗಳನ್ನು ಬಿಟ್ಟು ಭಾರತೀಯರು ನೀತಿ ಹಾಗೂ ಮತ ಸಂಬಂಧವಾದ ವಿಚಾರಗಳಲ್ಲಿ ನೂತನ ಭಾವನೆಗಳನ್ನು ಕುದುರಿಸಿಕೊಂಡರು"- ಎಂಬುದಾಗಿ ಜವಾಹರಲಾಲ್ ನೆಹರು ಹೇಳಿದ್ದಾರೆ. ಭಾರತದಲ್ಲಿ ಶಿಕ್ಷಣವು ಇಂಗ್ಲೀಷ್ ಭಾಷೆಯಲ್ಲಿ ನಡೆಯುಬೇಕೆಂಬ ಸಲಹೆಗೆ ರಾಜರಾಮ ಮೋಹನರಾಯರ ಒತ್ತಾಸೆಯೂ ಇತ್ತು. ಪಾಶ್ಚಾತ್ಯ ವಿಜ್ಞಾನ, ಭಾವನೆಗಳ ಪರಿಚಯವಾಗಲು ಇಂಗ್ಲೀಷ್ ಭಾಷೆಯಿಂದ ಅನುಕೂಲವಾಯಿತು. ಅದರಿಂದ ಭಾರತೀಯ ಸಂಸ್ಕೃತಿಯು ಪುಷ್ಟೀಯಾಯಿತು.

ಆದರೆ, ಭಾರತೀಯ ವಿದ್ಯಾರ್ಥಿಗಳಿಗೆ ಅವರ ಪ್ರಾಚೀನ ಸಂಸ್ಕೃತಿಯ ಅವಲಂಬನೆ ಹೋಗಿ, ಅದಕ್ಕೆ ಬದಲಾಗಿ ಅನ್ವಯಿಸಿದ ಧ್ಯೇಯಗಳು ಭಾರತದ ಜಾಯಮಾನಕ್ಕೆ ಹೊಂದದೆ ಹೋದುವು. ಇಂಗ್ಲೀಷ್ ಭಾಷೆಯ ಮೂಲಕ ವಿದ್ಯಾಭ್ಯಾಸವನ್ನು ಪಡೆದವರು ಸ್ವದೇಶವಾದ ಭಾರತದಲ್ಲಿದ್ದೂ ತಾವು ಆ ಭಾಷೆಯನ್ನು ಅರಿಯದ ತಮ್ಮ ಬಂಧು ಮಿತ್ರರಿಗಿಂತ ಮೇಲು ಎಂಬ ಭಾವನೆಯಿಂದ ಕೂಡಿ, ಇಂಗ್ಲೀಷ್ ರಲ್ಲಿದ್ದ ಒಳ್ಳೆಯ ಗುಣಗಳನ್ನು ಬಿಟ್ಟು ಕೆಟ್ಟ ಗುಣಗಳನ್ನೇ ಅನುಕರಣ ಮಾಡ ತೊಡಗಿದರು. ತಮ್ಮವರೊಡನೆ ಕಲೆತು ಮೊದಲಿನಂತೆ ವರ್ತಿಸುವುದು ಅವರಿಗೆ, ಅವಶ್ಯಕವಾಯಿತು. ಸಮಾಜಕ್ಕೆ ಅವರಿಂದ ಸೇವೆ ಸಲ್ಲುವುದಕ್ಕೆ ಬದಲಾಗಿ ಸಮಾಜಕ್ಕೆ ಅವರು ಹೊರೆಯಾದರು. ಸಮಾಜದಿಂದಲೇ ಅವರು ಆದಷ್ಟು ಪ್ರಯೋಜನವನ್ನು ಪಡೆಯಲು ಯತ್ನಿಸಿದರು. ಅವರದ್ದು ಪೌರಸ್ತ್ಯದೇಶದ ಮನಸ್ಸು ಆದರೂ ಅದರೊಳಗೆ ತುಂಬಿದ್ದವುಗಳು ಪಾಶ್ಚಾತ್ಯರ ಮನಸ್ಸಿನ ಸಂಗತಿಗಳು. ಈ ಇಚ್ಛೋತೆಯ ದೆಸೆಯಿಂದ ಅವಾಂತರವಾಯಿತು.

ಇಂಗ್ಲೀಷ್ ಭಾಷೆಯಲ್ಲಿ ಶಿಕ್ಷಣ ಪಡೆದವರ ಪ್ರತ್ಯೇಕತೆಯ ಭಾವನೆಯ ಪರಿಣಾಮವಾಗಿ ಸಮಾಜದಲ್ಲಿ ಅವರದೇ ಒಂದು ಇತರರದೇ ಒಂದು ವರ್ಗ ಆಯಿತು. ಸಮಾಜವು ಈ ರೀತಿ ಒಡೆದು ಎರಡು ಹೋಳುಗಳಾದ ಪ್ರಯುಕ್ತ ಮೊದಲಿನ ಐಕ್ಯತೆಯು ಕಡಿಮೆಯಾಗಿ ಸಮಾಜದ ಬೆಳವಣಿಗೆಗೆ ಹಾಗೂ ಅಭ್ಯುದಯ ಸಾಧನೆಗೆ ಅಡಚಣೆ ಉಂಟಾಯಿತು. ಅನೇಕ ಭಾಷೆಗಳ ಸಾರವನ್ನು ಹೀರಿ ಬೆಳೆದಿರುವ ಇಂಗ್ಲೀಷ್ ಭಾಷೆಯನ್ನು ಬೋಧನ ಭಾಷೆಯಾಗಿ ಗೊತ್ತು ಮಾಡಿದುದರಿಂದ ಅನೇಕ ಪ್ರಯೋಜನಗಳೇನೋ ಆದರೂ, ಅದರಲ್ಲಿ ಕ್ಲೇಶವೂ ಹೆಚ್ಚು. ಈಗಿನ ವಿದ್ಯಾಭ್ಯಾಸ ಕ್ರಮದಲ್ಲಿ ವಿದ್ಯಾರ್ಥಿಗಳಿಗೂ ಉಪಾಧ್ಯಾಯರಿಗೂ, ಪ್ರಾಚೀನ ಭಾರತದ ಶಿಕ್ಷಣ ಪದ್ಧತಿಯ ಗುರುಶಿಷ್ಯರಿಗಿದ್ದ ಸುಮಧುರ ಬಾಂಧವ್ಯ ಇಂದು ಇಲ್ಲದಂತಾಗಿದೆ. ವಿದ್ಯಾರ್ಥಿಗಳ ಆಸಕ್ತಿಯೂ ಸಹ ಇಂದು ಕಡಿಮೆಯಾಗಿದೆ. ಪ್ರಾಚೀನ ಕಾಲದ ಗುರುಕುಲ ಪದ್ಧತಿಗೂ ಇಂದಿನ ವಿದ್ಯಾಭ್ಯಾಸದ ಪದ್ಧತಿಗೂ ಅಜಾಗಜಾಂತರ ವ್ಯತ್ಯಾಸವುಂಟಾಗಿದೆ. ಇದಕ್ಕೆಲ್ಲ ಕಾರಣ ಪಾಶ್ಚಾತ್ಯರ ಇಂಗ್ಲೀಷ್ ಭಾಷೆ ಮತ್ತು ಸಾಹಿತ್ಯದ ಪ್ರಭಾವ. ನಮ್ಮ ದೇಶದ ಈಗಿನ ಶಿಕ್ಷಣ ಪದ್ಧತಿಯು ಕೇವಲ ಮೇಧಾ ಶಕ್ತಿಯನ್ನು ವೃದ್ಧಿಗೊಳಿಸುವುದಕ್ಕೆ ಪರಿಮಿತವಾಯಿತು. ವಿದ್ಯಾರ್ಥಿಗಳಲ್ಲಿ ಪಾರಮಾರ್ಥಿಕ ಬುದ್ಧಿಯನ್ನಾಗಲಿ, ಪ್ರಜಾಧರ್ಮವನ್ನಾಗಲಿ ಉದ್ದೀಪಿಸಲಿಲ್ಲ.

ಈಗಿನ ಪಾಠಶಾಲೆಯಲ್ಲಿ ಬೋಧನೆಯ, ಕಲಿಕೆಯ ಮತ್ತು ಶಿಸ್ತಿನ ರೀತಿಗಳಲ್ಲಿ ವಿಧ್ಯಾರ್ಥಿಗಳ ವ್ಯಕ್ತಿತ್ವದ ಬೆಳವಣಿಗೆಗೆ ಅಡಿಯಾಗಿದಯೇ ಹೊರತು ಸಹಾಯಕವಾಗಿಲ್ಲ. ಭಾರತೀಯ ವಿದ್ಯಾರ್ಥಿಗಳಿಗೆ ಮೂಲ ಬುಡಕಟ್ಟಿನ ಹೆಮ್ಮೆಯಿದೆ. ಸಾಂಸ್ಕೃತಿಯ ಪ್ರಾಚೀನ ಸಂಪತ್ತಿದೆ. ಇವೆರಡರ ಪರಿಣಾಮವಾಗಿ, ಅವರು ಮೇಧಾಶಕ್ತಿಯಲ್ಲಿ ದುಡಿಮೆಯ ಸಾಮರ್ಥ್ಯದಲ್ಲಿ, ಪ್ರಕೃತಿ ಸಹಜವಾಗಿ ನೆಲೆಸಿರುವ ಶಕ್ತಿಯಲ್ಲಿ ಮತ್ತು ಇತರ ವಿಚಾರಗಳಲ್ಲಿ, ಇತರ ಸಮಸ್ತ ದೇಶಗಳ ವಿದ್ಯಾರ್ಥಿಗಳಿಗಿಂತ ಯಾವ ಭಾಗದಲ್ಲೂ ಕಡಿಮೆಯಿಲ್ಲದಂತಾಗಿದ್ದಾರೆ. ಆದರೆ ಈಗಿನ ಶಿಕ್ಷಣ ವಿಧಾನದಿಂದ ಅವರ ಶಕ್ತಿ ಸಾಮರ್ಥ್ಯಗಳು ವೃದ್ಧಿ ಹೊಂದಲು ಅವಕಾಶವೇ ಇಲ್ಲ. ವೃದ್ಧಿಯ ಮಾತಿರಲಿ, ಶಿಕ್ಷಣವು ಪೂರೈಸಿದ ಮೇಲೆ, ಅವರಿಗೆ ಮೊದಲಿನಷ್ಟು, ದೇಹಬಲ, ಸಮಯಸ್ಫೂರ್ತಿ, ಕಾರ್ಯಾರಂಭ ಮಾಡುವ ಉತ್ಸಾಹ, ಸ್ವಾವಲಂಬನ, ಸಮಾಜವು ಅಭ್ಯುದಯ ಹೊಂದಬೇಕೆಂಬ ಆಕಾಂಕ್ಷೆ, ಇವಾವುದೂ ಇರುವುದಿಲ್ಲ. ಕಾರ್ಯಾಲಯಗಳಲ್ಲಿ ಗುಮಾಸ್ತರುಗಳಾಗುವುದಕ್ಕೆ ಅರ್ಹತೆಯನ್ನು ಉಂಟು ಮಾಡುವುದೇ ಈಗಿನ ಶಿಕ್ಷಣ ಪದ್ಧತಿಯ ಗುರಿಯಾಗಿದೆ.

" ಶಿಕ್ಷಣ ಹೊಂದಿದ ತರುಣರಲ್ಲಿ ಹೊಟ್ಟೆ ಹೊರೆದುಕೊಳ್ಳುವ ಅರ್ಹತೆಯನ್ನು ಉಂಟುಮಾಡುವುದೇ ಭಾರತದ ಇಂದಿನ ಶಿಕ್ಷಣ ಪದ್ಧತಿಯ ಗುರಿ. ಈ ಶಿಕ್ಷಣ ಪದ್ಧತಿಯಲ್ಲಿ ಯಾವ ಉದಾತ್ತ ಧ್ಯೇಯ ಸಾಧನೆಗೂ

ಅವಕಾಶವಿಲ್ಲ. ಶಿಕ್ಷಣ ಹೊಂದಿದ ವಿದ್ಯಾರ್ಥಿಗಳಲ್ಲಿ ಗಮನಾರ್ಹವಾದ ವ್ಯಕ್ತಿತ್ವವೇನೂ ಇಲ್ಲದಿರುವುದಕ್ಕೆ ಅದೇ ಕಾರಣ"- ಎಂದು ತಜ್ಞರೊಬ್ಬರು ಹೇಳಿದ್ದಾರೆ. ಇಂದಿನ ವಿದ್ಯಾಭ್ಯಾಸ ಪದ್ಧತಿಯ ತಿರುಳೇನು ಎಂಬುದಕ್ಕೆ ಸಮಂಜಸವಾದ ಉತ್ತರ ಈ ರೀತಿ ಇದೆ, " ಜನಜೀವನಕ್ಕೆ ಹೊಂದಿಕೊಂಡು ನಡೆಯಲು ಪಾಠಶಾಲೆಗಳಿಂದ ಅಡ್ಡಿ-ಅಡಚಣೆಗಳು- ಆಗುತ್ತಿದೆಯೇ ಹೊರತು ಸಹಾಯವೇನೂ ಆಗುತ್ತಿಲ್ಲ"- ಎಂಬುದು ಕೆ.ಜಿ.ಸೈಯದೀನ್ ಅವರ ಅಭಿಪ್ರಾಯ.

ಇಂದಿನ ಶಿಕ್ಷಣ ಪದ್ಧತಿಯಲ್ಲಿ ಕೇವಲ ಪುಸ್ತಕ ವ್ಯಾಸಂಗಕ್ಕೆ ಮನಗೊಟ್ಟು ದುಡಿಮೆಯ ಘನತೆಯನ್ನು, ನಿಜವಾದ ಶಿಕ್ಷಣ ದೃಷ್ಟಿಯಿಂದ ಅದಕ್ಕೇ ಇರುವ ಬೆಲೆಯನ್ನು ಅಲಕ್ಷ್ಯಮಾಡಿದುದರ ಪರಿಣಾಮವಾಗಿ ಇಂದಿನ ಜನಜೀವನದಲ್ಲಿ ನಿರುದ್ಯೋಗ, ಅಶಾಂತಿ, ತೊಂದರೆಗಳೆಲ್ಲ ಒದಗಿದೆ. ಇದಕ್ಕೆಲ್ಲ ಕಾರಣ ವಿದೇಶಿಯರ ಅನುಕರಣೆಯೇ ಆಗಿದೆ.- "ಭಾರತೀಯ ವಿದ್ಯಾರ್ಥಿಗಳು ತಮ್ಮ ಸ್ವಂತ ಸಾಂಸ್ಕೃತಿಯ ಸಾಧನಗಳಿಂದ ಸ್ಫೂರ್ತಿ ಶಕ್ತಿಗಳನ್ನು ಪಡೆಯುವುದಕ್ಕೆ ಮೊದಲೇ ಪಾಠಶಾಲೆಗಳು ಅವರ ಎಳೆಯ ಮನಸ್ಸಿಗೆ ವಿದೇಶಿಯ ಸಂಗತಿಗಳನ್ನು ತುರುಕಿ ಜಡಗೊಳಿಸುತ್ತವೆ"-ಎಂಬುದಾಗಿ ಶ್ರೀ ಅರವಿಂದ ಯೋಗಿಗಳ ಹೇಳಿದ್ದಾರೆ.

ಇಂಗ್ಲೀಷ್ ನಮ್ಮ ಜನರನ್ನು ಒಂದುಗೂಡಿಸಿದೆ, ಒಂದು ಗೂಡಿಸುತ್ತದೆ ಎಂಬ ಹುಸಿ ಕಲ್ಪನೆ ಹಲವರಲ್ಲಿದೆ. ಇಂಗ್ಲೀಷ್ ಎಂದೂ ಈದೇಶದ ಬಹು ಸಂಖ್ಯಾತರ ಭಾಷೆಯಾಗಿರಲಿಲ್ಲ. ಆಗಲು ಸಾಧ್ಯವು ಇಲ್ಲ. ಜನರ ಜೊತೆ ನೇರಸಂಪರ್ಕ ಪಡೆಯ ಬಯಸಿದ ಧಾರ್ಮಿಕ ಹಾಗೂ ರಾಜಕೀಯ ಮುಖಂಡರು ಪ್ರತಿಷ್ಠಿತ ಭಾಷೆಗಳನ್ನು ತೊರೆದು ಜನರ ಭಾಷೆಯಲ್ಲಿ ಮಾತಾನಾಡಿದ್ದನ್ನು ನಾವು ಗಮನಿಸುಬಹುದು.

ಗೌತಮ ಬುದ್ಧನು ಸಂಸ್ಕೃತವನ್ನು ಕೈಬಿಟ್ಟು ಜನರ ಭಾಷೆಯಾದ ಪಾಲಿಯನ್ನು ಬಳಸಿದ. ನಮ್ಮ ಬಸವ, ಅಲ್ಲಮ, ಕನಕ, ಪುರಂದರ, ಶರೀಫರು ಕೂಡ ಬಹುಮಾನ್ಯವಾದ ಕನ್ನಡದಲ್ಲೇ ತಾವೂ ನಂಬಿದ ತತ್ವಗಳನ್ನು ಸಾರಿದರು. ಇಂಗ್ಲೀಷ್ ಕ್ರಿಸ್ತನ ಭಾಷೆಯಾಗಿರಲಿಲ್ಲ. ಆತ ತನ್ನ ಸಂದೇಶವನ್ನು ಅರಾಮೆಯಿಕ್ ಭಾಷೆಯಲ್ಲಿ ನುಡಿದ.

ಈ ಹೊತ್ತು ದೇಶದಲ್ಲಿ ಒಟ್ಟು ಜನಸಂಖ್ಯೆಯಲ್ಲಿ ಇಂಗ್ಲೀಷ್ ಭಾಷೆಯ ಪರಿಚಯ ಸಂಪರ್ಕ ಇರುವವರು ಶೇಕಡ ೪ ಮಂದಿ ಮಾತ್ರ. ಈ ಶೇಕಡಾ ನಾಲ್ಕು ಮಂದಿ ತಮ್ಮ ಅಧಿಕಾರ, ಸ್ಥಾದನಮಾನ,

ಹಾಗೂ ಇಂಗ್ಲೀಷ್ ವಿದ್ಯಾಭ್ಯಾಸದ ಮೂಲಕವಾಗಿ ದೇಶದ ಆಡಳಿತ ಸೂತ್ರವನ್ನು ಕೈಗೆ ತೆಗೆದುಕೊಂಡು ಶಿಕ್ಷಣ, ರಾಜಕಾರಣ, ಸಾಂಸ್ಕೃತಿಕವಲಯ ಮುಂತಾದ ಎಲ್ಲ ರಂಗಗಳಲ್ಲಿ ನೀತಿ ನಿರ್ಧಾರ ಮಾಡುತ್ತಿದ್ದಾರೆ. ಆದರೆ ಶೇಕಡ ೪ ಮಂದಿಯ ಆಡಳಿತ ಕಾಲದಲ್ಲೇ ಈ ದೇಶದ ಶೇಕಡ ೬೪ ಮಂದಿ ಸ್ವಾತಂತ್ರ್ಯ ಬಂದು ೪೩ ವರ್ಷಗಳಾದರೂ ಅನಕ್ಷರಸ್ಥರಾಗಿಯೇ ಉಳಿದಿದ್ದಾರೆ. ಇವರನ್ನು ಸಾಕ್ಷರರನ್ನಾಗಿ ಮಾಡಬೇಕಾಗಿದ್ದ ವಯಸ್ಕ ಶಿಕ್ಷಣ ಕಾರ್ಯಕ್ರಮಗಳು ನಮ್ಮಲ್ಲಿ ಗಂಭೀರಬಾಗಿ ನಡೆದೇ ಇಲ್ಲ. ಅವುಗಳಿಗಾಗಿ ಮೀಸಲಿಟ್ಟ ಹಣದ ಪ್ರಮಾಣವೂ ಅತ್ಯಲ್ಪ. ಈ ಹಿನ್ನಲೆಯಲ್ಲಿ ಈ ದೇಶದ ಲಕ್ಷಾಂತರ ಮಕ್ಕಳಿಗಾಗಿ ನಾವು ಮೊದಲು ಕೊಡಬೇಕಾದದ್ದು ಅವರವರ ಮಾತೃಭಾಷೆ, ಪ್ರಾದೇಶಿಕ ಭಾಷೆಯಲ್ಲಿ ಸಾಮಾನ್ಯ ಶಿಕ್ಷಣ ಎಂಬುದನ್ನು ಮರೆಯಬಾರದು.

ಇಂಗ್ಲೀಷ್ ವಿದ್ಯಾಭ್ಯಾಸ ನಮ್ಮ ದೇಶದಲ್ಲಿ ಹೊಸ ಆಶೋತ್ತರಗಳನ್ನು, ಆಧುನಿಕ ಮನೋಭಾವವನ್ನು ತಂದಿತು ಎಂಬುದರಲ್ಲಿ ಅನುಮಾನವಿಲ್ಲ. ಇಂಗ್ಲೀಷ್ ವಿದ್ಯಾಭ್ಯಾಸದಿಂದ, ಬ್ರಿಟಿಷರ ಆಗಮನದಿಂದ ಅಥವಾ ಬ್ರಿಟಿಷರ ದಮನದಿಂದ ಆಧುನಿಕ ರಾಜಕೀಯ ಕಲ್ಪನೆಗಳಾದ ರಾಷ್ಟ್ರ, ರಾಷ್ಟ್ರೀಯತೆ, ದೇಶ ಪ್ರೇಮ ಹಾಗೂ ರಾಜಕೀಯ ಹಕ್ಕುಗಳನ್ನು ಕಲಿಯುವಲ್ಲಿ ಭಾರತೀಯರು ಸಫಲರಾದರು. ಅಲ್ಲದೇ ಜಾಗತಿಕ ವಿದ್ಯಾಮಾನಗಳನ್ನು, ಹೊಸ ದೃಷ್ಟಿಕೋನವನ್ನು ಅರಿಯುವಲ್ಲಿ ಇಂಗ್ಲೀಷ್ ಭಾಷೆ ಸಹಕಾರಿಯಾಯಿತು. ಇಂಗ್ಲೀಷ್ ಭಾಷೆಯ ಪ್ರವೇಶದಿಂದ ಎಲ್ಲ ರಂಗಗಳಲ್ಲಿ ಹೊಸಹೊಸ, ಅವಿಷ್ಕಾರಗಳು ನಡೆಯುವುದಕ್ಕೆ ಸಹಕಾರಿಯಾಯಿತು. ಶಿಕ್ಷಣ ರಂಗದಲ್ಲಿ ಇಂಗ್ಲೀಷ್ ಭಾಷೆ ಹೊಸ ದಿಗಂತವನ್ನೇ ಸೃಷ್ಟಿಸಿತು, ಎಂಬುವುದಕ್ಕಿಂತ ಅದೇ ಪಟ್ಟಭದ್ರವಾಗಿದೆ. ಅಲ್ಲದೇ ಬೇರೆ, ಬೇರೆ ಭಾಷೆಗಳನ್ನಾಡುತ್ತಿದ್ದ ನಮ್ಮ ಜನರು ಆಂಗ್ಲಭಾಷೆಯ ಜ್ಞಾನವನ್ನು ಹೊಂದಿ ಒಂದೆಡೆ ಸೇರುವುದಕ್ಕೆ ಅನುಕೂಲವಾಯಿತು. ಭಾರತೀಯರು ಪಾಶ್ಚಿಮಾತ್ಯ ದೇಶಗಳ ಜ್ಞಾನ-ವಿಜ್ಞಾನಗಳಿಂದಲೂ ಪ್ರಯೋಜನ ಪಡೆದರು. ಅದಕ್ಕಂದೇ ವಿಶ್ವದ ಬಹುತೇಕ ರಾಷ್ಟ್ರಗಳು ಪಾಶ್ಚಿಮಾತ್ಯ ರಾಷ್ಟ್ರಗಳ ಶೈಕ್ಷಣಿಕ ಪದ್ಧತಿಯನ್ನು ಅನುಸರಿಸುತ್ತಿವೆ, ಎಂಬುದು ವಿದ್ವಾಂಸರ ಅಭಿಮತ ಇದಕ್ಕೆ ಪಾಶ್ಚಿಮಾತ್ಯರ ಪ್ರಭುತ್ವದಲ್ಲಿ ನರಳಿದ ಸಾಕಷ್ಟು ಏಷ್ಯಾದ ರಾಷ್ಟ್ರಗಳು ಹೊರತಾಗಿಲ್ಲ. ಇವುಗಳಲ್ಲಿ ಬ್ರಿಟಿಷರ ದಾಸ್ಯ ಶೃಂಖತೆಯನೊಗ ಕಳಚಿ ಕೊಂಡು ಸ್ವತಂತ್ರಗೊಂಡ ಭಾರತವೂ ಒಂದು. ಭಾರತದ ಶೈಕ್ಷಣಿಕ ಕ್ಷೇತ್ರದ ಮೇಲೆ ಪಾಶ್ಚಿಮಾತ್ಯ ರಾಷ್ಟ್ರಗಳ ಪ್ರಭಾವ, ಬಹುವ್ಯಾಪಕವಾಗಿ ಪ್ರಭಾವಬೀರಿ, ಆದುನೀಕರಣವನ್ನುಂಟು ಮಾಡಿದೆ.

## ೫.೭ ಅಂತರ ರಾಷ್ಟ್ರೀಯ ಸಾಕ್ಷರತಾ ಕಾರ್ಯಕ್ರಮಗಳು

ಸಾವಿರಾರು ವರ್ಷಗಳಿಂದ ಮನುಕುಲವನ್ನು ಕಾಡುತ್ತಿರುವ ಹಲವಾರು ಸಮಸ್ಯೆಗಳಿಗೆ ಸೂಕ್ತ ಪರಿಹಾರ ಒದಗಿಸುವಲ್ಲಿ, ಇಡೀ ವಿಶ್ವವೇ ವಿಫಲವಾಗಿದೆ. ಶಿಕ್ಷಣ, ಆರೋಗ್ಯ, ಮತ್ತು ಬಡತನದಂತಹ ಸಮಸ್ಯೆಗಳನ್ನು ನಿವಾರಿಸಲು, ನಮ್ಮ ದೇಶವಷ್ಟೇ ಅಲ್ಲ, ಮುಂದುವರಿದ ದೇಶಗಳು ಸಹ ಕಳವಳ ವ್ಯಕ್ತ ಪಡಿಸುತ್ತಿವೆ. ಶಿಕ್ಷಣದ ವಿಚಾರದಲ್ಲಿ ಸಾಕ್ಷರತಾ ಆಂದೋಲನವು ಪೂರ್ಣತೆಯನ್ನು ಪಡೆಯಬೇಕಾದರೆ, ಅದರ ಬಗ್ಗೆ ವಿಶ್ವಸಂಸ್ಥೆ ತನ್ನ ಸದಸ್ಯ ರಾಷ್ಟ್ರಗಳಿಗೆ ಅರಿವು ಮೂಡಿಸುವುದು ಇಂದು ಅತ್ಯಂತ ಅನಿವಾರ್ಯ ಅವಶ್ಯಕತೆಯಾಗಿದೆ.

"ಹೊಸ ಯುಗದ ಘೋಷಣೆ ಪಾಲಿಸಬೇಕುಪ್ರತಿ ಕುಟುಂಬವೂ ಸಾಕ್ಷರರಾಗಬೇಕು" ಎಂಬುದನ್ನು ಅರಿತು, ಅನಕ್ಷರತೆಯನ್ನು ಕಿತ್ತೊಗೆಯಲು ಇಂದು ವಿಶ್ವವಾದ್ಯಂತ ಪ್ರಬಲವಾದ ಸಾಕ್ಷರತಾ ಆಂದೋಲನಗಳು ನಡೆಯುತ್ತಿವೆ. ಮುಂದುವರಿದ ರಾಷ್ಟ್ರಗಳಂತೆ, ಹಿಂದುಳಿದ ರಾಷ್ಟ್ರಗಳು ಸಹ 'ಅನಕ್ಷರತೆ' ಎಂಬ ಪಿಡುಗನ್ನು ಕಿತ್ತೊಗೆಯಲು ಸರ್ವಪ್ರಯತ್ನ ಮಾಡುತ್ತಿವೆ. ಈ ಆಂದೋಲನಗಳಿಂದ ಸಫಲವಾಗಿರುವ ರಾಷ್ಟ್ರಗಳೇ ಅಧಿಕ. ಇಂದಿನ ಜಗತ್ತಿನಲ್ಲಿ ಅಕ್ಷರಜ್ಞಾನ ತುಂಬಾ ಅಗತ್ಯವಾದದ್ದು. ಆರೋಗ್ಯ , ಪರಿಸರ, ಹಾಗೂ ಸಾಮಾಜಿಕ ಬದಲಾವಣೆಗಳೊಂದಿಗೆ, ಜನತೆಯ ಜೀವನ ಮಟ್ಟವನ್ನು ಉತ್ತಮ ಪಡಿಸಲು, ವಿಶ್ವಶಾಂತಿಗೆ ಒಗ್ಗೂಡುವಂತೆ ಮಾಡಲು ಸಾಕ್ಷರತಾ ಆಂದೋಲನಗಳು ಅಗತ್ಯವಾಗಿವೆ.

ಅತ್ಯಂತ ಕಡಿಮೆ ಅವಧಿಯಲ್ಲಿ ಅನಕ್ಷರತೆಯನ್ನು ಹೋಗಲಾಡಿಸಿದ ಕೀರ್ತಿ ರಷ್ಯಾ, ಕ್ಯೂಬಾ, ಟರ್ಕಿ, ಮೆಕ್ಸಿಕೋ, ಚಿಲಿ, ಕೊಲಂಬಿಯಾ, ಬ್ರೆಜಿಲ್, ಇರಾನ್, ಇಸ್ರೇಲ್, ಟಾಂಜೇನಿಯಾ, ಸಿಲೋನ್ ಮತ್ತು ಇಂಡೋನೇಷಿಯಾ - ಮುಂತಾದ ಹಲವು ದೇಶಗಳ ಉದಾಹರಣೆಗಳನ್ನು ನೋಡಬಹುದು.

## ವಿಶ್ವ ಸಾಕ್ಷರತಾ ಕಾರ್ಯಕ್ರಮದ ಉದ್ದೇಶ

ನಾಗಲೋಟದಲ್ಲಿ ಬೆಳೆಯುತ್ತಿರುವ ಅನಕ್ಷರತೆ ಮಾನವನ ಪ್ರಗತಿಗೆ ಅಡ್ಡಿ. ನಿರಕ್ಷರರು ತಮ್ಮ ದೇಶದ ಪ್ರಗತಿಗೆ ಯಾವ ರೀತಿಯಲ್ಲೂ ಕಾಣಿಕೆ ಸಲ್ಲಿಸಲಾರರು. ಅವರು ಎರಡನೆಯ ದರ್ಜೆಯ ಪೌರರಾಗಿ ಬಾಳ್ವೆ ಮಾಡಬೇಕಾಗುವುದು. 'ವಿದ್ಯೆ ಮಾನವನ ಹಕ್ಕು' ಎಂಬುವುದನ್ನು ವಿಶ್ವಸಂಸ್ಥೆಯ ತನ್ನ ಪ್ರಣಾಳಿಕೆಯಲ್ಲಿ ಅಂಗೀಕರಿಸಿದೆ. ನಿರಕ್ಷರತಾ ನಿವಾರಣೆ ಒಂದು ಬೃಹತ್ ಸಮಸ್ಯೆ. ಅದು ಜಾಗತಿಕ ಸಮಸ್ಯೆಯೂ ಹೌದು.

ಅದನ್ನು ಎದುರಿಸಲು ವಿಶ್ವ ಸಾಕ್ಷರತಾ ಕಾರ್ಯಕ್ರಮ ಒಂದು ಅಪೂರ್ವವಾದ ಪ್ರಯತ್ನ ನಿರಕ್ಷರತಾ ನಿವಾರಣೆಯ ಇತಿಹಾಸದಲ್ಲಿ ಅದೊಂದು ಮೈಲಿಗಲ್ಲು.

## ವಿಶ್ವಸಾಕ್ಷರತಾ ಕಾರ್ಯಕ್ರಮದ ವೈಶಿಷ್ಟ್ಯಗಳು

ಈ ಹೊಸ ಕಾರ್ಯಕ್ರಮದಲ್ಲಿ ಬ್ಯಾಂಕರುಗಳು, ಬಂಡವಾಳ ಶಾಹಿಗಳು ಮತ್ತು ಕೈಗಾರಿಕೋದ್ಯಮಿಗಳು ಸಾಕ್ಷರತೆಯ ಅವಶ್ಯಕತೆಯ ಬಗ್ಗೆ ತಮ್ಮ ಆತಂಕವನ್ನು ವ್ಯಕ್ತಪಡಿಸಿದ್ದು ವಿಶೇಷವೇ ಸರಿ. ೧೯೬೭ರಲ್ಲಿ ಯುನೆಸ್ಕೊ ದುಂಡುಮೇಜಿನ ಪರಿಷತ್ತನ್ನು ಕೂಡಿಸಿತು. ಅದರಲ್ಲಿ ಮೇಲೆ ಹೇಳಿದ ವರ್ಗದವರು ನಿರಕ್ಷರತಾ ನಿವಾರಣೆಯ ಬಗ್ಗೆ ತಮ್ಮ ಆಸಕ್ತಿಯನ್ನು ವ್ಯಕ್ತ ಪಡಿಸಿದರು. ಇದಕ್ಕೆ ಕಾರಣ ಏನು? ಕೆಲವರಿಗೆ ಅಂತರ್ಯದಲ್ಲಿ ನಿಜವಾಗಿಯೂ ನಿರಕ್ಷರತೆಯನ್ನು ನಿರ್ಮೂಲ ಮಾಡಬೇಕೆಂಬ ಮನಸ್ಸಿದೆ. ಇನ್ನು ಕೆಲವರು ಈ ಬಗ್ಗೆ ತಮ್ಮ ಮೊಸಳೆ ಕಣ್ಣೀರನ್ನು ಸುರಿಸುತ್ತಿರುವುದು ಉತ್ಪ್ರೇಕ್ಷೆಯ ಮಾತಲ್ಲ. ಅದು ಏನೇ ಇರಲಿ. ನಿರಕ್ಷರತಾ ನಿವಾರಣೆಯಲ್ಲಿ ಸರಕಾರದ ಮತ್ತು ಭಾರೀ ಕೈಗಾರಿಕೋದ್ಯಮಿಗಳ ಸ್ವಾರ್ಥವೂ ಸಹ ಅಡಗಿದೆ. ವಿದ್ಯೆ ಸಾರ್ವತ್ರಿಕವಾಗಿ ಎಲ್ಲರಿಗೂ ಬೇಕೇಬೇಕು. ಅದಕ್ಕಿಂತ ಹೆಚ್ಚಾಗಿ ರಾಜ್ಯದ ಪ್ರಗತಿಗೆ ಮತ್ತು ಉತ್ಪಾದನೆಗೆ ಅಜ್ಞಾನ ಮತ್ತು ಅನಕ್ಷರತೆ ಕುಠಾರ ಪ್ರಾಯ. ಆದ್ದರಿಂದ ಅದನ್ನು ನಿವಾರಿಸದೆ ವಿಧಿಯಿಲ್ಲ ಎಂಬ ಅಂಶವನ್ನು ಸರಕಾರಗಳು, ಕೈಗಾರಿಕೋದ್ಯಮಿಗಳು ಮತ್ತು ಇತರರು ಮನಗಂಡಿದ್ದಾರೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಸಾಕ್ಷರತೆಯ ಕಲ್ಪನೆ ಕ್ರಾಂತಿಕಾರಕವಾಗಿ ಬದಲಾಗಲು ಯುನೆಸ್ಕೊ ನಡೆಸಿದ ಪ್ರಯತ್ನ ಶ್ಲಾಘನೀಯ. ಅದು ನಿರ್ದಿಷ್ಟ ರೂಪತಾಳಿದ್ದು ಇರಾನ್ ಸಮ್ಮೇಳನದಲ್ಲಿ.

ಸಾಕ್ಷರತೆ ಎಂದರೇನು? ಎಂಬುವುದಕ್ಕೆ ಜಗತ್ತಿನ ಹೆಸರಾಂತ ಶಿಕ್ಷಣ ತಜ್ಞ 'ಫಾಲೋಪ್ರಿಯರಿ' ಒಂದು ಕಡೆ ಹೀಗೆ ಹೇಳುತ್ತಾರೆ. " ಸಾಕ್ಷರತೆ ಎಂದರೆ ಕೇವಲ ಅಕ್ಷರ ಪದಗಳನ್ನು ಕಲಿಯುವುದು ಅಲ್ಲ. ಪ್ರಪಂಚವನ್ನು ಅರಿಯುವುದು, ತಿಳಿಯುವುದು", ಎಂದು - ಈ ಮಾರು ಸಾಕ್ಷರತೆಯ ಮಹತ್ವವನ್ನು ಸೂಚಿಸುತ್ತದೆ. ಅಲ್ಲದೇ ಸಾಕ್ಷರತೆಗೆ ಸಂಬಂಧಿಸಿದಂತೆ, ವಿಶ್ವಸಂಸ್ಥೆಯ ವಿವರಣೆ ಈ ರೀತಿ ಇದೆ, ಯಾವುದಾದರೂ ಒಂದು ಭಾಷೆಯಲ್ಲಿ, ಸರಳವಾದ ವಿಷಯವನ್ನು ಓದಿ ಬರೆಯುವ ಯೋಗ್ಯತೆ ಹೊಂದಿರುವುದಕ್ಕೆ 'ಸಾಕ್ಷರತೆ' ಎಂಬುದು ವಿಶ್ವಸಂಸ್ಥೆಯ ಜನತಾ ಮಂಡಲಿಯ(The United Nations Population Commission) ವಿವರಣೆ.

ಸಾಕ್ಷರತೆಯ ಬಗ್ಗೆ ವಿವರಣೆ ಎಲ್ಲ ರಾಷ್ಟ್ರಗಳಲ್ಲಿ ಒಂದೇ ರೀತಿಯಲಿಲ್ಲ. ಅರ್ಜೆಂಟೈನ ದೇಶದಲ್ಲಿ ೧೯೪೭ರಲ್ಲಿ ಜನಗಣತಿ ನಡೆಯಿತು. ಒಬ್ಬ ವ್ಯಕ್ತಿಯಾವುದಾದರೂ ಒಂದು ಭಾಷೆಯಲ್ಲಿ ಓದು ಬರಹ ಕಲಿತಿದ್ದರೆ ಆತನು ಅಕ್ಷರಸ್ಥನೆಂದು ಕೇವಲ ತನ್ನ ಹೆಸರನ್ನಾಗಲಿ, ಇಲ್ಲವೆ ಅಂಕಿಗಳನ್ನಾಗಲಿ, ಬರೆಯ ಬಲ್ಲವಾನದರೆ ಆತ ಅನಕ್ಷರಸ್ಥನೆಂದು ಪರಿಗಣಿಸತಕ್ಕದ್ದು ಎಂಬುದಾಗಿ ಗಣಕರಿಗೆ ಸೂಚನೆಯನ್ನು ಅಲ್ಲಿನ ಸರಕಾರ ನೀಡಿತು. ಸಿಲೋನ್ ಸರಕಾರದ ದೃಷ್ಟಿಯಲ್ಲಿ ಯಾವನಾದರೂ ಒಬ್ಬ ವ್ಯಕ್ತಿ ತನಗೆ ಬಂದ ಕಾಗದವನ್ನು 'ಓದಿ ಅದಕ್ಕೆ ಉತ್ತರ ಬರೆಯುವ ಯೋಗ್ಯತೆವುಳ್ಳವನು' ಅಕ್ಷರಸ್ಥ (೧೯೪೬). ಬೆಲ್ಜಿಯಂ ದೇಶದಲ್ಲಿ ಮಾತೃ ಭಾಷೆಯಲ್ಲಿ ಓದು ಬರಹ ಬಲ್ಲವನು ಅಕ್ಷರಸ್ಥ (೧೯೨೦).ಇಂಗ್ಲೇಂಡಿನಲ್ಲಿದ, ಕೇವಲ ರುಜು ಮಾಡುವವನು (೧೯೧೪), ಭಾರತವಲ್ಲಿ ಸಣ್ಣ ಪುಟ್ಟ ಪತ್ರಗಳನ್ನೂ ಓದಿ ಬರೆಯ ಬಲ್ಲವನು (೧೯೨೧), ಜಪಾನಿನಲ್ಲಿ ಓದು, ಬರಹ, ಲೆಕ್ಕ ತಿಳಿದವನು (೧೯೧೭)ಅಕ್ಷರಸ್ಥ. ಅಮೇರಿಕದಲ್ಲಿ (೧೯೪೦) ಐದನೆಯ ತರಗತಿಯ ಮಟ್ಟದ ಓದು, ಬರಹ ಬಲ್ಲವನು ಮಾತ್ರ ಅಕ್ಷರಸ್ಥ. ಸಾಕ್ಷರತೆಯ ಮಟ್ಟ ದೇಶದಿಂದ ದೇಶಕ್ಕೆ ವ್ಯತ್ಯಾಸ ಆಗುವುದು. ಕಾರಣ ಸಾಕ್ಷರತೆಯ ಪ್ರಮಾಣವನ್ನು ನಿರ್ಧರಿಸುವುದು ಆಯಾ ರಾಷ್ಟ್ರಕ್ಕೆ ಸಂಬಂಧಪಟ್ಟದ್ದು. ಪ್ರತಿಯೊಂದು ರಾಷ್ಟ್ರವು ಅನಕ್ಷರತೆಯನ್ನು, ನಿರ್ಮೂಲನೆ ಮಾಡಲು ಪಟ್ಟಶ್ರಮ ಮಾತ್ರ ಸಾರ್ಥಕ. ಅದೂ ಅಲ್ಲದೇ ಅತ್ಯಂತ ಕಡಿಮೆ ಅವಧಿಯಲ್ಲಿ ಅನಕ್ಷರತೆಯನ್ನು ಹೋಗಲಾಡಿಸಿದ ಕೀರ್ತಿ ಕ್ಯೂಬಾಕ್ಕೆ ಸಲ್ಲುತ್ತದೆ.

"ಕ್ಯೂಬಾ": - ನೀನು ಕಲುಸುವಂತಿದ್ದರೆ ಕಲಿಸು, ಕಲಿಸಲಾಗದಿದ್ದರೆ ನೀನೇ ಕಲಿತು ಈ ಘೋಷಣೆ ೧೯೬೦ ರ ಸುಮಾರಿನಲ್ಲಿ 'ಕ್ಯೂಬಾ' ದೇಶದಾದ್ಯಂತ ಮೊಳಗಿತು. 'ಕ್ಯೂಬಾ' ದೇಶದಲ್ಲಿ ೧೯೩೯ರಲ್ಲಿ ನಿರಕ್ಷರತೆ ಶೇ. ೫೭ ರಷ್ಟಿತ್ತು. ೧೯೪೨ರಲ್ಲಿ ಅದು ಶೇ. ೨೩ ಕ್ಕೆ ಇಳಿಯಿತು. ಆದರೂ ಗ್ರಾಮಾಂತರ ಪ್ರದೇಶದಲ್ಲಿ ನಿರಕ್ಷರತೆ ಶೇ. ೪೧.೭ ರಷ್ಟು ಉಳಿಯಿತು. ೧೯೫೯ರಲ್ಲಿ ಫಿಡೆಲ್ ಕ್ಯಾಸ್ಟ್ರೋ ಅವರ ಸರಕಾರ ಅಧಿಕಾರಕ್ಕೆ ಬಂದಾಗ ಅನಕ್ಷರತೆಯ ನಿವಾರಣೆಗೆ ಮೊದಲ ಗಮನ ನೀಡಿತು. ಸಾಕ್ಷರತೆ ಮತ್ತು ಆರ್ಥಿಕ ಪ್ರಗತಿ ಜತೆಜತೆಯಾಗಿ ಸಾಗುತ್ತವೆ. ಎಂಬುದನ್ನು ಮನಗಂಡು ರಾಷ್ಟ್ರೀಯ ಸಾಕ್ಷರತಾ ಆಯೋಗವನ್ನು ಸ್ಥಾಪಿಸಲಾಯಿತು. ಸಾಕ್ಷರತಾ ಕಾರ್ಯಕ್ರಮವನ್ನು ಅದಕ್ಕೆ ವಹಿಸಲಾಯಿತು. ಆಯೋಗವು ೧೬ ಪಾಠಗಳುಳ್ಳ ಸಚಿತ್ರ ಪಠ್ಯ ಪುಸ್ತಕವನ್ನು ಅಚ್ಚು ಮಾಡಿತು. ಪುಸ್ತಕದ ಹೆಸರು 'ವೆನಸೆರೆಮಾಸ' ಅಂದರೆ 'ನಾವುಗೆಲ್ಲೋಣ' ಎಂದರ್ಥ. ಜನರು ಜನರಿಗೆ ಕಲಿಸಬೇಕು ಎಂಬ ತತ್ವದ ಆಧಾರದ ಮೇಲೆ ಸಾಕ್ಷರತಾ ಕಾರ್ಯಕ್ರಮವನ್ನು ಸಿದ್ಧಪಡಿಸಲಾಯಿತು.ಸುಮಾರು ಒಂದು ಲಕ್ಷಕ್ಕೂ ಹೆಚ್ಚು ಮಂದಿ ಶಿಕ್ಷಕರನ್ನು ಸಾರ್ವಜನಿಕರಿಂದಲೂ ಅಷ್ಟೇ ಮಂದಿಯನ್ನು ವಿದ್ಯಾರ್ಥಿ

ವೃಂದದಿಂದಲೂ ಹದಿನ್ನೈದು ಸಾವಿರಮಂದಿಯನ್ನು ಕಾರ್ಮಿಕರಿಂದಲೂ ಆಯ್ಕೆ ಮಾಡಿ ತರಬೇತಿ ನೀಡಲಾಯಿತು. ಸುಮಾರು ಮೂವತ್ತೈದು ಸಾವಿರ ವೃತ್ತಿನಿರತ ಶಿಕ್ಷಕರು ಮೇಲ್ವಿಚಾರಣೆ ನಡೆಸಿದರು.

ಸಾಕ್ಷರತಾ ಸಾಧನೆಗಾಗಿ ಎರಡು ವರ್ಷಗಳ ಕಾಲ ತಮ್ಮ ದೇಶದ ಎಲ್ಲಾ ಶಾಲಾ ಕಾಲೇಜುಗಳನ್ನು ಮುಚ್ಚಿ ಕಾರ್ಯ ಸಾಧನೆಗೈದ ವ್ಯಕ್ತಿ ಕ್ಯೂಬಾದ ಅಧ್ಯಕ್ಷ ಫಿಡೆಲ್ ಕ್ಯಾಸ್ಟ್ರೋ ಆದಿಯಾಗಿ ಭಾಗವಹಿಸಿದ ಈ ಸಾಮೂಹಿಕ ಸಾಕ್ಷರತಾ ಆಂದೋಲನದಲ್ಲಿ, ಒಂದು ವರ್ಷದ ಅವಧಿಯಲ್ಲಿ ಒಂಭತ್ತು ಲಕ್ಷ ಮಂದಿ ಅಕ್ಷರ ಕಲಿತರು. ಇಂದು ಕ್ಯೂಬಾದಲ್ಲಿ ಹತ್ತು ವರ್ಷಕ್ಕೆ ಮೇಲ್ಪಟ್ಟವರಲ್ಲಿ ಸಂಪೂರ್ಣ ಸಾಕ್ಷರತೆಯು ಬಹುಮಟ್ಟಿಗೆ ಈಡೇರಿದೆ ಎನ್ನಬಹುದು.

"ಟರ್ಕಿ":- ಓದಲು ಬರುವ ಪ್ರತಿಯೊಬ್ಬರೂ ಒಬ್ಬರಿಗೆ ಕಲಿಸಿ, ಇದು ಟರ್ಕಿದೇಶದ ಅಧ್ಯಕ್ಷರು (ಅತಟರ್ಕ್ ) ಜನತೆಗೆ ಮಾಡಿಕೊಂಡ ಮನವಿ. ಅವರು ಬರಿಯ ಮನವಿ ಮಾಡಿಕೊಳ್ಳಲಿಲ್ಲ. ತಾವೇ ಕಾರ್ಯರಂಗಕ್ಕೂ ಇಳಿದರು. ಸಾವಿರಾರು ಸ್ವಯಂ ಸೇವಕರ ಜತೆಗೂಡಿ ಅಧ್ಯಕ್ಷ ಅತಟರ್ಕ್ ಅವರು ಜನತಾ ಶಾಲೆಗಳಲ್ಲಿ ಪಾಠ ಹೇಳಿದರು. ಈ ಆಂದೋಲನದ ಫಲವಾಗಿ ಟರ್ಕಿಯಲ್ಲಿ ಅನಕ್ಷರತೆ ಶೇ. ೫.೭ಕ್ಕೆ ಇಳಿಯಿತು.

"ಮೆಕ್ಸಿಕೋ":- ಮೆಕ್ಸಿಕೋದಲ್ಲಿ ೧೯೪೪ರಲ್ಲಿ ಅನಕ್ಷರತೆಯ ಮೇಲೆ ಯುದ್ಧವನ್ನು ಘೋಷಿಸಲಾಯಿತು. ೧೯೪೫ರಲ್ಲಿ ಸಾಕ್ಷರತೆಯಲ್ಲಿ ಕಾಳಜಿ ಇರುವ ಪ್ರಜಾ ಮುಖಂಡರುಗಳನ್ನು ಒಳಗೊಂಡ ಸಮಿತಿ ಸಾಕ್ಷರತಾ ಆಂದೋಲನದ ಚಾಲನೆಯನ್ನು ವಹಿಸಿಕೊಂಡಿತು. ಈ ಆಂದೋಲನದಲ್ಲಿ ಭಾಗವಹಿಸಿಲು ಸಾರ್ವಜನಿಕರಿಗಾಗಿ ಆಕರ್ಷಣೆಗಳನ್ನು ಮುಂದಿಡಲಾಯಿತು. ಅವುಗಳನ್ನು ಹೊಂದಿರುವವರು ಗೃಹನಿರ್ಮಾಣ ಕೆಲಸಕ್ಕೆ ಮತ್ತು ವಾಹನ ಚಾಲಕನಾಗಲು ಪರವಾನಗಿ, ಕೆಲವು ಬಸ್ಸುಗಳಲ್ಲಿ ಉಚಿತ ಪ್ರಮಾಣ ಮುಂತಾದ ಸೌಲಭ್ಯಗಳನ್ನು ಕೊಡಲಾಯಿತು. ೫೦ ಮಂದಿಗೆ ಅಕ್ಷರ ಕಲಿಸಿದ ಶಿಕ್ಷಕನಿಗೆ ರಾಷ್ಟ್ರಾಧ್ಯಕ್ಷರಿಂದ ಪ್ರಶಸ್ತಿ ಪತ್ರ ಕೊಡಿಸುವ ಏರ್ಪಾಡಾಯಿತು. ೧೦ ಮಂದಿಯನ್ನು ಅಕ್ಷರಸ್ಥರನ್ನಾಗಿ ಮಾಡಿದವರ ಹೆಸರನ್ನು ಗೌರವ ಪುಸ್ತಕದಲ್ಲಿ ಚಿನ್ನದ ಅಕ್ಷರಗಳಲ್ಲಿ ಬರೆಯುವ ಪದ್ಧತಿ ಜಾರಿಗೆ ತಂದರು. ಸಾರವತ್ತಾದ ಬೀಜವನ್ನು ಬಿತ್ತಿ ಎಂಬ ಅರ್ಥದ ಹಾಡನ್ನು ಸಾರ್ವಜನಿಕವಾಗಿ ಹಾಡಲು ಪ್ರೋತ್ಸಾಹಿಸಿದರು. ಇವೆಲ್ಲದರಿಂದ ಪ್ರೇರಣೆಗೊಂಡು ಕಲಿಸುವವರು ಮುಂದೆ ಬಂದರು. ಪರಿಣಾಮವಾಗಿ ಮೆಕ್ಸಿಕೋದಲ್ಲಿ ೧೯೧೧ರಲ್ಲಿ ಇದ್ದ ಶೇಕಡಾ ೬೦ರಷ್ಟು ಅನಕ್ಷರತೆ ಕಳೆದ ದಶಕದಲ್ಲಿ ಶೇ. ೩೦ ಕ್ಕೆ ಇಳಿಯಿತು.

"ರಷ್ಯ":- ರಷ್ಯದಲ್ಲಿ ೧೯೨೦ ರಲ್ಲಿ ಶೇ. ೮೦ರಷ್ಟು ಅನಕ್ಷರಸ್ಥರಿದ್ದರು. 'ಅನಕ್ಷರತೆ ಅಗಾಧ ಪ್ರಮಾಣದಲ್ಲಿ ಇರುವ ದೇಶದಲ್ಲಿ ರಾಷ್ಟ್ರೀಯ ಪ್ರಜ್ಞೆ ಇರಲು ಸಾಧ್ಯವೇ ಇಲ್ಲ' ಎಂಬುದು ಲೆನಿನ್ ರ ಅಭಿಪ್ರಾಯ. ಅವರ ಮಾತುಗಳಲ್ಲೇ ಹೇಳುವುದಾದರೆ "ದೇಶದಲ್ಲಿ ಅನಕ್ಷರತೆಯ ಪರಿಸ್ಥಿತಿ ಹೀಗಿರುವಾಗ ರಾಜಕೀಯ ಮಾತೇ ಎತ್ತುವಂತಿಲ್ಲ. ಸಾಕ್ಷರತೆ ಇಲ್ಲದಿದ್ದರೆ ನಾವು ರಾಜಕೀಯದ ಬಗ್ಗೆ ಮಾತನಾಡಲಾರೆವು. ಅನಕ್ಷರತೆ ಇರುವೆಡೆ ಗಾಳಿಸುದ್ದಿ, ಕಾಡುಹರಟೆ, ದ್ವೇಷ ಮಾತ್ರವೇ ಸಿಗುತ್ತವೆಯೆ ಹೊರತು ರಾಜಕೀಯವಲ್ಲ" ಎನ್ನುತ್ತಾರೆ. ಲೆನಿನ್ ಅವರು ಮಾಡಿದ ಮೊದಲ ಕೆಲಸವೆಂದರೆ 'ಜನತಾ ಕಮಿಸರಿಯಟ್ ' ಎಂಬ ಸಂಸ್ಥೆಯನ್ನು ಸ್ಥಾಪಿಸಲಾಯಿತು. ೧೯೧೯ನೆಯಡಿಸೆಂಬರ್ ೨೬ ರಂದು ಲೆನಿನ್ನರು ಅನಕ್ಷರತೆಯನ್ನು ತೊಡೆದು ಹಾಕುವ ಸರ್ಕಾರಿ ಆಜ್ಞೆಗೆ ಸಹಿ ಹಾಕಿದರು. ಇತಿಹಾಸದಲ್ಲಿ ಈ ವಿಷಯ ಸ್ಮರಣಾರ್ಹ ಘಟನೆಯಾಯಿತು. ಸರ್ಕಾರದ ಆಜ್ಞೆಯಂತೆ ರಷ್ಯದೇಶದ ಅನಕ್ಷರಸ್ಥ ಜನ ಸಮೂಹವು ಶಿಕ್ಷಣ ವ್ಯಾಪ್ತಿಗೆ ಒಳಗಾಯಿತು. ಜನತಾ ಕಮಿಷರಿಯಟ್ ಮತ್ತು ಅದರ ಅಂಗಸಂಸ್ಥೆಗಳಿಗೆ ವಿದ್ಯಾವಂತ ಜನರನ್ನು ಉಪಾಧ್ಯಾಯರನ್ನಾಗಿ ಆರಿಸಿ ಕೊಳ್ಳಲು ಮತ್ತು ಅವರಿಗೆ ಉಪಾಧ್ಯಾಯರಷ್ಟೇ ಸಂಬಳ ಕೊಡಲು ಅಧಿಕಾರ ನೀಡಲಾಯಿತು. ಅಕ್ಷರಾಭ್ಯಾಸ ಮಾಡುವ ದಿನಗೂಲಿ ಕಾರ್ಮಿಕರಿಗೆ ಎರಡು ಗಂಟೆ ವೇತನ ಸಹಿತ ಬಿಡುವು ನೀಡಲಾಯಿತು. ತರಗತಿಗಳನ್ನೂ ನಡೆಸಲು ಎಲ್ಲ ಸಾರ್ವಜನಿಕ ಕಟ್ಟಡಗಳು, ಕ್ಲಬ್ಬುಗಳು, ಖಾಸಗಿ ಮನೆಗಳು, ಕಾರ್ಖಾನೆ, ಆವರಣ, ಮೊದಲಾದವುಗಳನ್ನು ಉಪಯೋಗಿಸಿಕೊಳ್ಳಲು ಅವಕಾಶ ನೀಡಲಾಯಿತು. ಜನರಲ್ಲಿ ಜಾಗೃತಿಯನ್ನುಂಟು ಮಾಡಲು ಆಗಾಗ ಸಭೆ ಸಮಾರಂಭಗಳನ್ನು ಏರ್ಪಡಿಸುತ್ತಿದ್ದರು. ೧೯೨೮ರಿಂದ ಎರಡು ಪಂಚವಾರ್ಷಿಕ ಯೋಜನೆ ರೂಪಿಸಿ, ಕೈಗೊಂಡ ಆಂದೋಲನದಿಂದಾಗಿ ೯-೪೯ ವಯೋಮಿತಿಯವರಲ್ಲಿ ಸಾಕ್ಷರತೆಯ ಪ್ರಮಾಣ ಗಂಡಸರಲ್ಲಿ ಶೇ. ೯೪ ಹಾಗೂ ಹೆಂಗಸರಲ್ಲಿ ಶೇ. ೮೫ಕ್ಕೆ ಏರಿತು. ಕೇವಲ ಇಪ್ಪತ್ತು ವರ್ಷಗಳಲ್ಲಿ ಎರಡು ಕೋಟಿ ಜನ ಅಕ್ಷರ ಕಲಿತರು.

ಲೆನಿನ್ ಅಧಿಕಾರ ವಹಿಸಿಕೊಂಡಾಗ ದೇಶದಲ್ಲಿ ಶೇಕಡ ೯ಕ್ಕಿಂತ ಹೆಚ್ಚು ಮಂದಿಗೆ ಓದು ಬರಹ ಬರುತ್ತಿರಲಿಲ್ಲ. ೧೯೨೦ರಲ್ಲಿ ಲೆಕ್ಕಾಚಾರದ ಪ್ರಕಾರ ಸಾಕ್ಷರತೆ ಶೇಕಡ ೩೧.೯ ಇತ್ತು. ಆದರೆ ಶೇಕಡ ೨೪ ಮಂದಿಗೆ ನಿರೀಕ್ಷಿಸಿದ ಮಟ್ಟದಲ್ಲಿ ಓದು, ಬರಹ ಬರುತ್ತಿರಲಿಲ್ಲ. ಅಂದರೆ ೧೬೦ಮಿಲಿಯನ್ ನಿರಕ್ಷರ ಕುಕ್ಷಿಗಳು. 'ನಿರಕ್ಷರತೆ ದೇಶದ ಪ್ರಥಮ ಶತ್ರು. ಇದು ನಿರ್ಮೂಲ ಆಗದ ಹೊರತು ದೇಶದಲ್ಲಿ ಕಮ್ಯುನಿಸ್ಟ್ ಸರಕಾರ ರಚಿಸಲು ಸಾಧ್ಯವಿಲ್ಲ ಎಂಬ ಅಂಶ ಲೆನಿನ್ ಗೆ ಮನವರಿಕೆಯಾಗಿತ್ತು. ಈ ವಿಷಯವನ್ನು ಜನತೆಯ ಗಮನಕ್ಕೆ ತಂದನು. ನಿರಕ್ಷರತೆಯನ್ನು ನಿರ್ಮೂಲನ ಮಾಡಲು ಒಂದು ಆಜ್ಞೆಯನ್ನು ಹೊರಡಿಸಿದನು. ಈ

ಕಾರ್ಯಕ್ರಮದಲ್ಲಿ ಎಲ್ಲ ವಿದ್ಯಾವಂತರ ಸಹಕಾರ ಕೋರಿದನು. ೧೮ ರಿಂದ ೫೦ ವಯಸ್ಸಿನವರೆಲ್ಲರೂ ಓದು, ಬರಹ ಕಲಿಯಬೇಕಾಯಿತು.

## ಅನಕ್ಷರತೆ ನಿವಾರಣೆಯಲ್ಲಿ ವಿಶ್ವಸಂಸ್ಥೆಯ ಆಸಕ್ತಿ

೧೯೬೧ರಲ್ಲಿ ನಡೆದ ವಿಶ್ವಸಂಸ್ಥೆಯ ಮಹಾಸಭೆ ಸಾಮೂಹಿಕ ನಿರಕ್ಷರತಾ ನಿವಾರಣಾ ಸಮಸ್ಯೆಯ ಬಗ್ಗೆ ಕೂಲಂಕುಷವಾದ ಪರಿಶೀಲನೆ ನಡೆಸಿತು. ಪರಿಣಾಮವಾಗಿ ನಿರಕ್ಷರತೆಯ ನಿವಾರಣೆಗೆ ಯುನೆಸ್ಕೊ ಪರಿಹಾರ ಸೂಚಿಸಬೇಕೆಂದು ನಿರ್ಧರಿಸಿತು. ೧೯೪೯ ಮತ್ತು ೧೯೬೦ನೆಯ ಸಾಲುಗಳಲ್ಲಿ ನಡೆದ ವಿಶ್ವ ವಯಸ್ಕ ಶಿಕ್ಷಣ ಸಮ್ಮೇಳನಗಳು ಸಾಕಷ್ಟು ಚಿಂತನೆಗೆ ಗ್ರಾಸ ಒದಗಿಸಿದ್ದರೆ ಆಶ್ಚರ್ಯವೇನಿಲ್ಲ. ೧೯೬೩ನೆಯ ಡಿಸೆಂಬರ್ ನಲ್ಲಿ ನಡೆದ ವಿಶ್ವಸಂಸ್ಥೆಯ ಹದಿನೆಂಟನೆಯ ಮಹಾಸಭೆಯಲ್ಲಿ ಪುನಃ ನಿರಕ್ಷರತಾ ಸಮಸ್ಯೆ ಚರ್ಚೆಗೆ ಬಂದಿತು. ಪ್ರತಿಯೊಂದು ರಾಷ್ಟ್ರವು ತನ್ನ ಅಭಿವೃದ್ಧಿ ಯೋಜನೆಯ ಚೌಕಟ್ಟಿನಲ್ಲಿ ನಿರಕ್ಷರತಾ ನಿರ್ಮೂಲನ ಕಾರ್ಯಕ್ರಮವನ್ನು ಅಳವಡಿಸ ತಕ್ಕದ್ದು. ಹಾಗೂಸಾಮೂಹಿಕವಾಗಿ ನಿರಕ್ಷರತೆಯನ್ನು ನಿವಾರಿಸಿದ ಮತ್ತು ಮುಂದುವರಿದ ರಾಷ್ಟ್ರಗಳು ನಿರಕ್ಷರತಾ ನಿವಾರಣೆಗೆ ತಾಂತ್ರಿಕ ನೆರವು ಮತ್ತು ಧನ ಸಹಾಯವನ್ನು ನೀಡತಕ್ಕದ್ದು. ಈ ನಿರ್ಣಯವನ್ನು ಜಾರಿಗೆ ತರುವ ದಿಸೆಯಲ್ಲಿ ಅಂತರ ರಾಷ್ಟ್ರೀಯ ಸಹಕಾರದಿಂದ ವಿಶ್ವಸಾಕ್ಷರತಾ ಚಳವಳಿ ನಡೆಸುವ ಬಗ್ಗೆ ಆಳವಾದ ಅಧ್ಯಯನ ನಡೆಸಲು ಕೆಳಗೆ ಕಂಡ ಸಮಿತಿಯನ್ನು ರಚಿಸಿತು. ಅದು ವಿಶ್ವಸಂಸ್ಥೆಯ ೧೯ನೆಯ ಅಧಿವೇಶನಕ್ಕೆ ತನ್ನ ವರದಿಯನ್ನು ಸಲ್ಲಿಸಬೇಕಿತ್ತು. ಸಮಿತಿಯ ರಚನೆ ಹೀಗಿದೆ.

೧) ಯುನೆಸ್ಕೋ ಪ್ರಧಾನ ಕಾರ್ಯದರ್ಶಿ.

೨) ವಿಶೇಷ ನಿಧಿಯ ಮ್ಯಾನೇಜಿಂಗ್ ಡೈರಕ್ಟರು.

೩)ಅಂತರ ರಾಷ್ಟ್ರೀಯ ಅಭಿವೃದ್ಧಿ ಬ್ಯಾಂಕಿನ ಸದಸ್ಯ ಮತ್ತು

೪) ತಾಂತ್ರಿಕ ಸಹಾಯ ಮಂಡಳಿ ಅಧ್ಯಕ್ಷರು.

ಮೇಲ್ಕಂಡ ಸಮಿತಿ ನಿರಕ್ಷರತೆಯ ಸಮಸ್ಯೆಯನ್ನು ಆಳವಾಗಿ ಅಧ್ಯಯನ ಮಾಡಿತು. ನಿರಕ್ಷರತಾ ನಿವಾರಣಾ ಸಮಸ್ಯೆ ಆಯಾ ರಾಷ್ಟ್ರದ ಆಂತರಿಕ ಸಮಸ್ಯೆ. ಅದು ಮೊಲು ನಿವಾರಣೆ ಆಗತಕ್ಕದ್ದು. ವಿಶ್ವಸಂಸ್ಥೆಯ ಪ್ರಣಾಳಿಕೆಯ ೨೬ ನೆಯ ವಿಧಿಯ ಪ್ರಕಾರ (Universal declaration of Rights: Article ೨೬)

ಓದು ಬರಹ ಕಲಿಯುವುದು ಪ್ರತಿಯೊಬ್ಬನ ಆಜನ್ಮ ಸಿದ್ಧ ಹಕ್ಕು. ಈ ಕಾರ್ಯ ನಿರ್ವಹಿಸಲು ಅಂತರ ರಾಷ್ಟ್ರೀಯ ನೆರವು ಅಗತ್ಯ ಎಂಬುದಾಗಿ ಸಮಿತಿ ಅಭಿಪ್ರಾಯ ಪಟ್ಟಿತು.

ಸಾಕ್ಷರತೆಯ ಯಶಸ್ಸಿಗಾಗಿ ಮಹತ್ವವಾದ ಒಂದು ಸಮ್ಮೇಳನ ಇರಾನ್ ನಲ್ಲಿ ನಡೆಯಿತು. ೧೯೬೫ನೇ ಸೆಪ್ಟೆಂಬರ್ ೮ರಿಂದ ೧೯ ರವರೆಗೆ ವಿಶ್ವದ ವಿವಿಧ ರಾಷ್ಟ್ರಗಳ ವಿದ್ಯಾಮಂತ್ರಿಗಳ ಸಮ್ಮೇಳನ ಟೆಹರಾನಿನಲ್ಲಿ ನಡೆಯಿತು. ಈ ಸಮ್ಮೇಳನವನ್ನು ಕೂಡಿಸಿದ್ದು ಯುನೆಸ್ಕೋ. ಸಮ್ಮೇಳನದಲ್ಲಿ ೮೮ ರಾಷ್ಟ್ರಗಳು ಭಾಗವಹಿಸಿದ್ದವು. ಯುನೆಸ್ಕೊ ಮಟ್ಟದ ೧೯ ಅಂತರ ರಾಷ್ಟ್ರೀಯ ಸಂಸ್ಥೆಗಳು ತಮ್ಮ ವೀಕ್ಷಕರನ್ನು ಸಮ್ಮೇಳನಕ್ಕೆ ಕಳುಹಿಸಿದ್ದವು. ವಿಶ್ವದ ವಿವಿಧ ಕಡೆಗಳಲ್ಲಿ ನಿರಕ್ಷರತಾ ನಿರ್ಮೂಲನದ ಬಗ್ಗೆ ನಡೆದಿರುವ ಪ್ರಯತ್ನವನ್ನು ಸಮ್ಮೇಳನ ತನ್ನ ಗಮನಕ್ಕೆ ತೆಗೆದು ಕೊಂಡಿತು. ನಿರಕ್ಷರತೆ ರಾಷ್ಟ್ರದ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗೆ ಅಡ್ಡಿ. ರಾಷ್ಟ್ರದ ಅಭಿವೃದ್ಧಿ ನಿರಕ್ಷರತಾ ನಿರ್ಮೂಲನವನ್ನು ಅವಲಂಬಿಸಿದೆ. ನಿರಕ್ಷರತಾ ನಿವಾರಣಾ ಕಾರ್ಯ ಕ್ರಮವನ್ನು ಪ್ರಾಯೋಗಿಕವಾಗಿ ಕೆಲವು ಪ್ರದೇಶಗಳಲ್ಲಿ ಮಾತ್ರ ಕೈಕೊಳ್ಳ ತಕ್ಕದ್ದು. ಅಂತಹ ಪ್ರದೇಶಗಳ ಆಯ್ಕೆ ಕೃಷಿ ಮತ್ತು ಕೈಗಾರಿಕಾ ಕ್ಷೇತ್ರಗಳಿಗೆ ಸೀಮಿತವಾಗಿರಬೇಕು. ಈ ದಿಸೆಯಲ್ಲಿ ಅಂತರ ರಾಷ್ಟ್ರೀಯ ಸಾಕ್ಷರತಾ ತಜ್ಞರ ಸಲಹಾ ಸಮಿತಿ ಮಾಡಿರುವ ಶಿಫಾರಸುಗಳು ಅಂಗೀಕಾರಾರ್ಹವಾಗಿದೆ ಎಂಬುದಾಗಿ ಸಮ್ಮೇಳನ ಅಭಿಪ್ರಾಯ ಪಟ್ಟಿತು.

ಈ ನಿರ್ಧಾರಗಳು ಅಕ್ಷರ ಪ್ರಸಾರದ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ಕ್ರಾಂತಿಕಾರಿಯಾದ ಮತ್ತು ಪರಿಣಾಮಕಾರಿಯಾದ ಬದಲಾವಣೆ. ವಿಶ್ವ ಸಾಕ್ಷರತಾ ಕಾರ್ಯಕ್ರಮ ವೈಶಿಷ್ಟ್ಯಪೂರ್ಣ. ಅದರ ಕಲ್ಪನೆ ಹೊಸದು. ವೆಚ್ಚ ಹೆಚ್ಚು. ಇಷ್ಟು ದುಬಾರಿಯಾದ ಯೋಜನೆಯನ್ನು ಅಂತರ ರಾಷ್ಟ್ರೀಯ ನೆರವಿಲ್ಲದೆ ನಡೆಸುವುದು ಸಾಧ್ಯವೇ? ಅಂತಹ ನೆರವನ್ನು ನೀಡಲು ಸಮಂಜಸವಾದ ಸಾಕ್ಷರತಾ ಯೋಜನೆಯ ರಚನೆ ಅನಿವಾರ್ಯ. ಯುನೆಸ್ಕೊ ಹನ್ನೊಂದು ರಾಷ್ಟ್ರಗಳಲ್ಲಿ ಕೈಗೊಂಡ ವಿಶ್ವ ಸಾಕ್ಷರತಾ ಯೋಜನೆಗೆ ನೆರವು ನೀಡಿದೆ. ಆದ್ದರಿಂದ ಪರಿಣಾಮ ಕಾರಿಯಾದ ಫಲಿತಾಂಶವನ್ನು ಯುನೆಸ್ಕೊ ನಿರೀಕ್ಷಿಸುವುದು ಸಹಜ ತಾನೆ?

ಹನ್ನೊಂದು ರಾಷ್ಟ್ರಗಳು ವಿಶ್ವಸಾಕ್ಷರತಾ ಕಾರ್ಯಕ್ರಮದಲ್ಲಿ ಪಾಲುಗೊಂಡವು. ಪ್ರಾರಂಭದಲ್ಲಿ ಕೆಲವು ಸರಕಾರಗಳಿಗೆ ಯೋಜನೆಯ ಕಲ್ಪನೆಯನ್ನು ಮನವರಿಕೆ ಮಾಡಿಕೊಡಬೇಕಾಯಿತು. ಅದಕ್ಕೆ ಹೆಚ್ಚು ಕಾಲ ಮತ್ತು ಪ್ರಯತ್ನ ಅನಿವಾರ್ಯವಾಯಿತು. ಯೋಜನೆಯನ್ನು ಅರ್ಥ ಮಾಡಿಕೊಳ್ಳುವುದು ಮೊದಲನೆಯ ಹಂತ. ಅದನ್ನು ಅಂಗೀಕರಿಸಿ ಅನುಷ್ಠಾನಕ್ಕೆ ತರುವುದು ಮುಂದಿನ ಕಾರ್ಯ.

ನಿರಕ್ಷರತೆ ಆಯಾ ರಾಷ್ಟ್ರದ ಆಂತರಿಕ ಸಮಸ್ಯೆ. ಆದರೂ ಅದನ್ನು ನಿವಾರಿಸಲು ಅಂತರ ರಾಷ್ಟ್ರೀಯ ನೆರವು ಮತ್ತು ಯುನೆಸ್ಕೊ ಸಲಹೆ ಬೇಕೆಬೇಕು. ಕಾರಣ, ಹಿಂದೆ ತಿಳಿಸಿದಂತೆ ಯೋಜನೆಯ ವೆಚ್ಚ ಹೆಚ್ಚು ಮತ್ತು ಕಲ್ಪನೆ ಹೊಸದು. ಯುನೆಸ್ಕೊ ನೆರವು ಕ್ರಿಯಾತ್ಮಕ ಸಾಕ್ಷರತೆಗೆ ಮೀಸಲಾಗಿತ್ತು. ಆದ್ದರಿಂದ ಯುನೆಸ್ಕೊ ನೆರವು ಪಡೆಯಲು ರಾಷ್ಟ್ರಗಳು ವಿಶ್ವ ಸಾಕ್ಷರತಾ ಕಾರ್ಯಕ್ರಮವನ್ನು ಅಂಗೀಕರಿಸದೆ ವಿಧಿ ಇರಲಿಲ್ಲ. ಯೋಜನೆಯನ್ನು ಒಪ್ಪಿ ಕೊಂಡ ನಂತರ ಕೆಲವು ರಾಷ್ಟ್ರಗಳು ಸಾಮೂಹಿಕ ಸಾಕ್ಷರತಾ ಕಾರ್ಯಕ್ರಮವನ್ನು ಕೈಗೊಳ್ಳಲು ಬಯಸಿದವು.

ಈ ಅನಕ್ಷರಸ್ಥರ ಹೆಚ್ಚಳವು 'ತೃತೀಯ ಜಗತ್ತು' ಎಂದು ಕರೆಯಲ್ಪಡುವ ದೇಶಗಳಲ್ಲಿ ಮಾತ್ರವಲ್ಲ. ಮುಂದುವರೆದ ರಾಷ್ಟ್ರಗಳಾದ ಅಮೇರಿಕಾ, ಕೆನಡಾ, ಬ್ರಿಟನ್ ಮತ್ತು ಪಶ್ಚಿಮ ಯುರೋಪ್ ದೇಶಗಳಲ್ಲೂ ಈ ಲಕ್ಷಣ ಕಂಡು ಬರುತ್ತದೆ. ಇಂತಹ ದೇಶಗಳಲ್ಲಿ ಕೂಡಾ ಅನಕ್ಷರಸ್ಥರು ಕಂಡು ಬರುವುದು ಬಡ ಮತ್ತು ಹಿಂದುಳಿದ ವರ್ಗಗಳಲ್ಲೆ. ಇಂದು ಬಡತನವು, ಹಸಿವು ಮತ್ತು ಅನಕ್ಷರತೆಗಳು ತಾಂಡವ ವಾಡುತ್ತಿರುವ ದೇಶಗಳೆಲ್ಲ ಶತಮಾನಗಳಿಂದ ದಾಸ್ಯ, ಶೋಷಣೆ ಮತ್ತು ವಸಾಹತುಶಾಹಿಯ ಅಡಿಯಲ್ಲಿ ಎನ್ನುವುದು ಗಮನಾರ್ಹ ವಿಷಯ. ಪಾಶ್ಚಿಮಾತ್ಯರ ವಸಾಹತು ಆಡಳಿತ ಮತ್ತು ಕೈಗಾರಿಕಾ ಕ್ರಾಂತಿಯಿಂದಾಗಿ ಏಷ್ಯಾ, ಆಫ್ರಿಕಾ, ಮಧ್ಯಪೂರ್ವ ಮತ್ತು ದಕ್ಷಿಣ ಅಮೇರಿಕಾಗಳ ಕಚ್ಚಾ ಸಾಮಾಗ್ರಿ ಸಂಪತ್ತು ಮತ್ತು ಸ್ವಾತಂತ್ರ್ಯಗಳು ಕೊಳ್ಳೆ ಹೋಗಿದ್ದು, ಪರಿಣಾಮವಾಗಿ ಇಂದು ಜಾಗತಿಕ ವ್ಯವಸ್ಥೆಯಲ್ಲಿ ಸ್ಪಷ್ಟವಾಗಿ ಅತಿ ಶ್ರೀಮಂತ ಮತ್ತು ತೀರಾ ಬಡದೇಶಗಳ ನಡುವೆ ಬಿರುಕು ಬಿದ್ದಿದೆ.

ಬಡತನ ಮತ್ತು ಅನಕ್ಷರತೆಯ ವಿಷಯವಾಗಿ ಸಾರ್ವತ್ರಿಕವಾಗಿ ಏಕಪ್ರಕಾರವಾಗಿ ಚಿಂತಿತರಾಗಿದ್ದು ಯುನೆಸ್ಕೊ ಸಂಸ್ಥೆ ೧೯೯೦ ನೆ ಇಸವಿಯನ್ನು ಅಂತರ ರಾಷ್ಟ್ರೀಯ ಸಾಕ್ಷರತಾ ವರ್ಷವಾಗಿ ಘೋಷಿಸಿದೆ. ಹೀಗೆ ಸಾಮೂಹಿಕ ಸಾಕ್ಷರತಾ ಆಂದೋಲನಗಳೂ ಬೇರೆಬೇರೆ ರಾಷ್ಟ್ರಗಳಲ್ಲಿ ಯಶಸ್ಸನ್ನು ಸಾಧಿಸಿವೆ.

### ೫.೮ ಸಾಕ್ಷರತಾ ಕಾರ್ಯಕ್ರಮಗಳು

'ಶಿಕ್ಷಣವೇ ಶಕ್ತಿ'

'ಶಿಕ್ಷಣವೆಂಬ ಸುವರ್ಣಾವಕಾಶ ಕಳೆದುಕೊಳ್ಳದಿರಿ ಸದಾವಕಾಶ'

'ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ'

ಈ ಮೇಲಿನ ಎಲ್ಲಾ ಘೋಷಣೆಗಳ ಉದ್ದೇಶ, ಪ್ರತಿಯೊಬ್ಬರೂ ಶಿಕ್ಷಣ ಪಡೆಯಬೇಕು ಎಂಬುವುದೇ ಆಗಿದೆ. 'ವಿದ್ಯೆ ಪ್ರಗತಿಗೆ ದಾರಿ' ಎಂಬುವುದನ್ನು ಪ್ರಪಂಚದ ಪ್ರತಿಯೊಂದು ರಾಷ್ಟ್ರಗಳು ಒಪ್ಪಿಕೊಂಡಿವೆ. ಹಾಗೂ ಗುರುತಿಸಿಕೊಂಡಿವೆ. ಶಿಕ್ಷಣವಿಲ್ಲದೆ ಅಭಿವೃದ್ಧಿ ಸಾಧ್ಯವಿಲ್ಲ. ಪ್ರತಿಯೊಂದು ದೇಶದ ಘನತೆ, ಗೌರವಗಳು, ಉತ್ತಮ ನಾಗರಿಕತೆ ಹೆಚ್ಚಬೇಕಾದರೆ, ಆ ದೇಶದಲ್ಲಿ ಜನತೆ ಪಡೆದ ಶಿಕ್ಷಣದಿಂದಲೇ ಆಗಿದೆ. ಅಭಿವೃದ್ಧಿಗೂ ಮತ್ತು ಶಿಕ್ಷಣಕ್ಕೂ ನೇರವಾದ ಸಂಬಂಧವಿದೆ. ಒಂದು ದೇಶದ ಅಭಿವೃದ್ಧಿ ಆ ದೇಶದ ಜನತೆಯನ್ನು ಆವಲಂಬಿಸಿರುತತ್ತದೆ. ಜನತೆ ಶಿಕ್ಷಿತರಾದರೆ ಅಭಿವೃದ್ಧಿ ಪ್ರಗತಿದಾಯಕವಾಗುತ್ತದೆ. ಅಶಿಕ್ಷಿತರಾದರೆ, ಅಭಿವೃದ್ಧಿ ಕುಂಠಿತವಾಗುತ್ತದೆ. ಪ್ರಗತಿಗೆ ಶಿಕ್ಷಣವೇ ಮುಖ್ಯ ಎಂಬುದನ್ನು ಪ್ರತಿಯೊಂದು ದೇಶದ ಚಿಂತಕರು ಮನಗಂಡಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳು ಮುನ್ನಡೆಯನ್ನು ಸಾಧಿಸಿವೆ. ಹಾಗೂ ಶಿಕ್ಷಣದ ಮಹತ್ವವನ್ನು ಅರಿತಿವೆ. ಆದರೆ ಪ್ರಪಂಚದ ಅನಾಭಿವೃದ್ಧಿ ಹೊಂದಿರುವ ಅಥವಾ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳು ಶಿಕ್ಷಣ ಕ್ಷೇತ್ರದಲ್ಲಿ ಹಿನ್ನಡೆಯನ್ನು ಸಾಧಿಸಿವೆ. ಅಲ್ಲದೇ ಅನಕ್ಷರತೆಯಿಂದ ನರಳುತ್ತಿವೆ. ಆದಕ್ಕೆ ಕಾರಣಗಳು ಹಲವಾರು. ಈಗ ಅವುಗಳಿಗೆ ಸಾಕ್ಷರತೆ ಒಂದು ವರವಾಗಿ ಹೊಮ್ಮಿದೆ.

ಪ್ರಪಂಚದ ಎಲ್ಲ ಮಾನವ ಜೀವಿಗಳಿಗೆ ಶಿಕ್ಷಣ ನೀಡಬೇಕು ಎಂಬ ಕಲ್ಪನೆಯೇ ರೋಮಾಂಚನಕಾರಿ. ಜಗತ್ತಿನ ೧೪೭ ರಾಷ್ಟ್ರಗಳು ಒಟ್ಟಿಗೆ ಸೇರಿ ಕ್ರಿ.ಶ.೨೦೦೦ ವರ್ಷದೊಳಗೆ ಎಲ್ಲರಿಗೂ ಶಿಕ್ಷಣ ನೀಡುವಂತಹ ಯೋಜನೆಗಳನ್ನು ಹಾಕಿಕೊಳ್ಳಬೇಕೆಂದು ನಿರ್ಣಯಿಸಿಕೊಂಡವು. ತದನಂತರ ಈ ಕುರಿತು ತಮ್ಮ ದೇಶಗಳಲ್ಲಿ ಕಾರ್ಯ ನಿರ್ವಹಕ ಯೋಜನೆಗಳನ್ನು ರೂಪಿಸ ತೊಡಗಿದವು. ಭಾರತ ತನ್ನ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಸಮಸ್ತ ಜನತೆಗೆ ಶಿಕ್ಷಣ ನೀಡಬೇಕೆಂಬ ಕಲ್ಪನೆಯನ್ನು ಸೂಚಿಸಿತ್ತು. ರಾಷ್ಟ್ರೀಯ ಸಾಕ್ಷರತಾ ಮಿಶನ್, ೯ ರಿಂದ ೧೪, ೧೫ ರಿಂದ ೩೫ ವರ್ಷದ ಗುಂಪುಗಳಿಗೆ ಕ್ರಿಯಾತ್ಮಕ ಸಾಕ್ಷರತೆಯನ್ನು ನೀಡುವ ಆಂದೋಲನವನ್ನೇ ಹಂತ ಹಂತವಾಗಿ ಪ್ರಾರಂಭಿಸಿತು.

'ಸಾಕ್ಷರತೆ' ಎಂದರೆ ಜ್ಞಾನವನ್ನು ಹೊಂದಿರುವುದು ಎಂದರ್ಥ. 'ಕ್ಷರ' ಎಂದರೆ ನಾಶವುಳ್ಳದ್ದು ಎಂದರ್ಥ. 'ಅಕ್ಷರ' ಎಂದರೆ ನಾಶವಿಲ್ಲದ್ದು. ಅಂದರೆ ಅಕ್ಷರ ಜ್ಞಾನ ನಾಶವೇ ಇಲ್ಲದ ಜ್ಞಾನ ಕೌಶಲ್ಯ. ಆದ್ದರಿಂದಲೇ ಹಿರಿಯರು 'ಅಕ್ಷರಂ ಪರಮಂ ಬೃಹತ್ ' ಎಂದಿದ್ದಾರೆ. ವಿಶ್ವಸಂಸ್ಥೆಯ ಜನಸಂಖ್ಯಾ ಮಂಡಲಿಯ ಪ್ರಕಾರ 'ಸಾಕ್ಷರತೆ' ಎಂದರೆ ಸರಳ ಸಾಹಿತ್ಯವನ್ನು ಓದುವ ಮತ್ತು ಬರೆಯುವ ಸಾಮರ್ಥ್ಯ ಎಂದಾಗಿದೆ.

೧೯೯೧ರ ಭಾರತ ಜನಗಣತಿಯ ಪ್ರಕಾರ 'ಅಕ್ಷರಸ್ಥ' ಪಡೆದ ವ್ಯಾಖ್ಯೆ ಹೀಗಿದೆ. ಯಾವುದೇ ಭಾಷೆಯಲ್ಲಿಯಾದರೂ ಸರಿಯೇ, ಓದಿ ಅರ್ಥ ಮಾಡಿಕೊಳ್ಳಬಲ್ಲ ಹಾಗೂ ಅರ್ಥಬದ್ಧವಾಗಿ (ಅಂದರೆ ಸ್ವಂತ ವಿವೇಚನೆಯಿಂದ) ಬರೆಯಬಲ್ಲ ಹಾಗೂ ಯಾವುದೇ ವ್ಯಕ್ತಿಯು "ಅಕ್ಷರಸ್ಥ" ಎಂದು ಪರಿಗಣಿಸಲ್ಪಡಬೇಕು. ಕೇವಲ ಓದಲು ಮಾತ್ರ ಬರುತ್ತದೆ. ಆದರೆ ಬರೆಯಲು ಬರುವುದಿಲ್ಲ ಎಂಬುವ ವ್ಯಕ್ತಿಯು 'ಅಕ್ಷರಸ್ಥ' ಎಂಥು ಪರಿಗಣಿಸಲ್ಪಡಕೂಡದು. ಅಕ್ಷರಸ್ಥ ವ್ಯಕ್ತಿಯು ಯಾವುದೇ ಬಗೆಯ ಔಪಚಾರಿಕ ವಿದ್ಯಾಭ್ಯಾಸವನ್ನಾಗಲಿ, ಅಥವಾ ಇಂತಿಷ್ಟು ಕನಿಷ್ಟ ಮಟ್ಟದ ವಿದ್ಯಾರ್ಹತೆಯನ್ನಾಗಲಿ ಪಡೆದಿರಲೇಬೇಕು ಎಂಬ ಅಗತ್ಯವೇನೂ ಇರುವುದಿಲ್ಲ. ಸಾಕ್ಷರತೆ ನೀಡುವಲ್ಲಿ ೬ ತಿಂಗಳು ವಾತಾವರಣ ನಿರ್ಮಾಣ, ೬ ತಿಂಗಳು ಕಲಿಕೆ, ತದನಂತರ ಮುಂದುವರಿಕೆಯ ಕಲಿಕಾ ಕಾರ್ಯಕ್ರಮಗಳ ಯೋಜನೆ ಇರುತ್ತದೆ. ಸಾಕ್ಷರತಾ ಆಂದೋಲನದಲ್ಲಿ ಕೇವಲ ಅಕ್ಷರ ಕಲಿಸುವುದು ಮಹತ್ವದ್ದಲ್ಲ. ಅಕ್ಷರದ ಮೂಲಕ ತಿಳುವಳಿಕೆಯನ್ನು ಪಡೆಯುವುದು, ಪಡೆದ ತಿಳುವಳಿಕೆಯನ್ನು ನಡವಳಿಕೆಯಲ್ಲಿ ತರುವ ಕ್ರಿಯೆಯನ್ನು ಕಲಿಸಲಾಗುವುದು. ಅರಿವು ಹಾಗೂ ಕ್ರಿಯಾಶೀಲತೆಯನ್ನು ಒಳಗೊಂಡ ಸಾಕ್ಷರತೆಯನ್ನು ನೀಡುವುದು ಮುಖ್ಯ.

ಅನಕ್ಷರತೆ, ಬಡತನ ಮತ್ತು ಅಜ್ಞಾನ-ಇವುಗಳಿಗೆ ಪರಸ್ಪರ ಸಂಬಂಧವಿದೆ. ಶಿಕ್ಷಣ ಈ ಕಾಲದ ಅತ್ಯಂತ ಮಹತ್ವದ ಸಾಧನ. ಶಿಕ್ಷಣ ಮನುಷ್ಯನಿಗೆ ಸ್ವಾವಲಂಬನೆ, ಆತ್ಮವಿಶ್ವಾಸ ಮತ್ತು ಧೈರ್ಯ ತಂದು ಕೊಡುತ್ತದೆ. ಆದರೆ ಇಂತಹ ಶಿಕ್ಷಣ ಪಡೆದವರು ಎಷ್ಟು ಜನ ನಮ್ಮಲ್ಲಿದ್ದಾರೆ? ಶಿಕ್ಷಣದ ಮೂಲಕ ಮಾನವ ಸಂಪನ್ಮೂಲಗಳನ್ನು ಸೃಷ್ಟಿಸಬಹುದೆಂಬ ಸಂಗತಿ ಎಷ್ಟು ಜನರಿಗೆ ನಮ್ಮಲಿ ಗೊತ್ತಿದೆ? ಕೆಲವರ ಸ್ವಾರ್ಥದಿಂದಾಗಿ ಇಂದು ನೈಸರ್ಗಿಕ ಸಂಪನ್ಮೂಲಗಳು ವೇಗವಾಗಿ ಹಾಳಾಗುತ್ತಿವೆ. ನಮ್ಮ ಬದುಕಿಗೆ ಬದಲಿ ಸಂಪನ್ಮೂಲಗಳು ಬೇಡವೆ? ಬದಲಿ ಸಂಪನ್ಮೂಲ ಸೌಲಭ್ಯ ಎಷ್ಟು ಜನರಿಗೆ ದಕ್ಕಿದೆ? ಇಂದು ಅನಕ್ಷರಸ್ಥ ಮೂಢ ಸಂಪ್ರದಾಯಗಳ ದಾಸನಾಗಿದ್ದಾನೆ. ವೈಚಾರಿಕವಾಗಿ ವೈಜ್ಞಾನಿಕವಾಗಿ ಚಿಂತಿಸಲಾರ. ಏಕೆಂದರೆ ತನ್ನ ಸುತ್ತಮುತ್ತಣ ಹಾಗೂ ಹೊರಜಗತ್ತಿನಲ್ಲಿ ನಡೆಯುವ ಯಾವ ಘಟನೆಗಳೂ ಅವನಿಗೆ ತಿಳಿಯುವುದಿಲ್ಲ. ಇದಿರಿಂದಾಗಿ ಈತ ಅಕ್ಷರ ಕಲಿತವರ ಅಧೀನ ಪರಾವಲಂಬಿ. ಹಾಗಾಗಿ ಯಾವುದೇ ರೀತಿಯ ಅಭಿವೃದ್ಧಿ ಕಾರ್ಯಗಳಲ್ಲಿ ಸಕ್ರೀಯವಾಗಿ ಭಾಗವಹಿಸಲಾರ. "ಬಹುಸಂಖ್ಯಾತ ಅನಕ್ಷರತೆ ಭಾರತದ ಪಾಪ ಹಾಗೂ ಕಳಂಕವಾಗಿದೆ. ಅದನ್ನು ತೊಡೆದು ಹಾಕಲೇಬೇಕು"-ಎಂದು ಮಹಾತ್ಮಾಗಾಂಧೀಜಿ ಹೇಳಿದ್ದಾರೆ. ಅಲ್ಲದೇ ಡಾ|| ಬಿ.ಆರ್.ಅಂಬೇಡ್ಕರ್ ರವರು 'ನಿಮ್ಮ ಸಮೀಪದಲ್ಲಿರುವವರಿಗೆ ಪರಿಚಿತರಿಗೆ ಶಿಕ್ಷಣದ ಮಹತ್ವದ ಕುರಿತು ಬೋಧಿಸಿ, ಅವರನ್ನು

ವಿದ್ಯಾವಂತರನ್ನಾಗಿ ತಯಾರು ಮಾಡಿ ಎಂದು ಹೇಳಿದ್ದಾರೆ'. ಸ್ವಾಮಿ ವಿವೇಕಾನಂದರವರು 'ಎಲ್ಲಿಯವರೆಗೆ ನಮ್ಮ ಜನ ಹಸಿವು, ಅಜ್ಞಾನಗಳಿಂದ ಬಳಲುತ್ತಿರುತ್ತಾರೋ ಅಲ್ಲಿಯವರೆಗೆ, ಅವರ ಶ್ರಮದಿಂದ ಬೆಳೆದ ನಾವು ಕಿಂಚಿತ್ತು ಅವರ ಕಡೆ ಗಮನವಹಿಸುವುದಿಲ್ಲವೋ ಅಲ್ಲಿಯವರೆಗೆ, ಅಂಥವರನ್ನು ದ್ರೋಹಿ ಎಂದೇ ಬಗೆಯುತ್ತೇನೆ' ಎಂದು ಹೇಳಿದ್ದಾರೆ.

ಅಂದರೆ ಪ್ರಜಾಪ್ರಭುತ್ವದ ಈ ಕಾಲದಲ್ಲಿ ಸಾಕ್ಷರತೆಯ ಪಾತ್ರ ಬಹಳ ಮಹತ್ವದ್ದು. ಪ್ರತಿಯೊಬ್ಬನು ತನ್ನ ಹಕ್ಕು ಹಾಗೂ ಕರ್ತವ್ಯಗಳನ್ನು ಅರಿತು ನಡೆದುದಾದರೆ, ದೇಶ ಸಮೃದ್ಧವಾಗುತ್ತದೆ. "ವಿದ್ಯಾವಂತನು ಎಚ್ಚರಗೊಳ್ಳದಿದ್ದರೆ ಅನಕ್ಷರತೆ ಭೂತಾಕಾರವಾಗಿ ಬೆಳೆದು ಪ್ರಜಾಪ್ರಭುತ್ವವನ್ನು ಮಾತ್ರವಲ್ಲದೇ ಈ ಭೂಮಿಯ ಮೇಲಿರುವ ಸುಂದರವಾದ ಸಂಸ್ಕೃತಿಯನ್ನು ನಿರ್ಮೂಲನೆಗೊಳಿಸುವ ಕಾಲ ಸನ್ನಿಹಿತವಾಗಬಹುದು"-ಎಂದು ಜ್ಞಾನಪೀಠ ಪ್ರಶಸ್ತಿ ವಿಜೇತ ಕುವೆಂಪು ಎಚ್ಚರಿಕೆಯ ಮಾತುಗಳನ್ನಾಡಿದ್ದಾರೆ. ಆದುದರಿಂದ ಇಂದು ಸಾರ್ವತ್ರಿಕವಾಗಿ, ಸಾರ್ವಕಾಲಿಕವಾಗಿ ಅಂಗೀಕರಿಸಬಹುದಾದ ಗುರಿಗಳಲ್ಲಿ ಒಂದೆಂದರೆ "ಶಿಕ್ಷಣ ಅಭಿವೃದ್ಧಿ" ಎಂದಾಗಿದೆ. ಇಂದು ಅನಕ್ಷರಸ್ಥರಿಗೆ ಓದು, ಬರಹ, ಲೆಕ್ಕಚಾರದ ಜೊತೆಗೆ ಅರಿವು ಮೂಡಿಸಬೇಕಾಗಿದೆ. ಕ್ರಿಯಾಶೀಲತೆಯ ಜೊತೆಗೆ ರಾಷ್ಟ್ರೀಯ ಮೌಲ್ಯಗಳನ್ನು ಸಹ ತಿಳಿಸಬೇಕಾಗಿದೆ. ಈ ಹಂತದಲ್ಲಿ ಕೇರಳ ರಾಜ್ಯದ ಎರನಾಕುಲಂ ಜಿಲ್ಲೆ ಸಂಪೂರ್ಣ ಸಾಕ್ಷರತಾ ಆಂದೋಲನ ಕಾರ್ಯಕ್ರಮ ಅಡಿಯಲ್ಲಿ ದಿನಾಂಕ ೪-೨-೯೦ ರಂದು "ಸಾಕ್ಷರತಾ ಜಿಲ್ಲೆ" ಎಂದು ಘೋಷಿಸಲ್ಪಟ್ಟು ಭಾರತ ದೇಶದಲ್ಲಿ ಸಾಕ್ಷರತೆ ಸಾಧನೆಯಲ್ಲಿ ಮೈಲುಗಲ್ಲಾಗಿ ಇತಿಹಾಸದ ಪುಟದಲ್ಲಿ ಬರೆಯಲ್ಪಟ್ಟಿತು. ಕೇರಳ ರಾಜ್ಯದ ಎರ್ನಕುಲಂ ಕೊಟ್ಟಾಯಂ ಪ್ರಯೋಗ ಇಡೀ ರಾಷ್ಟ್ರಕ್ಕೆ ಸಾಕ್ಷರತೆಯಲ್ಲಿ ಸಂಪೂರ್ಣ ಸಾಧನೆ ಮಾಡಲು ಸಾಧ್ಯವೆಂಬ ಅಂಶವನ್ನು ಎಲ್ಲರಿಗೂ ಮನದಟ್ಟು ಮಾಡುವಲ್ಲಿ ಸಫಲವಾದವು. ಈ ಪ್ರಯೋಗಗಳ ಸಾಧನೆ ಕೇಂದ್ರ ಸರಕಾರಕ್ಕೆ ರಾಷ್ಟ್ರೀಯ ಸಾಕ್ಷರತಾ ನಿಯೋಗಕ್ಕೆ ಸಂಪೂರ್ಣ ಸಾಕ್ಷರತಾ ಅಂದೋಲನ ರಾಷ್ಟ್ರದ ಇತರ ಜಿಲ್ಲೆಗಳಲ್ಲಿ ಹಮ್ಮಿಕೊಳ್ಳಲು ಸ್ಫೂರ್ತಿ ನೀಡಿದವು. ರಾಷ್ಟ್ರೀಯ ಸಾಕ್ಷರತಾ ಆಂದೋಲನವು ದೇಶವ್ಯಾಪಿ ನಡೆಯುತ್ತಿದ್ದು. ದಿ|| ರಾಜೀವಗಾಂಧಿಯವರ ಈ ಮಹತ್ವಾಕಾಂಕ್ಷಿ ಯೋಜನೆಯ ಅನುಷ್ಠಾನದಿಂದಾಗಿ! ಅನೇಕ ಜಿಲ್ಲೆಗಳು ಸಂಪೂರ್ಣ ಸಾಕ್ಷರತೆಯನ್ನು ಸಾಧಿಸುವಲ್ಲಿ ಯಶಸ್ವಿಯಾಗಿವೆ. ಜನರಿಗೆ ಗಣನೀಯ ಜಾಗೃತಿ ಮತ್ತು ಅರಿವನ್ನು ಉಂಟುಮಾಡಿವೆ. ಆಯಾ ಪ್ರದೇಶದಲ್ಲಿ ಸ್ವಯಂ ಸೇವಾ ಸಂಸ್ಥೆಗಳು, ರಾಜಕೀಯ ಪಕ್ಷಗಳು, ಸ್ಥಾನಿಕ ಮುಖಂಡರು, ಸರಕಾರಿ, ಅರೆಸರಕಾರಿ ನೌಕರವರ್ಗ ಸಾಮೂಹಿಕ ಹೊಣೆಗಾರಿಕೆಯಿಂದ ಕಾರ್ಯಸಾಧನೆಗೆ ಕಂಕಣಬದ್ಧರಾದರೆ ಮಾತ್ರ ಸಂಪೂರ್ಣಯಶಸ್ಸು ಇಲ್ಲಿ

ಲಭ್ಯ. ಏಕೆಂದರೆ "ಸಾಕ್ಷರತಾ ಆಂದೋಲನ" ಒಂದು ಜನಾಂದೋಲನವಾಗಿದ್ದು. ಈ ದಿಸೆಯಲ್ಲಿ ಸಹಸ್ರಾರು ಜನರು ವಿವಿಧ ಹಂತಗಳಲ್ಲಿ ಭಾಗವಹಿಸುವ ನಿರೀಕ್ಷೆ ಇರುತ್ತದೆ. ಆಂದೋಲನದ ವಿವಿಧ ಹಂತಗಳಲ್ಲಿ ಅಸ್ತಿತ್ವದಲ್ಲಿ ತರಲಾಗುವ ಸಮಿತಿಗಳ ಮೂಲಕ ಜನರನ್ನು ತಲುಪಬೇಕಾಗುತ್ತದೆ. ಸಾಕ್ಷರತೆಯನ್ನು ಸಾಧಿಸದೆ ಸಾಮಾನ್ಯ ಆಡಳಿತೆಯ ಯಶಸ್ಸು ಶೂನ್ಯ. ಸಾಕ್ಷರತೆಯ ಕಾರ್ಯಕ್ರಮ ಶಿಕ್ಷಣವನ್ನು ಒದಗಿಸುವ ಕಾರ್ಯಕ್ರಮ. ಅಂತೆಯೇ ಬಹಳಷ್ಟು ಭಾರತೀಯ ಮಹಿಳೆಯರು ಅನಕ್ಷರಸ್ಥರು. ಅವರಿಗೆ ಮೊದಲು ಶಿಕ್ಷಣ ನೀಡಬೇಕಾಗಿದೆ. "ಸಾಕ್ಷರತೆ ಅನುಭವ ಭಂಡಾರಕ್ಕೆ ಬೀಗದ ಕೈ" ಎಂದು ವೇಯಿಸ್ ರೀಡ ಹೇಳಿರುವ ಹೇಳಿಕೆಯನ್ನು ಕಾರ್ಯಸಾಧನೆಗ್ಯೆದು ತೋರಿಸಬೇಕಾಗಿದೆ. ಭಾರತದ ಇತರ ಜಿಲ್ಲೆಗಳಲ್ಲಿ ಸಾಕ್ಷರತಾ ಆಂದೋಲನ ಹಮ್ಮಿಕೊಂಡಂತೆ ಕರ್ನಾಟಕದ ಬಳ್ಳಾರಿ ಜಿಲ್ಲೆಯಲ್ಲೂ ಸಾಕ್ಷರತಾ ಆಂದೋಲನವನ್ನು ಹಮ್ಮಿಕೊಳ್ಳಲಾಗಿದೆ.

# ಅಧ್ಯಾಯ-೬

## ಅನೌಪಚಾರಿಕ ಶಿಕ್ಷಣದಲ್ಲಿ ಸಾಕ್ಷರತಾ ಕಾಯಕ್ರಮ

## ಬಳ್ಳಾರಿ ಜಿಲ್ಲಾ ಸಂಪೂರ್ಣ ಸಾಕ್ಷರತಾ ಕಾರ್ಯಕ್ರಮ ೧೯೯೪

೧. ಬಳ್ಳಾರಿ ಜಿಲ್ಲೆಯಲ್ಲಿ ಶಿಕ್ಷಣ

೨. ಬಳ್ಳಾರಿ ಜಿಲ್ಲಾ ಸಂಪೂರ್ಣ ಸಾಕ್ಷರತಾ ಕಾರ್ಯಕ್ರಮ ೧೯೯೪

# ಅಧ್ಯಾಯ-೬

## ಅನೌಪಚಾರಿಕ ಶಿಕ್ಷಣದಲ್ಲಿ ಸಾಕ್ಷರತಾ ಕಾಯಕ್ರಮ

## ಬಳ್ಳಾರಿ ಜಿಲ್ಲಾ ಸಂಪೂರ್ಣ ಸಾಕ್ಷರತಾ ಕಾರ್ಯಕ್ರಮ ೧೯೯೪

### ೬.೧ ಬಳ್ಳಾರಿ ಜಿಲ್ಲೆಯಲ್ಲಿ ಶಿಕ್ಷಣ

ರಾಜಕೀಯವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ತೀರ ಹಿಂದುಳಿದ ಜಿಲ್ಲೆ ಬಳ್ಳಾರಿ. ಬಳ್ಳಾರಿ ಜಿಲ್ಲೆಯು ನಮ್ಮ ದೇಶದದಲ್ಲಿಯೇ ಅತ್ಯಂತ ಪುರಾತನ ಇತಿಹಾಸವನ್ನು ಹೊಂದಿರುವ ಜಿಲ್ಲೆಗಳಲ್ಲಿ ಒಂದು. ಬಳ್ಳಾರಿ ಜಿಲ್ಲೆಯ ನಾಗರಿಕತೆಯುಶಿಲಾಯುಗದಿಂದ ನವೀನ ಯುಗದವರೆಗವಿಗೂ ಸಾಗಿ ಬಂದಿದೆ. ಸಂಗನಕಲ್ಲು, ತೆಕ್ಕಲುಕೋಟೆ, ಬೇಡರ ಬೆಳಗಲ್ಲು ಮುಂತಾದ ಕಡೆಗಳಲ್ಲಿ ಇತಿಹಾಸಕಾರರು ಸಂಶೋಧಿಸಿದ್ದಾರೆ. ಮಾನವಕುಲದ ಎಲ್ಲಾ ಘಟ್ಟಗಳ ಅಖಂಡವಾದ ಬೆಳವಣಿಗೆ ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬಂದಿದೆ. ಬಳ್ಳಾರಿ ಜಿಲ್ಲೆಯ ಐತಿಹಾಸಿಕ ಪರಂಪರೆಯನ್ನು ಅವಲೋಕಿಸಿದಾಗ ಈ ಜಿಲ್ಲೆಯು ಮೌರ್ಯ ಚಕ್ರವರ್ತಿ ಅಶೋಕನ ಕಾಲದಿಂದ ಪ್ರಾರಂಭವಾಗಿ, ವಿಜಯನಗರ, ನಿಜಾಮರ, ಟಿಪ್ಪುಸುಲ್ತಾನ್,ಮತ್ತು ಬ್ರಿಟಿಷರ ಆಡಳಿತಕ್ಕೆ ಒಳಪಟ್ಟು ಕಾಲದ ಕುಲುಮೆಯಲ್ಲಿ ಬೆಂದು ಪುಟಕಿಟ್ಟ ಚಿನ್ನವಾಗಿ ಅವುಗಳ ಪ್ರಭಾವದಿಂದ ತನ್ನ ಪ್ರತಿಭಾ ಸಂಪನ್ನವಾದ ಸಾಂಸ್ಕೃತಿಕ ಪರಂಪರೆಯನ್ನು, ಸಮೃದ್ಧಗೊಳಿಸಿ ಕೊಂಡಿದ್ದಕ್ಕೆ ಸಿಕ್ಕಿರುವ ಸಾವಿರಾರು ಶಾಸನಗಳು, ಕೈಫಿಯತರಗಳು, ಸ್ಥಳಪುರಾಣಗಳು, ವಾಸ್ತುಶಿಲ್ಪಗಳು, ವೀರಗಲ್ಲು ಮತ್ತು ಮಾಸ್ತಿಗಲ್ಲು ವಿಪುಲವಾದ ಸಾಹಿತ್ಯ ಪ್ರಕಾರಗಳು ಸಾಕ್ಷಿ ನುಡಿಯುತ್ತವೆ. ಅನೇಕ ರಾಜಮನೆತನಗಳು ನಿರಂತರವಾಗಿ ಈ ಜಿಲ್ಲೆಯನ್ನು ಆಳಿವೆ. ಕೀರ್ತಿ, ಸಂಪತ್ತು ಶ್ರೇಯಸ್ಸುಗಳನ್ನು ಗಳಿಸಿವೆ.

ಬಳ್ಳಾರಿ ಜಿಲ್ಲೆಯೆಂದರೆ ಬಿಸಿಲಿನ ಜಿಲ್ಲೆಯೆಂದೇ ಜನಜನಿತವಾದ ಮಾತು ಬೇರೆ ಇದೆ. ಕಬ್ಬಿಣದ ಬೀಡು ಎನ್ನುವ ಮಾತು ಸಹ ಇದೆ. ಶೇಕಡ ೩೮ರಷ್ಟು ಉತ್ಕೃಷ್ಟತೆಯು ಕಬ್ಬಿಣಾಂಶ ಹೊಂದಿದ ಅದುರು ಇಲ್ಲಿಯದು. ಕರ್ನಾಟಕದ ಮಾತೆಯಂತೆ ಬಳ್ಳಾರಿ ಜಿಲ್ಲೆ ಹಲವು ವೈವಿಧ್ಯ-ವೈಶಿಷ್ಟ್ಯ ಹಾಗೂ ವಿಭಿನ್ನತೆಗಳಿಂದ ಕೂಡಿದೆ. ಗತವೈಭವದ ವಿಜಯನಗರ ಸಾಮ್ರಾಜ್ಯದ ಇತಿಹಾಸ ಸಾರುವ ಹಾಗೂ ಪ್ರಕೃತಿದತ್ತ ಬೆಟ್ಟದ ಸಾಲುಗಳಿಂದ ಕೂಡಿ ಜಿಲ್ಲೆಯ ಜೀವನಾಡಿಯಂತಿರುವ ತುಂಗಭದ್ರಾನದಿಯ ಮಹತ್ತರ ಉಪಯೋಗದಿಂದ

ಜಿಲ್ಲೆಯ ರೈತರಿಗೆ ಆಶಾದೀಪವಾಗಿದೆ. 'ಗಂಗಾಸ್ನಾನ-ತುಂಗಾಪಾನ' ಎಂಬ ನಾಣ್ಣುಡಿಯು ಸಾರ್ಥಕ ಸಾರಿದ ಬಳ್ಳಾರಿ ಜಿಲ್ಲೆ ಜಾಗತಿಕ ಮಹತ್ವದ ಐತಿಹಾಸಿಕ ಘಟನೆಗಳ ಹಿನ್ನೆಲೆ ಹೊಂದಿ, ಇಂದಿಗೂ ಎಲ್ಲಾ ದೆಸೆಗಳಲ್ಲಿ ವೈವಿಧ್ಯಮಯ ಹಾಗೂ ವೈಶಿಷ್ಟ್ಯಪೂರ್ಣವೆನಿಸಿ ಮುನ್ನಡೆದಿದೆ.

ಭೌಗೋಳಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಕರ್ನಾಟಕದ ಹೃದಯದಂತಿರುವ ಬಳ್ಳಾರಿ ಜಿಲ್ಲೆಯು ಬಹಳ ವಿಶಿಷ್ಟ ಹಾಗೂ ವಿಶೇಷವಾದ ಸ್ಥಾನವನ್ನು ಪಡೆದಿದೆ. ಉತ್ತರಕ್ಕೆ ರಾಯಚೂರು, ದಕ್ಷಿಣಕ್ಕೆ ಚಿತ್ರದುರ್ಗ, ಪೂರ್ವಕ್ಕೆ ಅನಂತಪುರ ಮತ್ತು ಕರ್ನೂಲು, ಪಶ್ಚಿಮಕ್ಕೆ ಧಾರವಾಡ ಜಿಲ್ಲೆಗಳಿಂದ ಸುತ್ತುವರೆಯಲ್ಪಟ್ಟಿದೆ. ಜೊತೆಗೆ ಕರ್ನಾಟಕದ ಮಧ್ಯದ ಸ್ಥಾನದಲ್ಲಿರುವ ದಕ್ಷಿಣೋತ್ತರವಾಗಿ ನೋಡಿದರೆ ಬಳ್ಳಾರಿ ಜಿಲ್ಲೆಯು ಈಶಾನ್ಯ ಮತ್ತು ನೈರುತ್ಯ ದಿಕ್ಕಿನಲ್ಲಿ ಉದ್ದಕ್ಕೆ ಹಬ್ಬಿದೆ. ಈ ಜಿಲ್ಲೆಯು ೧೪' ೩೦ ಮತ್ತು ೧೫'೫೦ರ ಅಕ್ಷಾಂಶಗಳು ಮತ್ತು ೭೫' ೪೦ ಮತ್ತು ೭೭'೧೧ ರೇಖಾಂಶಗಳ ಮಧ್ಯದಲ್ಲಿದೆ. ಈ ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತೀರ್ಣ ೯,೮೯೫.೫ ಚ.ಕಿ.ಮೀ ನಷ್ಟಿದೆ. ೧೯೯೧ರ ಜನಗಣತಿಯ ಪ್ರಕಾರ ಬಳ್ಳಾರಿ ಜಿಲ್ಲೆಯು ೧೮,೯೨,೭೧೫ ಜನಸಂಖ್ಯೆಯನ್ನು ಹೊಂದಿದೆ. ಈ ಜಿಲ್ಲೆಯ ಭೌಗೋಳಿಕ ವಿಸ್ತೀರ್ಣವನ್ನು ನೋಡಿದಾಗ ಕರ್ನಾಟಕ ರಾಜ್ಯದ ಭೂ ಭಾಗದಲ್ಲಿಯ ಶೇಕಡಾ ೫.೧೫ ಅಂಶ ಭೂಭಾಗವನ್ನು ಈ ಜಿಲ್ಲೆಯು ಆಕ್ರಮಿಸಿಕೊಂಡಿದ್ದು, ರಾಜ್ಯ ಹೊಂದಿರುವ ಒಟ್ಟು ಜನಸಂಖ್ಯೆಯ ಶೇಕಡಾ ೪.೨೨ ಅಂಶದಷ್ಟು ಜನಸಂಖ್ಯೆಯನ್ನು ಹೊಂದಿದೆ. ಈ ಜಿಲ್ಲೆಯು ಜನಸಾಂದ್ರತೆಯ ದೃಷ್ಟಿಯಿಂದಲೂ ಮಹತ್ತರದ್ದಾಗಿದೆ. ಒಂದು ಚದುರ ಕಿಲೋಮೀಟರಿಗೆ ೧೯೧ ಜನಸಾಂದ್ರತೆ ಹೊಂದಿದೆ. ೧೯೯೧ರ ಜನಗಣತಿಯ ಪ್ರಕಾರ ರಾಜ್ಯದ ಜಿಲ್ಲೆಗಳಲ್ಲಿ ೧೩ನೇ ಸ್ಥಾನ ಪಡೆದಿದ್ದಾಗಿದೆ. ಜನಸಾಂದ್ರತೆ ಪ್ರತಿ ಚ.ಕಿ.ಮೀಟರಿಗೆ ಹೊಸಪೇಟೆ ತಾಲೂಕಿನಲ್ಲಿ ಅತಿಹೆಚ್ಚು ೩೩೫ ಮತ್ತು ಅದರ ನೆರೆಯ ಸಂಡೂರು ತಾಲೂಕಿನಲ್ಲಿ ಅತಿ ಕಡಿಮೆ ೧೨೪ ಇದೆ. ಹೊಸಪೇಟೆಯ ಸುತ್ತಮುತ್ತಲಿನಲ್ಲಿರುವ ಕಬ್ಬಿಣದ ಗಣಿಗಳು ಮತ್ತು ಅದನ್ನಾಧರಿತ ಉಪ ಉದ್ಯಮಗಳು ಮತ್ತು ನೀರಾವತಿ ಸೌಲಭ್ಯಗಳೇ ಈ ತಾಲೂಕಿನ ಹೆಚ್ಚಿನ ಜನ ಸಾಂದ್ರತೆಗೆ ಕಾರಣಗಳು ಎಂದು ಹೇಳಬಹುದು.

ಬಳ್ಳಾರಿ ಜಿಲ್ಲೆಯು ಆಡಳಿತದ ಅನುಕೂಲಕ್ಕಾಗಿ ಎಂಟು ತಾಲೂಕುಗಳನ್ನು ಹೊಂದಿದೆ. ಕ್ರಮವಾಗಿ ಬಳ್ಳಾರಿ, ಹೊಸಪೇಟೆ, ಸಂಡೂರು, ಹಡಗಲಿ, ಕೂಡ್ಲಿಗಿ, ಸಿರುಗುಪ್ಪ, ಹಗರಿಬೊಮ್ಮನಹಳ್ಳಿ ಮತ್ತು ಹರಪನಹಳ್ಳಿಗಳನ್ನು ಹೊಂದಿದೆ. ಜನ್ನನ 'ಯಶೋಧರ ಚರಿತ್ರೆ'ಯಲ್ಲಿಯೂ ಬಳ್ಳಾರಿಯ ಉಲ್ಲೇಖವಿದೆ. ಬಳ್ಳಾರಿಗೆ ಈ ಹೆಸರು ಬರಲು ಎರಡು ದಂತ ಕಥೆಗಳಿವೆ. ಪ್ರಗತಿಪರವಾದ ಹೋರಾಟಗಳು ಬಳ್ಳಾರಿ ಜಿಲ್ಲೆಯಲ್ಲಿ

ನಡೆಯುತ್ತಿವೆ. ಆದರೂ ಶೈಕ್ಷಣಿಕವಾಗಿ ಹಿನ್ನಡೆಯನ್ನು ಅನುಭವಿಸಿದೆ. ಒಂದು ಕಾಲದಲ್ಲಿ ಬಳ್ಳಾರಿ ಜಿಲ್ಲೆ ಸಾಂಸ್ಕೃತಿಕವಾಗಿ, ಭೌಗೋಳಿಕವಾಗಿ, ಚಾರಿತ್ರಿಕವಾಗಿ, ಸಂಪತ್ಭರಿತವಾದ ಜಿಲ್ಲೆಯಾಗಿತ್ತು. ಒಂದು ರೀತಿಯಲ್ಲಿ ನಿರ್ಲಕ್ಷ್ಯಕ್ಕೆ ಒಳಗಾದಾಗ ಶೈಕ್ಷಣಿಕವಾಗಿ ಹಿನ್ನಡೆಯನ್ನು ಅನುಭವಿಸಿತು ಎಂದು ಹೇಳಬಹುದು. ಪ್ರಜಾಪ್ರಭುತ್ವದಲ್ಲಿ ಯಾವುದಾದರೂ ಒಂದು ಪ್ರದೇಶ ನಿರ್ಲಕ್ಷ್ಯಕ್ಕೆ ಒಳಗಾಗುವುದಕ್ಕೆ ಏನು? ಕಾರಣ ಎಂಬುವುದಕ್ಕೆ ಬಳ್ಳಾರಿ ಜಿಲ್ಲೆ ಒಂದು ನಿದರ್ಶನ. ಪ್ರಜಾಪ್ರಭುತ್ವದ ಸೌಲಭ್ಯವನ್ನು ಹಕ್ಕುಬಾದ್ಯತೆಗಳನ್ನು ಅನುಭವಿಸಲು ಜನರಿಗೆ ಶಿಕ್ಷಣ ಬೇಕು. ಶೈಕ್ಷಣಿಕ ಪರಿಸರದಿಂದ ಮಾತ್ರ ಜನರಿಗೆ ಜಾಗೃತಿ ಉಂಟಾಗುತ್ತದೆ. ರಾಜಕೀಯ ಪ್ರಜ್ಞೆ ಬೆಳೆಯುತ್ತದೆ. ರಾಜಕೀಯ ನಿರ್ಲಕ್ಷ್ಯದಿಂದ ಜನರ ಗಮನ ಯವುದೇ ಹಕ್ಕುಬಾದ್ಯತೆ ಕಡೆ ಹೋಗುವುದಿಲ್ಲ. ಎಲ್ಲ ಹಂತದ ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಶಿಕ್ಷಣದಿಂದ ಪ್ರಜ್ಞೆ ಮತ್ತು ಪರಿಸರ ನಿರ್ಮಾಣವಾಗಿ ಜನರ ಒಲವು ಮತ್ತು ಜನರ ಚಿಂತನೆಗಳು ಪ್ರಗತಿಪಥದತ್ತ ನಡೆಯುತ್ತವೆ. ಈಗೀಗ ಬಳ್ಳಾರಿ ಜಿಲ್ಲೆಯಲ್ಲಿ ಶೈಕ್ಷಣಿಕ ವಾತಾವರಣ ನಿರ್ಮಾಣವಾಗುತ್ತಿದೆ. ಶಿಕ್ಷಣದಿಂದ ಪ್ರಗತಿ ಸಾಧ್ಯ ಎಂಬುದು ಜನರಿಗೆ ಮನವರಿಕೆಯಾಗುತ್ತಿದೆ.

ಬಳ್ಳಾರಿ ಜಿಲ್ಲೆ ಹಿಂದೆ ಬ್ರಿಟಿಷ್ ಅಧಿಕಾರಿಗಳ ಆಳ್ವಿಕೆಗೆ ಒಳಗಾದಾಗ ಶೈಕ್ಷಣಿಕ ಪ್ರಗತಿ ಕಂಡಿತು ಎಂದು ಹೇಳಬಹುದು. ಜೊತೆಗೆ, ಬ್ರಿಟಿಷ್ ಅಧಿಕಾರಿಗಳು ತಮ್ಮ ಸೈನ್ಯದ ನೆಲೆಯಾಗಿ ಮತ್ತು ಆಡಳಿತ ಜಿಲ್ಲಾ ಕೇಂದ್ರವಾಗಿ ಬಳ್ಳಾರಿ ನಗರವನ್ನು ಅಭಿವೃದ್ಧಿಪಡಿಸಿದರು. ಬ್ರಿಟಿಷರು ಇಲ್ಲಿ ೧೯ನೇ ಶತಮಾನದಲ್ಲಿ ನಿರ್ಮಿಸಿದ ನಯನ ಮನೋಹರ ಕಟ್ಟಡಗಳು ಈಗಲೂ ಗಟ್ಟಿಯಾಗಿವೆ. ಆಂಗ್ಲರು ಆಳಿದ ಕುರುಹಾಗಿ ಬಳ್ಳಾರಿ ನಗರದ ಬಡಾವಣೆಗಳಿಗೆ ಕೌಲ್ ಬಜಾರ್, ಮಿಲ್ಲರ್ ಪೇಟೆ, ಬ್ರುಸ್ ಪೇಟೆ ಎಂಬ ಹೆಸರು ಈಗಲೂ ಇವೆ. ಬ್ರಿಟಿಷರ ಆಳ್ವಿಕೆಯ ನಂತರ ರಾಜ್ಯ ಪುನರ್ವಿಂಗಡಣೆಗೆ ಮುನ್ನ ಮದ್ರಾಸ್ ಅಧಿಪತ್ಯದಲ್ಲಿದ್ದ ಬಳ್ಳಾರಿ ೧-೧೦-೧೯೫೩ರಲ್ಲಿ ಮೈಸೂರು ಸಂಸ್ಥಾನಕ್ಕೆ ಸೇರಿತು. ಆಗಿನ ಮೈಸೂರು ರಾಜ್ಯದ ಮುಖ್ಯಮಂತ್ರಿಯಾಗಿದ್ದ ದಿ.ಕೆ. ಹನುಮಂತಯ್ಯನವರ ಸತತ ಪರಿಶ್ರಮದಿಂದ ಬಳ್ಳಾರಿ ಜಿಲ್ಲೆಯ ಏಳು ತಾಲೂಕುಗಳೂ ಮೈಸೂರು ಸಂಸ್ಥಾನಕ್ಕೂ, ಉಳಿದ ಮೂರು ತಾಲೂಕುಗಳು ಆಂಧ್ರ ಪ್ರದೇಶಕ್ಕೂ ವಿಲೀನವಾದವು. ಹರಪನಹಳ್ಳಿ, ಹಡಗಲಿ, ಸಂಡೂರು, ಹೊಸಪೇಟೆ, ಕೂಡ್ಲಿಗಿ, ಸಿರುಗುಪ್ಪ ಮತ್ತು ಬಳ್ಳಾರಿ ತಾಲೂಕುಗಳು ಮೈಸೂರು ಸಂಸ್ಥಾನಕ್ಕೆ ಸೇರಿ ಉಳಿದ ಮೂರು ತಾಲೂಕುಗಳಾದ ರಾಯದುರ್ಗ, ಆದವಾನಿ, ಆಲೂರು ಆಂಧ್ರಪ್ರದೇಶಕ್ಕೆ ಸೇರಿದವು. ಬಳ್ಳಾರಿ ತಾಲೂಕು ಮೈಸೂರು ಸಂಸ್ಥಾನಕ್ಕೆ ಸೇರಲು ದೊಡ್ಡ ಹೋರಾಟ ಮಾಡಬೇಕಾಗಿ ಬಂದಿತು.

ಅನೇಕ ಸಂಘ-ಸಂಸ್ಥೆಗಳು ಬಳ್ಳಾರಿ ಜಿಲ್ಲೆಯ ಮಹನೀಯರ ಶ್ರಮದಿಂದ ಕೇಂದ್ರ ಸರ್ಕಾರ ನೇಮಿಸಿದ್ದ ನ್ಯಾಯಮೂರ್ತಿ ಶ್ರೀ ಲಕ್ಷ್ಮೀಶಂಕರ ಮಿಶ್ರಾ ಅವರಿಗೆ ಮೈಸೂರು ರಾಜ್ಯದ ಪರ ಅಂಶಗಳನ್ನು ಒದಗಿಸಿ ಬಳ್ಳಾರಿ ತಾಲೂಕು ಮೈಸೂರು ರಾಜ್ಯದಲ್ಲಿ ಸೇರಿಸಲು ಯಶಸ್ವಿಯಾದರು. ಬಳ್ಳಾರಿನಗರ ಮೈಸೂರು ರಾಜ್ಯಕ್ಕೆ ಸೇರಿದ ನಂತರ ಭಾಷಾ ಬಾಂಧವ್ಯಕ್ಕೆ ಕುಂದು ಬಂದಿಲ್ಲ. ಭಾಷಾ ಸೌಹಾರ್ದಕ್ಕೆ ಎತ್ತಿದ ಕೈಯಾಗಿದೆ. ವಿಜಯನಗರ ಕಾಲದಿಂದಲೂ ಉಭಯ ಭಾಷೆಗಳಾದ ಕನ್ನಡ, ತೆಲುಗು ಭಾಷೆಗಳಿಗೆ ಸರಿಯಾದ ಪ್ರೋತ್ಸಾಹ ದೊರಕಿದೆ.

೧೯೩೮ರಲ್ಲಿ ಬಳ್ಳಾರಿಯಲ್ಲಿ ನಡೆದ ಅಖಿಲ ಭಾರತ ೨೩ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಆರ್.ಆರ್.ದಿವಾಕರರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಬಳ್ಳಾರಿಯ ಮಹಿಮೆಯನ್ನು ಕುರಿತು ಹೀಗೆ ಹೇಳಿದ್ದಾರೆ. "ಬಳ್ಳಾರಿ ಕರ್ನಾಟಕದ ಅತ್ಯಪೂರ್ವ ಸಾಮ್ರಾಜ್ಯದ ತವರೂರು. ಕರ್ನಾಟಕದ ಸಂಸ್ಕೃತಿ ತೇಜಃ ಪುಂಜವಾಗಿ ಬೆಳಗಿದ ಬೀಡು. ಈ ಜಿಲ್ಲೆಯಲ್ಲಿ ಅಡ್ಡಾಡುವಾಗ ನಮ್ಮ ಕಣ್ಣಿಗೆ ಬೀಳುವ ಗತ ವೈಭವದ ಅವಶೇಷಗಳು ನಮ್ಮ ಅಂತಃಕರಣದಲ್ಲಿ ಅಲ್ಲೋಲ, ಕಲ್ಲೋಲವನ್ನುಂಟು ಮಾಡುತ್ತಿವೆ. ವಿಜಯನಗರ ಎಂದೊಡನೆ ಪ್ರತಿಯೊಬ್ಬ ಕನ್ನಡಿಗನ ನಾಳಗಳಲ್ಲಿ ರಕ್ತವು ಕುದಿದೆದ್ದು ಉಕ್ಕೇರಲು ಆರಂಭಿಸುತ್ತದೆ. ಗತ ಪರಾಕ್ರಮದ ಬಗ್ಗೆ ಹೆಚ್ಚಿನ ಹೆಮ್ಮೆ ಮತ್ತು ಅದ್ಭುತ ಆದರ. ಈಗಿನ ಅಧೋಗತಿಯ ಬಗ್ಗೆ ಅತಿಶಯ ಖಿನ್ನತೆ, ಮುಂದಿನ ಭವಿಷ್ಯದ ಬಗ್ಗೆ ಅಪಾರವಾದ ಆಸೆ ಇವು ಒಮ್ಮೆಲೇ ನಮ್ಮ ಎದೆಯನ್ನು ಆವರಿಸುತ್ತವೆ". ಎಂದು ಹೇಳಿದ್ದಾರೆ. ಈ ಮಾತುಗಳಲ್ಲಿ ಈ ಜಿಲ್ಲೆಯ ಗತವೈಭವದ ಜೊತೆಗೆ ಮುಂದಿನ ಭವಿಷ್ಯದ ಬಗ್ಗೆ ಒಟ್ಟೊಟ್ಟಿಗೆ ಪ್ರಸ್ತಾಪಿಸಿದ್ದಾರೆ.

೧೯೫೮ರಲ್ಲಿ ಬಳ್ಳಾರಿಯಲ್ಲಿ ನಡೆದ ೪೦ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, ಸಮ್ಮೇಳನದ ಅಧ್ಯಕ್ಷತೆ ವಹಿಸಿರುವ ನವ್ಯಕಾವ್ಯ ಪ್ರವರ್ತಕರಾದ ಶ್ರೀ ವಿನಾಯಕ ಕೃಷ್ಣಗೋಕಾಕರು, ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ, ಬಳ್ಳಾರಿಯ ಬಗ್ಗೆ ಮಾತನಾಡುತ್ತಾ "ವಿಜಯನಗರದ ಮಹಾದ್ವಾರದ ಮಗ್ಗುಲಲ್ಲಿ ಬಂಡೆಗಲ್ಲಿನ ಕೋಟೆಯಾಗಿ ನಿಂತು, ಬಳ್ಳಾರಿಯು ಚಿತ್ತಾಪಹಾರಿಯಾಗಿ ಬೆಳೆಯಿತು. ವಿಜಯನಗರದಂತೆ, ಸಮನ್ವಯ ದೃಷ್ಟಿಯಿಂದ ಬೆಳೆಯಿತು. ಆಂಧ್ರರನ್ನು ಕನ್ನಡಿಗರನ್ನು ಒಳಗೊಂಡು ಸಮನ್ವಯವೇ ದೂರಾನ್ವಯವಾದಾಗ ಕನ್ನಡ ಕೂಡ ಪ್ರಶ್ನೆಗಳಲ್ಲಿ ಒಂದಾಗಿ ಬಗೆ ಕದಡಿಸಿ ಮತ್ತೆ ಕನ್ನಡವನ್ನೇ ನಂಬಿಕೊಂಡಿತು. ವಿಜಯನಗರವು ಕನ್ನಡಿಗರು ಕಂಡ ಕನಸಿನ ಸಾಮ್ರಾಜ್ಯ. ಅನೇಕಾನೇಕ ಸಾಮ್ರಾಜ್ಯಗಳಂತೆ ಅದು ಇಂದು ಮಾಯವಾಗಿದೆ. ಆದರೆ ಹಂಪೆಯ ಸತ್ವ ಫಲೋನ್ಮುಖವಾದ ತಪಸ್ಸಿನಂತೆ ಮತ್ತೆ ಏಕೀಕೃತ ಕರ್ನಾಟಕದಲ್ಲಿ

ಬೇರುಗೊಂಡಿದೆ. ಬರಲಿರುವ ಪುನರುಜ್ಜೀವನದ ದೈವತೆಗಳಾಗಿ ಹಂಪೆಯ ವಿರೂಪಾಕ್ಷನೂ, ಕನ್ನಡದ ಆತ್ಮ ಪ್ರತಿಷ್ಠಾನದ ಕೇಂದ್ರವಾದ ಹಂಪೆಯ ಸೀಮಾ ಪಾಲಕರಾಗಿ ಮತ್ತೆ ಗೆಲುವಿನ ಮಂದಹಾಸವನ್ನು ಬೀರುತ್ತಿದ್ದಾರೆ. ಕನ್ನಡದ ನೆಲದಲ್ಲಿ ವಿಶ್ವಧರ್ಮದ ಬೀಜಾರೋಪನವನ್ನೇ ಮಾಡಲಿದ್ದಾರೆ"- ಎಂದು ಹೇಳಿದ ಮಾತು ಅತ್ಯಂತ ಮನನೀಯವಾದುದಾಗಿದೆ.

ಭೌಗೋಳಿಕವಾಗಿ ಸುಮಾರು ೫೦ ರಷ್ಟು ಭಾಗವನ್ನು ಈ ಜಿಲ್ಲೆಯ ಕೃಷಿ ಆವರಿಸಿಕೊಂಡಿದೆ. ೧೯೭೨ರ ಒಂದು ವರದಿಯಂತೆ, ಜಿಲ್ಲೆಯ ಜನಸಂಖ್ಯೆಗೆ ಶೇ.೭೩ ಫಲವನ್ನು ಒದಗಿಸುತ್ತದೆ. ಜಿಲ್ಲೆಯ ಆದಾಯದಲ್ಲಿ ಕೃಷಿಯಿಂದಲೇ ಶೇ.೬೨ ಸಾಧ್ಯವಾಗಿದೆ ಎಂಬುದು ಈ ಜಿಲ್ಲೆಯ ಕೃಷಿಯ ಪಾತ್ರವನ್ನು ತೋರಿಸುತ್ತದೆ. ೧೯೫೧ರ ಒಂದು ದಾಖಲೆ ಇಲ್ಲಿಯ ಜನಸಂಖ್ಯೆಯಲ್ಲಿ ರೈತಾಪಿ ಜನಗಳೇ ಅಧಿಕವಾಗಿದ್ದು, ಫಲಾನುಭವಿ ಸಂಖ್ಯೆ ಕಡಿಮೆಯಿದೆ ಎಂಬುದೂ ಸ್ವಾವಲಂಬನೆಯನ್ನೇ ಹೇಳುತ್ತದೆ. ಈ ಜಿಲ್ಲೆಯು ಸಂಪೂರ್ಣವಾಗಿ ತುಂಗಭದ್ರಾ ಜಲಾನಯನ ಪ್ರದೇಶಕ್ಕೆ ಸೇರುತ್ತದೆ. ಪ್ರಮುಖವಾಗಿ ತುಂಗಾಭದ್ರಾ ಜಲಾಶಯದ ನೀರಾವರಿ ಪ್ರದೇಶದಲ್ಲಿ ವ್ಯವಸಾಯವು ಸಂಪತ್ತನ್ನು ತಂದಿದೆ. ಬಳ್ಳಾರಿ ಜಿಲ್ಲೆ ಕೃಷಿಯಿಂದ ಸ್ವಾಲಂಬನೆಯನ್ನೂ, ಆದಾಯವನ್ನೂ, ನಿರುದ್ಯೋಗವನ್ನೂ ಪ್ರಮಾಣದ ಪರಿಹಾರವನ್ನೂ ಕಂಡುಕೊಂಡಿದೆ. ಈಗೀಗ ಕೈಗಾರಿಕೆಗಳ ಸ್ಥಾಪನೆಯಿಂದ, ಜಿಂದಾಲ್ ನಂತಹ ವಿಜಯನಗರ ಉಕ್ಕು ಕಾರ್ಖಾನೆಗಳಿಂದ ರಾಷ್ಟ್ರಮಟ್ಟದ ನಕ್ಷೆಯಲ್ಲಿ ಬಳ್ಳಾರಿ ಜಿಲ್ಲೆ ತನ್ನದೇ ಆದ ಸ್ಥಾನವನ್ನು ಪಡೆದಿದೆ.

ಕಾಲದ ದೃಷ್ಟಿಯಿಂದ ಶಿವಕೋಟ್ಯಾಚಾರ್ಯರ ವಡ್ಡಾರಾಧನೆಯು ಬಳ್ಳಾರಿ ಜಿಲ್ಲೆಯ ಪ್ರಾಚೀನ ಕೃತಿ ಎನ್ನಬಹುದು. ಕನ್ನಡ ಸಾಹಿತ್ಯದ ಅರುಣೋದಯದ ಕೀರ್ತಿಗೆ ಬಳ್ಳಾರಿ ಜಿಲ್ಲೆಯ ಪಾತ್ರ ಗಮನಾರ್ಹ. ಕನ್ನಡ ಸಾಹಿತ್ಯದಲ್ಲಿ, ಕರ್ನಾಟಕದ ಧಾರ್ಮಿಕ ಚರಿತ್ರೆಯಲ್ಲಿ ಬಹುಮುಖ ಮಹತ್ವ ಪಡೆದಿರುವ ಹರಿಹರ ಕವಿ ಬಳ್ಳಾರಿ ಜಿಲ್ಲೆಯ ಆಸ್ತಿ. ರಾಘವಾಂಕ ಈ ಪ್ರದೇಶದ ಇನ್ನೊಂದು ಅಣಿಮುತ್ತು. ಬಳ್ಳಾರಿ ಜಿಲ್ಲೆ ಕನ್ನಡಿಗರ ಹಾಗೂ ಆಂಧ್ರರ ಸಂಸ್ಕೃತಿಗಳ ಸಂಗಮಸ್ಥಾನವಾಗಿದೆ. ನಿಸರ್ಗದತ್ತವಾದ ಸಂಪನ್ಮೂಲಗಳಿಂದ ಕೂಡಿರುವ ಬಳ್ಳಾರಿ ಜಿಲ್ಲೆ ಕನ್ನಡದ ಇನ್ನೂ ಎಷ್ಟೋ ಪ್ರಸಿದ್ಧ ಕವಿಗಳೂ, ಬಾಳಿಬದುಕಿದ ಭೂಮಿ, ದಾಸಶ್ರೇಷ್ಠರಾದ ಪುರಂದರದಾಸರು, ಕನಕದಾಸರು, ವ್ಯಾಸರಾಯರು ಮೊದಲಾಗಿ ಅನೇಕರು ಜಿಲ್ಲೆಯ ಸಾಹಿತ್ಯ, ಸಂಸ್ಕೃತಿ, ಕಲೆಗಳನ್ನು ಶ್ರೀಮಂತಗೊಳಿಸಿದ್ದಾರೆ.

ಈ ಜಿಲ್ಲೆ ರಾಘವಾಚಾರ್ಯರಂಥ ಪ್ರತಿಭಾವಂತ ನಾಟ್ಯ ವಿಶಾರದರನ್ನು, ಬಳ್ಳಾರಿ ಬೀಚಿಯವರಂಥ ಅಪ್ರತಿಯ ಹಾಸ್ಯ ಸಾಹಿತಿಯನ್ನು, ಜೋಳದರಾಶಿದೊಡ್ಡನಗೌಡರಂಥ ಅಗ್ರಗಣ್ಯ ಗಮಕಿಗಳನ್ನೂ, ಕೋ.ಚೆನ್ನಬಸಪ್ಪನವರಂಥ ನ್ಯಾಯಧೀಶ ಸಾಹಿತಿಯನ್ನೂ ನೀಡಿದೆ. ಇವರಲ್ಲದೆ ಸರ್ವ ದರ್ಶನ ತೀರ್ಥ ವೈ. ನಾಗೇಶಶಾಸ್ತ್ರಿಗಳು, ಜನಪದ ತಜ್ಞ ಮುದ್ದೇನೂರು ಸಂಗಣ್ಣನವರು, ವ್ಯಾಕರಣ ತೀರ್ಥ ವೈ. ಚಂದ್ರಶೇಖರ ಶಾಸ್ತ್ರೀಗಳು, ಬಳ್ಳಾರಿ ಜಿಲ್ಲೆ ಜನಪದ ಕಲೆಗಳ ನೆಲೆವೀಡು ಎಂದು ಹೇಳಬಹುದು. ಪ್ರಪಂಚ ಪ್ರಸಿದ್ಧ ತೊಗಲುಗೊಂಬೆಯಾಟಗಾರ ಯಡ್ರಾಮನಹಳ್ಳಿ ದೊಡ್ಡ ಭರಮಪ್ಪ, ಸೊನ್ನದ ಡೊಳ್ಳಿನ ಮುದಿಮಲ್ಲಪ್ಪ ಹಂಪಾಪಟ್ಟಣದ ಗೊಂದಲಿಗರ ದೇವೇಂದ್ರಪ್ಪ, ಹರಪನಹಳ್ಳಿ ಭೀಮವ್ವ ಹೀಗೆ ಪ್ರಸಿದ್ಧ ಕಥೆಗಾರರು, ಜಾನಪದ ಕಲಾವಿದರು, ತಜ್ಞರು, ಹಲವಾರು ಸಾಹಿತಿಗಳು ಈ ಜಿಲ್ಲೆಯ ಒಂದು ವಿಶೇಷವೇ ಸರಿ. ಜನರು ನಂಬಿದ ಮೌಲ್ಯಗಳು, ಆಚಾರ-ವಿಚಾರಗಳು, ಸಾಧನೆ ಸಿದ್ಧಿಗಳು, ಬದುಕಿನ ಸಾಹಿತ್ಯ ಮತ್ತು ಶಿಕ್ಷಣ ಮಾನವ ಜೀವನದಲ್ಲಿ ಪ್ರತಿಬಿಂಬಿಸಿವೆ.

ವಿದ್ಯೆಯಲ್ಲಿ ಬಳ್ಳಾರಿ ಜಿಲ್ಲೆ ಇತಿಹಾಸವನ್ನು ಹೊಂದಿದೆ. ವಿದ್ಯೆ ಕೊಡಮಾಡುವಲ್ಲಿ ಹಿಂದಿನಿಂದಲೂ ಬಳ್ಳಾರಿ ಜಿಲ್ಲೆ ಹೆಸರುವಾಸಿಯಾಗಿದೆ. ಶೈವ ಧರ್ಮಾವಲಂಬಿಗಳ, ಅದರಲ್ಲೂ ಮುಖ್ಯವಾಗಿ ವೀರಶೈವರ ವಾಸಕ್ಕೆಂದು ಸೃಷ್ಟಿಸಲದ 'ಅಗ್ರಹಾರ', 'ಶಿವಪುರ'ಗಳನ್ನು ಅರಸರು ಬಳ್ಳಾರಿ ಜಿಲ್ಲೆಯಲ್ಲಿ ನಿರ್ಮಿಸಿರುವುದು ಶಾಸನಗಳಿಂದ ತಿಳಿದುಬರುತ್ತದೆ. ತದನಂತರ ಶಿಕ್ಷಣರಂಗದಲ್ಲಿ ಕುಂಠಿತವನ್ನು ಕಂಡ ಬಳ್ಳಾರಿ ಜಿಲ್ಲೆ ಬ್ರಿಟಿಷರ ಆಳ್ವಿಕೆಯಲ್ಲಿ ಚೇತರಿಕೆಯನ್ನು ಕಂಡಿತು. ಬ್ರಿಟಿಷ ಅಧಿಕಾರಿಗಳು ಹಾಗೂ ಕ್ರೈಸ್ತ ಮಿಷನರಿಗಳು, ಪತ್ರಿಕೆಗಳ ಪ್ರಕಟಣೆ, ಇತ್ಯಾದಿ ಸಾಹಿತ್ಯಿಕ ಕಾರ್ಯಗಳ ಚಟುವಟಿಕೆಯಿಂದ ಬಳ್ಳಾರಿ ಜಿಲ್ಲೆ ಪ್ರಗತಿಯನ್ನು ಕಾಣುತ್ತಾ ಬಂದಿತು. ೧೮೨೭ರಲ್ಲಿ ಹ್ಯಾಂಡ್ಸನು ಬಳ್ಳಾರಿಯಲ್ಲಿ ಆರಂಭಿಸಿದ ಪ್ರಾಥಮಿಕ ಶಾಲೆಯಲ್ಲಿ ಮೊದಲ ಬಾರಿಗೆ ಸ್ತ್ರೀಯರಿಗೆ ಪ್ರವೇಶ ದೊರಕಿರುವುದು ಸಹ ಗಮನಿಸಬೇಕಾದ ಅಂಶವಾಗಿದೆ. ಕನ್ನಡ ಪತ್ರಿಕೋದ್ಯಮದಲ್ಲಿ ಮೊದಲ ಪತ್ರಿಕೆಯೆನಿಸಿದ ಮಂಗಳೂರಿನ 'ಮಂಗಳೂರು ಸಮಾಚಾರ' ವೆಂಬುದು ೧೮೪೪ ರಿಂದ 'ಕನ್ನಡ ಸಮಾಚಾರ'ವೆಂಬ ಹೆಸರನ್ನು ಬದಲಾಯಿಸಿಕೊಂಡು ಬಳ್ಳಾರಿಯಿಂದಲೇ ಮುಂದುವರಿಯಿತು.

ಬ್ರಿಟಿಷರ ಆಳ್ವಿಕೆಯಲ್ಲಿ ಮದ್ರಾಸ್ ಪ್ರಾಂತ್ಯಕ್ಕೆ ಸೇರಿದ ಬಳ್ಳಾರಿ ಜಿಲ್ಲೆ ಕನ್ನಡತನವನ್ನೇ ಕಳೆದುಕೊಂಡು ಪರಿಭಾಷಾ ರಾಜ್ಯದ ದಬ್ಬಾಳಿಕೆಯಿಂದ ತತ್ತರಿಸಿ ಹೋಗಿತ್ತು. ನಂತರ ಪ್ರಕೃತಿಯ ವಿಕೋಪ, ಬಡತನ, ಅಜ್ಞಾನ, ಇವುಗಳಿಂದ ಶಿಕ್ಷಣರಂಗಕ್ಕೆ ಮಂಕು ಕವಿಯಿತು. ಮದ್ರಾಸ್ ಪ್ರಾಂತ್ಯದಲ್ಲಿದ್ದ ಬಳ್ಳಾರಿ ಜಿಲ್ಲೆಯಲ್ಲಿ ಇಂಗ್ಲಿಷ್,

ತೆಲುಗು ಭಾಷೆಯ ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣ ಕವಲೊಡೆಯಿತು. ಅದು ಶ್ರೀಮಂತರ ಮುಂದುವರೆದ ಜನಾಂಗಕ್ಕೆ ಅನುಕೂಲವಾಗಿತ್ತು. ಅವರೆಲ್ಲ ಹೆಚ್ಚಿನ ಶಿಕ್ಷಣಕ್ಕಾಗಿ ಮದ್ರಾಸ್, ಅನಂತಪುರ, ಗುಂಟೂರು, ಮದನಪಲ್ಲಿಗೆ ಹೋಗುತ್ತಿದ್ದರು. ಆದರೆ ಬಡ ಬಗ್ಗರಿಗೆ, ಸಾಮಾನ್ಯರಿಗೆ ಶಿಕ್ಷಣ ಕನಸಿನ ಮಾತಾಗಿತ್ತು.

ಬಳ್ಳಾರಿ ಜಿಲ್ಲೆಯಲ್ಲಿ ಕ್ರೈಸ್ತ ಸಮಾಜದವರಿಂದ ಇಂಗ್ಲಿಷ್ ಮಾಧ್ಯಮದ ಶಾಲೆಗಳು ಪ್ರಾರಂಭವಾದವು. ನಂತರ ಪ್ರತಿಷ್ಠಿತ ಸಮಾಜದವರು ಶಿಕ್ಷಣ ಸಂಸ್ಥೆಗಳನ್ನು ತೆರೆದು ಇಂಗ್ಲಿಷ್, ತೆಲುಗು, ತಮಿಳು, ಉರ್ದು ಭಾಷೆಯ ಮಾಧ್ಯಮದಲ್ಲಿ ಶಿಕ್ಷಣ ನೀಡುತ್ತಾ ಬಂದರು. ಖಾಸಗಿ ಶಿಕ್ಷಣ ಸಂಸ್ಥೆಗಳು ತಮ್ಮ ಗುಣಮಟ್ಟಕ್ಕೆ ಹೆಣಗಾಡತೊಡಗಿದವು. ಇದನ್ನು ಮನಗಂಡ ಕೆಲವು ವೀರಶೈವ ಧುರೀಣರು ೧೯೧೬ರಲ್ಲಿ 'ವೀರಶೈವ ವಿದ್ಯಾಭಿವೃದ್ಧಿ ಸಂಘವನ್ನು' ಸ್ಥಾಪಿಸಿದರು. ಬಡವಿದ್ಯಾರ್ಥಿಗಳಿಗಾಗಿ ಉಚಿತ ವಿದ್ಯಾರ್ಥಿನಿಲಯ ಸ್ಥಾಪಿಸಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳನ್ನು ಸಂಘ ಆರಂಭಿಸಲು ಪ್ರಯತ್ನಿಸಿ ೧೯೨೪ರಲ್ಲಿ ಪ್ರಪ್ರಥಮವಾಗಿ ಖಾಸಗಿ ಒಡೆತನದ ಕನ್ನಡ ಪ್ರಾಥಮಿಕ ಶಾಲೆಯನ್ನು ಹೀರದ ಸೂಗಮ್ಮ ಎಂಬ ಹೆಸರಿನಲ್ಲಿ ವೀರಶೈವ ವಿದ್ಯಾವರ್ಧಕ ಸಂಘ ತೆರೆಯಿತು. ಕನ್ನಡ ಕಸ್ತೂರಿಯ ಕಂಪು ಪಸರಿಸಿತು. ಅಲ್ಲಿಯ ಕನ್ನಡ ಜನತೆಗೆ ಕನ್ನಡ ಕಲಿಯುವ ಸೌಲಭ್ಯ ಒದಗಿಸಿತು. ಆಗಿನ ಕಾಲದಲ್ಲಿ ಬಳ್ಳಾರಿಯಲ್ಲಿ ಕನ್ನಡ ಪಠ್ಯ ಪುಸ್ತಕಗಳೇ ಉಪಲಬ್ಧವಿರಲಿಲ್ಲವಾದುದರಿಂದ ಆ ಶಾಲೆಯ ಶಿಕ್ಷಕರೆ ಸ್ವಂತ ಪುಸ್ತಕ ರಚಿಸಿ, ವಿದ್ಯಾರ್ಥಿಗಳಿಗೆ ಪ್ರತಿಗಳನ್ನು ಕೈಬರಹದಿಂದಲೇ ಬರೆದು ಒದಗಿಸುತ್ತಿದ್ದರು. ತದನಂತರ ೧೯೪೫ರಲ್ಲಿ ವಿದ್ಯಾವರ್ಧಕ ಸಂಘ ಪದವಿ ಕಾಲೇಜನ್ನು ಸ್ಥಾಪಿಸಲು ಅನುಮತಿ ಕೋರಿ ಮದ್ರಾಸ್ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅರ್ಜಿಯನ್ನು ಅಂದಿನ ವಿಶ್ವವಿದ್ಯಾಲಯದ ಶ್ರೇಷ್ಠ ಕುಲಪತಿ ಡಾ: ಲಕ್ಷ್ಮಣಸ್ವಾಮಿ ಮೊದಲಿಯಾರ್ ತಿರಸ್ಕರಿಸಿದರು. ನಂತರ ಖುದ್ದಾಗಿ ಬಂದು ಸ್ಥಳ ಪರಿಶೀಲಿಸಿದ ನಂತರ ಷರತ್ತು ಇತ್ಯಾದಿಗಳನ್ನು ಹಾಕಿ ಅನುಮತಿ ನೀಡಿದರು. ಭಾರತೀಯ ಅರವತ್ಮೂರು ಪುರಾತನರ ಮಠದಲ್ಲಿ ೧೯೪೬ ರಲ್ಲಿ ಕಾಲೇಜನ್ನು ಆರಂಭಿಸಿದರು.

ಬಳ್ಳಾರಿ ಸರ್ ಥಾಮಸ್ ಮನ್ರೋ ಆಡಳಿತದಲ್ಲಿ ಕನ್ನಡದಲ್ಲಿ ದಾಖಲಾತಿ ಇದ್ದುದು ಅಚ್ಚರಿಯ ಸಂಗತಿ. ಜಿಲ್ಲೆಯ ಶಾಲೆಗಳಲ್ಲಿ ತೆಲುಗು ಭಾಷೆ ಕಲಿಸಲ್ಪಡುತ್ತಿತ್ತು. ಕರ್ನಾಟಕ ಏಕೀಕರಣ ಹೋರಾಟ ನಡೆದ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಸಮಾವೇಶ ಬಳ್ಳಾರಿ ಜಿಲ್ಲೆಯಲ್ಲಿ ಕನ್ನಡ ಶಾಲೆಗಳ ಸಂಖ್ಯೆಯನ್ನು ಹೆಚ್ಚಿಸುವಂತೆ ಮದ್ರಾಸ್ ಸರಕಾರವನ್ನು ಒತ್ತಾಯಿಸಿ ಕನ್ನಡ ಭಾಷೆಯ ಅಭಿವೃದ್ಧಿಗೆ ಹೆಚ್ಚಿನ ಆಸಕ್ತಿವಹಿಸಿದ್ದ ಮೆ॥ ಮಾಸ್ಕಾರ್ಡಿಯವರಿಗೆ ಅಭಿನಂದನೆ ಹೇಳಿತು. ಹೈದ್ರಾಬಾದ್ ಸಂಸ್ಥಾನದಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕ

ಶಿಕ್ಷಣವನ್ನು ಕನ್ನಡದಲ್ಲಿಯೇ ನಡೆಸಬೇಕೆಂದೂ ಸರ್ಕಾರೀ ಭಾಷೆಯು ಸಹ ಕನ್ನಡವೇ ಆಗಬೇಕೆಂದೂ ಸಂಸ್ಥಾನದ ಅಧಿಕಾರಿಗಳಲ್ಲಿ ಭಿನ್ನವಿಸಿತು.

ಕರ್ನಾಟಕ ಏಕೀಕರಣದ ನಂತರ ೧೯೬೧ರಲ್ಲಿ ಪುನಸರಕಾರವು ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಜಾರಿಗೆ ತಂದು, ಸರಕಾರಿ ಮಾದರಿಶಾಲೆ, ಕಿರಿಯ ಪ್ರಾಥಮಿಕಶಾಲೆ, ಹಿರಿಯ ಪ್ರಾಥಮಿಕಶಾಲೆ, ಏಕೋಪಾಧ್ಯಾಯ ಶಾಲೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ತೆರೆಯಿತು. ಖಾಸಗಿಯವರು ಸರಕಾರದ ನಿಯಮಾವಳಿ ಪಾಲಿಸುತ್ತ ಅನುದಾನ ಸಹಿತ, ಅನುದಾನ ರಹಿತ ಶಾಲೆಗಳನ್ನು ತೆರೆದರು. ಪ್ರಮಾಣ ಕಡಿಮೆಯಾದರೂ ಅವುಗಳ ಗುಣಮಟ್ಟ ಆಕರ್ಷಣೀಯವಾದವು. ಜಿಲ್ಲಾ ಪರಿಷತ್ ನಿಂದ ಅನೇಕ ಶಾಲೆಗಳು ತೆರೆಯಲ್ಪಟ್ಟವು. ಶಿಕ್ಷಣ ಚಟುವಟಿಕೆಗೆ ಇವು ಸಹ ಪ್ರೋತ್ಸಾಹದ ಚಿಲುಮೆಯಾದವು. ಬಳ್ಳಾರಿ ಜಿಲ್ಲೆಯಾದ್ಯಂತ ಸರಕಾರಿ ಮತ್ತು ಖಾಸಗಿಯವರಿಂದ ಕಾಲೇಜುಗಳು ಸ್ಥಾಪಿಸಲ್ಪಟ್ಟವು. ಮಹಿಳೆಯರಿಗಾಗಿ ಪ್ರತ್ಯೇಕ ಕಾಲೇಜುಗಳು ತೆರೆಯಲ್ಪಟ್ಟವು. ವೀರಶೈವ ವಿದ್ಯಾವರ್ಧಕ ಸಂದವರು ಬಳ್ಳಾರಿ, ಹೊಸಪೇಟೆ, ಹಡಗಲಿ, ಹರಪನಹಳ್ಳಿ, ಕೊಟ್ಟೂರು ಮುಂತಾದ ಕಡೆಗಳಲ್ಲಿ ಕಾಲೇಜು ತೆರೆದು ಗ್ರಾಮಾಂತರ ವಿದ್ಯಾರ್ಥಿಗಳಿಗೆ, ಸಾಮಾನ್ಯರಿಗೆ ಶಿಕ್ಷಣ ಪಡೆಯಲು ಅನುಕೂಲ ಮಾಡಿಕೊಟ್ಟರು. ವಿದ್ಯಾರ್ಥಿ, ವಿದ್ಯಾರ್ಥಿನೀಯರಿಗಾಗಿ ವಿದ್ಯಾರ್ಥಿನಿಲಯಗಳು ಪ್ರಾರಂಭವಾದವು. ನವೋದಯಶಾಲೆ, ಕೇಂದ್ರೀಯ ಮಹಾವಿದ್ಯಾಲಯ, ಗಂಡು ಮಕ್ಕಳ ಮತ್ತು ಹೆಣ್ಣುಮಕ್ಕಳ ವಸತಿ ಶಾಲೆಗಳು, ವೃತ್ತಿ ಕೈಗಾರಿಕಾ ತರಬೇತಿ ಶಾಲೆಗಳು, ತಾಂತ್ರಿಕ ಮತ್ತು ಔದ್ಯೋಗಿಕ ತರಬೇತಿ ಕಾಲೇಜುಗಳು, ಇನ್ನಿತರ ತರಬೇತಿ ಸಂಸ್ಥೆಗಳು ಈ ಜಿಲ್ಲೆಯಲ್ಲಿ ನೆಲೆಸಿದ್ದು ಶೈಕ್ಷಣಿಕ ಬೆಳವಣಿಗೆಗೆ ಹಗಲಿರುಳು ಶ್ರಮಿಸುತ್ತಿವೆ. ಬಳ್ಳಾರಿ ಜಿಲ್ಲೆಯಲ್ಲಿ ಒಂದೇ ಒಂದು ಸರಕಾರಿ ಮೆಡಿಕಲ್ ಕಾಲೇಜು ಇದ್ದು ಅಲ್ಲಿಯೇ ದಾದಿಯರ ತರಬೇತಿ ಕಾಲೇಜು ಸಹ ಇದೆ. ಬಳ್ಳಾರಿ ಜಿಲ್ಲೆಯಲ್ಲಿ ಆಯುರ್ವೇದಿಕ್ ಗೆ ಸಂಬಂಧಿಸಿದಂತೆ, ತಾರಾನಾಥ ಆಯುರ್ವೇದಿಕ್ ಮೆಡಿಕಲ್ ಕಾಲೇಜು, ಟಿ.ಎಂ.ಎ.ಇ. ಸೊಸೈಟಿ ಆಯುರ್ವೇದಿಕ್ ಮೆಡಿಕಲ್ ಕಾಲೇಜ್ ಗಳು, ಫಾರ್ಮಸಿ ಕಾಲೇಜುಗಳಿದ್ದು, ವೈದ್ಯಕೀಯ ಕ್ಷೇತ್ರದಲ್ಲಿ ಉತ್ತಮ ಶಿಕ್ಷಣ ನೀಡುತ್ತಿವೆ.

ವೀರಶೈವ ವಿದ್ಯಾವರ್ಧಕ ಸಂಘವು ಬಳ್ಳಾರಿಯಲ್ಲಿ ೧೯೭೫ರಲ್ಲಿ ಉಂಕಿ ಸಣ್ಣ ರುದ್ರಪ್ಪ ಕಾನೂನು ಮಹಾವಿದ್ಯಾಲಯ, ಇಂಜನೀಯರಿಂಗ್ ಕಾಲೇಜು, ಫಾರ್ಮಸಿ ಕಾಲೇಜುಗಳನ್ನು ನಡೆಸುತ್ತಿರುವುದು ಬೆಳವಣಿಗೆಯ ಮಾತಾಗಿದೆ. ಜಿಲ್ಲೆಯಲ್ಲಿ ಖಾಸಗಿಯಾಗಿ ನಡೆಸುವ ಶಿಕ್ಷಣ ಸಂಸ್ಥೆಗಳಲ್ಲಿ ವೀರಶೈವ ವಿದ್ಯಾವರ್ಧಕ ಸಂಘ ಪ್ರಥಮಸ್ಥಾನದಲ್ಲಿದೆ. ಸ್ನಾತಕ ಹಾಗೂ ಸ್ನಾತಕೋತ್ತರ ಶಿಕ್ಷಣಕ್ಕಾಗಿ ಬಳ್ಳಾರಿ ಜಿಲ್ಲೆಯ ವಿದ್ಯಾರ್ಥಿಗಳು

ಈ ಮೊದಲು ಮದ್ರಾಸ್, ಮೈಸೂರು, ಕರ್ನಾಟಕ ವಿಶ್ವವಿದ್ಯಾಲಯಗಳ ಮೂಲಕ ಅಭ್ಯಸಿಸಿ ಇತ್ತೀಚಿಗೆ ಗುಲ್ಬರ್ಗಾ ವಿಶ್ವವಿದ್ಯಾಲಯದ ಆಧೀನದಲ್ಲಿ ಅಭ್ಯಸಿಸುವ ಭಾಗ್ಯ ಪಡೆದಿದ್ದಾರೆ. ಉಚ್ಚ ಶಿಕ್ಷಣ ಚಟುವಟಿಕೆಗಳನ್ನು ನಡೆಸುವ ಸ್ನಾತಕೋತ್ತರ ಕೇಂದ್ರಗಳು ಬಳ್ಳಾರಿ ಜಿಲ್ಲೆಯ ಸಂಡೂರು ಮತ್ತು ಬಳ್ಳಾರಿ ನಗರದಲ್ಲಿ ಉಚ್ಚ ಶಿಕ್ಷಣದ ಜೊತೆಗೆ ಸಂಶೋಧನೆಗೆ ಆದ್ಯತೆ ನೀಡುತ್ತವೆ. ಹಂಪಿಯಲ್ಲಿ ಕನ್ನಡ ವಿಶ್ವವಿದ್ಯಾಲಯದ ಕಲ್ಪನೆ ಅಂಕುರವಾಯಿತು. ಕನ್ನಡಿಗರ ಬಹುದಿನಗಳ ಕನಸಾಗಿದ್ದ ಕನ್ನಡ ವಿಶ್ವವಿದ್ಯಾಲಯ ವಿಶ್ವ ವಿಖ್ಯಾತ ಹಂಪಿಯಲ್ಲಿ ಸ್ಥಾಪಿತವಾಗಿರುವುದು ಹೆಮ್ಮೆಯ ಸಂಗತಿಯಾಗಿದೆ. ಕನ್ನಡ ಸಾಂಸ್ಕೃತಿಕ ಸಾಮ್ರಾಜ್ಯ ಸ್ಥಾಪನೆಗೆ ಈ ವಿಶ್ವವಿದ್ಯಾಲಯ ಒಂದು ಅಡಿಗಲ್ಲು. ಉನ್ನತ ಅಧ್ಯಯನ ಆಳವಾದ ಸಂಶೋಧನೆ ಹಾಗೂ ಪ್ರಬುದ್ಧ ಗ್ರಂಥಗಳ ಪ್ರಕಟಣೆ ಕನ್ನಡ ವಿಶ್ವವಿದ್ಯಾಲಯದ ಪ್ರಮುಖ ಆಶಯವಾಗಿದೆ. ಕನ್ನಡ ವಿಶ್ವವಿದ್ಯಾಲಯ ಈಗ ಶೈಕ್ಷಣಿಕವಾಗಿ ಹಿಂದುಳಿದಿರುವ ಬಳ್ಳಾರಿ ಜಿಲ್ಲೆಯ ಸರ್ವಾಂಗೀಣ ವಿಕಾಸಕ್ಕೆ ನಾಂದಿಯಾಗಿದೆ.

ಬಳ್ಳಾರಿ ಜಿಲ್ಲೆಯಾದ್ಯಂತ ಸರಕಾರದಿಂದ ನಡೆಯುವ ಶೈಕ್ಷಣಿಕ ಚಟುವಟಿಕೆಗಳು ಎದ್ದು ಕಾಣುತ್ತಿದ್ದರೆ, ಖಾಸಗಿಯವರಿಂದ ನಡೆಯುವವು ಎಲೆ ಮರೆಯ ಕಾಯಿಯಂತೆ ಮುಂದೆ ಸಾಗಿವೆ. ಉಪನ್ಯಾಸಕರಿಗಾಗಿ, ಶಿಕ್ಷಕರಿಗಾಗಿ, ಶಿಕ್ಷಣ ಪ್ರೇಮಿಗಳಿಗಾಗಿ, ಚರ್ಚೆ, ಸಮ್ಮೇಳನ, ಗೋಷ್ಠಿ ಮುಂತಾದ ಶಿಕ್ಷಣದ ಚಟುವಟಿಕೆಗಳು ಈ ಜಿಲ್ಲೆಯಲ್ಲಿ ವರ್ಷದುದ್ದಕ್ಕೂ ಸಾಗುತ್ತಾ ಬಂದಿವೆ. ಹೊಸ ಶಿಕ್ಷಣ ನೀತಿ, ಹೊಸಪಠ್ಯ ವಿಷಯ, ಭಾಷಾಗೊಂದಲ, ಮೇಲಿಂದ ಮೇಲೆ ಬದಲಾಗುತ್ತಿರುವ ಕಾನೂನು ಇವುಗಳಿಂದ ಶಿಕ್ಷಣ ರಂಗಕ್ಕೆ ಆಧುನಿಕತೆಯ ಗಾಳಿ ಬೀಸಿದೆ. ಆದರೂ ಶೈಕ್ಷಣಿಕವಾಗಿ ಹಿಂದುಳಿದಿದೆ. ಕರ್ನಾಟಕ ರಾಜ್ಯದಲ್ಲಿ ಶೈಕ್ಷಣಿಕವಾಗಿ ಹಿಂದುಳಿದಿರುವ ಜಿಲ್ಲೆಗಳಲ್ಲಿ ಬಳ್ಳಾರಿ ಜಿಲ್ಲೆಯೂ ಒಂದಾಗಿದೆ ಎಂಬುದು ೧೯೮೧ರ ಜನಗಣತಿಯಿಂದ ಉಪಲಬ್ಧವಿರುವ ಅಂಕಿ-ಅಂಶಗಳಿಂದ ಸ್ಪಷ್ಟವಾಗುತ್ತದೆ.

| | | |
|---|---|---|
| ೧೯೭೧ರ ಜನಗಣತಿಯ ಪ್ರಕಾರ ಒಟ್ಟು ಸಾಕ್ಷರತೆ | | ಶೇ. ೨೬.೧೧ |
| | ಗಂಡು | ಶೇ. ೩೭.೨೬ |
| | ಹೆಣ್ಣು | ಶೇ. ೧೪.೫೫ |
| ೧೯೮೧ರ ಜನಗಣತಿಯ ಪ್ರಕಾರ ಒಟ್ಟು ಸಾಕ್ಷರತೆ | | ಶೇ. ೩೦.೬೪ |
| | ಗಂಡು | ಶೇ. ೪೧.೬೫ |
| | ಹೆಣ್ಣು | ಶೇ. ೧೯.೩೨ |

ಹತ್ತು ವರ್ಷಗಳ ಸುದೀರ್ಘಕಾಲದಲ್ಲಿ ಶೇ. ೪.೫೩ ಸಾಕ್ಷರತೆ ಪ್ರಮಾಣ ಮಾತ್ರ ಹೆಚ್ಚಾಗಿದೆ. ಪುರುಷರ ಸಾಕ್ಷರತೆಯಲ್ಲಿ ಶೇ. ೪.೯೯ ಹಾಗೂ ಸ್ತ್ರೀಯರ ಸಾಕ್ಷರತೆಯಲ್ಲಿ ಶೇ. ೪.೭೭ ಮಾತ್ರ ವೃದ್ಧಿಯಾಗಿರುವುದು ಸ್ಪಷ್ಟವಾಗುತ್ತದೆ. ಇದು ಅಭಿವೃದ್ಧಿಯ ಸಂಕೇತವಲ್ಲ. ಈ ಅಂಕಿ-ಅಂಶಗಳನ್ನು ನಮ್ಮ ರಾಜ್ಯಕ್ಕೆ ಹೋಲಿಸಿ ನೋಡಿದಾಗ ಬಳ್ಳಾರಿ ಜಿಲ್ಲೆ ಹಿಂದುಳಿದಿದೆ ಎಂಬುದು ಸ್ಪಷ್ಟವಾಗುತ್ತದೆ.

೧೯೮೭-೮೮ನೇ ಸಾಲಿನಲ್ಲಿ ೩, ೭೦,೫೮೯ ವಿದ್ಯಾರ್ಥಿಗಳಿಗೆ ಉಚಿತ ಪಠ್ಯ ಪುಸ್ತಕ ವಿತರಿಸಿದ್ದು, ಸುಮಾರು ೩೦, ೯೬, ೧೯೫ ರೂ. ತಗಲಿದಂತೆ, ಅಂಕಿ-ಸಂಖ್ಯೆಗಳು ತಿಳಿಸುತ್ತವೆ. ಇದೇ ಶೈಕ್ಷಣಿಕ ವರ್ಷದಲ್ಲಿ ಉಚಿತ ಸಮವಸ್ತ್ರ ವಿತರಣೆಗಾಗಿ ೩೬, ೯೯, ೧೦೩ ರೂ. ಖರ್ಚು ಮಾಡಲಾಗಿದ್ದು. ಇದರ ಸೌಲಭ್ಯವನ್ನು ಬಳ್ಳಾರಿ ಜಿಲ್ಲೆಯ ೧, ೧೮, ೫೪೮ ವಿದ್ಯಾರ್ಥಿಗಳು ಪಡೆದುಕೊಂಡಿದ್ದಾರೆ. ೧೯೮೯ ರಲ್ಲಿ ಎನ್.ಆರ್.ಇ.ಪಿ. ಯೋಜನೆ ಅಡಿಯಲ್ಲಿ ಬೋಧನಾ ಕಲಿಕೆ ಸಾಮಗ್ರಿಗಳಿಗಾಗಿ ೮, ೭೮, ೪೦೭ ರೂ. ವಿನಿಯೋಗಿಸಲಾಗಿದೆ. ೧೯೮೯-೯೦ನೇ ಸಾಲಿನಲ್ಲಿ ಸಂಯುಕ್ತ ಪದವಿಪೂರ್ವ ವಿದ್ಯಾಲಯಾದ್ಯಂತ ಹಲವಾರು ವಾಣಿಜ್ಯ ತರಬೇತಿ ಸಂಸ್ಥೆಗಳಿವೆ. ಇವು ಬೆರಳಚ್ಚು ಹಾಗೂ ಶೀಘ್ರಲಿಪಿ ತರಬೇತಿಯನ್ನು ನೀಡಿ ವೃತ್ತಿಪರ ಜೀವನಕ್ಕೆ ನಾಂದಿ ಹಾಡುತ್ತಿವೆ. ಕೆಲವು ಕಂಪ್ಯೂಟರ್ ಕೇಂದ್ರಗಳು ತರಬೇತಿ ನೀಡುವುದರಲ್ಲಿ ನಿರತವಾಗಿವೆ. ಶೈಕ್ಷಣಿಕ ಮಹತ್ವದ ಅರಿವು ಸಾರ್ವತ್ರಿಕವಾಗಬೇಕು. ಪ್ರತಿಯೊಬ್ಬ ವ್ಯಕ್ತಿಯೂ ಸುಶಿಕ್ಷಿತ ನಾಗಲೇಬೇಕು. ಈ ದೃಷ್ಟಿಯಲ್ಲಿ ನಾವು ಸಂಪೂರ್ಣ ಸಾಕ್ಷರತೆ ಸಾಧಿಸಲೇಬೇಕಾಗಿದೆ.

## ೬.೩ " ಬಳ್ಳಾರಿ ಜಿಲ್ಲಾ ಸಂಪೂರ್ಣ ಸಾಕ್ಷರತಾ ಕಾರ್ಯಕ್ರಮ"೧೯೯೪

ಅನಕ್ಷರತೆ ಒಂದು ಶಾಪ. ಸಮಾಜದ ವ್ಯವಸ್ಥೆಯಲ್ಲಿ ಇವು ಒಂದು ದೋಷ. ಅನಕ್ಷರತೆಯನ್ನು ತೊಡೆದು ಹಾಕಲು ಸರ್ಕಾರಗಳು, ಸಾರ್ವಜನಿಕರು ಅವಿರತವಾಗಿ ಶ್ರಮಿಸಿದ್ದಾರೆ. ಅನೇಕ ದಶಕಗಳಿಂದ ಈ ಪ್ರಯತ್ನ ಸ್ವಲ್ಪ ಮಟ್ಟಿಗೆ ಹೆಚ್ಚಾಗಿ ಸಾಗಿದೆ. ಆದರೂ ಈ ಹಿನ್ನಲೆಯಲ್ಲಿ ಅನಕ್ಷರತೆಯನ್ನು ಹೋಗಲಾಡಿಸಲು ಅನೇಕ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿದೆ. ಇದರಲ್ಲಿ ಸಾಕ್ಷರತಾ ಆಂದೋಲನಗಳು ಬಹಳ ಮುಖ್ಯವಾದವುಗಳು.

ಸಂಪೂರ್ಣ ಸಾಕ್ಷರತಾ ಆಂದೋಲನ ಕಾರ್ಯ ಕ್ರಮವನ್ನು ೧೯೯೪ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಪ್ರಾರಂಭಿಸಲಾಯಿತು. ಬಳ್ಳಾರಿ ಜಿಲ್ಲೆಗೆ ಇದೊಂದು ಸುವರ್ಣಾವಕಾಶ. ಬಳ್ಳಾರಿ ಜಿಲ್ಲೆಯನ್ನು ಸಂಪೂರ್ಣ ಸಾಕ್ಷರತಾ ಜಿಲ್ಲೆಯನ್ನಾಗಿ ಮಾಡಬೇಕೆಂಬ ಸಂಕಲ್ಪದೊಂದಿಗೆ,ಸಂಪೂರ್ಣ ಸಾಕ್ಷರತಾ ಆಂದೋಲನ ಪ್ರಾರಂಭವಾಯಿತು. "ಅಕ್ಷರ ವಿಜಯ"ದ ಅಡಿಯಲ್ಲಿ ಅನೇಕ ಸಮಿತಿಗಳನ್ನು ರಚಿಸಲಾಗಿದೆ. ಸಾಕ್ಷರತಾ ಆಂದೋಲನ ಕೇವಲ ಸರ್ಕಾರದ, ಸರ್ಕಾರಿ ಅಧಿಕಾರಿಗಳ ಕಾರ್ಯಕ್ರಮವಲ್ಲ. ಜಿಲ್ಲೆಯ ಶಿಕ್ಷಣ ಸಂಸ್ಥೆಗಳು, ಸ್ವಯಂ ಸೇವಾ ಸಂಘಟನೆಗಳು, ವಿದ್ಯಾವಂತ ಯುವಕ, ಯುವತಿಯರು, ಶಿಕ್ಷಣ ಪಡೆದ ಸಮಸ್ತ ಜನ ಇದರಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕು. ಇವರೆಲ್ಲ ಪಾಲ್ಗೊಂಡು ಸಾಕ್ಷರತಾ ಆಂದೋಲನವನ್ನು ಮುನ್ನಡೆಸಿದ್ದಾರೆ. ಸ್ವಾತಂತ್ರ್ಯ ಆಂದೋಲನದಷ್ಟೇ ಮಹತ್ವದ, ಈ ಸಾಕ್ಷರತಾ ಆಂದೋಲನದಲ್ಲಿ ನಮ್ಮನ್ನು ನಾವು ತೊಡಗಿಸಿಕೊಳ್ಳೋಣ. ಇದರ ಯಶಸ್ಸಿಗಾಗಿ ಶ್ರಮಿಸೋಣ. ಅಕ್ಷರಸ್ಥರಾದ ನಾವೆಲ್ಲರೂ ಸುಮ್ಮನೆ ಕುಳಿತರೆ, ನಾವೂ ಸಹ ಸಮಸ್ಯೆಯ ಒಂದು ಭಾಗವಾಗಿ ಉಳಿಯುತ್ತೇವೆ. ಅದರ ಇನ್ನೊಂದು ಮುಖವಾಗುತ್ತೇವೆ, ಎಂದು ವಿದ್ಯಾವಂತ ಯುವಕ, ಯುವತಿಯರು ಸಾಕ್ಷರತಾ ಆಂದೋಲನದ ಉದ್ದಕ್ಕೂ ಶ್ರಮಿಸಿದ್ದಾರೆ. ಬಳ್ಳಾರಿ ಜಿಲ್ಲಾ ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ ಹೆಚ್ಚಿನ ಶ್ರಮ ಇವರದು.

ಬಳ್ಳಾರಿ ಜಿಲ್ಲೆಯ ಒಟ್ಟು ಜನಸಂಖ್ಯೆಯು, ೧೯೯೧ರ ಜನಗಣತಿಯ ಪ್ರಕಾರ, ೧೮,೯೨,೭೧೫ ಇದ್ದು ಇದರಲ್ಲಿ ೯,೬೭,೨೫೧ ಪುರುಷರು ಮತ್ತು ೯,೨೫,೫೦೦ ಮಹಿಳೆಯರು ಇರುವರು. ಜಿಲ್ಲೆಯ ಸಾಕ್ಷರತಾ ಪ್ರಮಾಣವು ಶೇಕಡಾ ೩೭.೦೨ ಇದ್ದು ಅದು ರಾಜ್ಯದ ಸರಾಸರಿಯಾದ ಶೇಕಡಾ ೫೫.೯೮ ಕ್ಕಿಂತ ಕಡಿಮೆಯಾಗಿದೆ. ಮಹಿಳೆಯರ ಸಾಕ್ಷರತಾ ಪ್ರಮಾಣವು ಅಂದಾಜು ಶೇಕಡಾ ೨೬.೨೧ ಮತ್ತು ಪುರುಷರದು ಶೇ.೪೭.೩೧ ಇರುವುದು. ಜಿಲ್ಲೆಯ ಸಾಕ್ಷರ ಜನಸಂಖ್ಯೆಯು ೭,೦೦,೮೧೮ ಇದ್ದು ೪,೫೮,೧೮೦ ಪುರುಷರು ಮತ್ತು ೨,೪೨,೬೩೮ ಮಹಿಳೆಯರು ಇರುವರು. ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡದವರ ಸಾಕ್ಷರತೆಯು ಶೇಕಡಾವಾರು ಅಂದಾಜು ಶೇ. ೧೯ ಮತ್ತು ಶೇ.೨೦ ಇದೆ. ಗ್ರಾಮೀಣ ಕ್ಷೇತದಲ್ಲಿ ಸಾಕ್ಷರತಾ ಶೇಕಡಾವಾರು ೧೮ ರಿಂದ ೨೦ ರಷ್ಟು ಕಡಿಮೆ ಇದೆ. ಸಾಕ್ಷರತಾ ಪ್ರಮಾಣವು ಬಳ್ಳಾರಿ ತಾಲೂಕಿನಲ್ಲಿ ಅತಿ ಹೆಚ್ಚಿದ್ದು ಸಿರುಗುಪ್ಪ ತಾಲೂಕಿನಲ್ಲಿ ಅತಿ ಕಡಿಮೆ ಇದೆ. ಈವಸ್ತು ಸ್ಥಿತಿಗೆ ಕಾರಣೀಭೂತವಾಗಿರುವುದು ಬಳ್ಳಾರಿ ತಾಲೂಕಿನ ತುಲನಾತ್ಮಕವಾಗಿ ಹೆಚ್ಚಾದ ನಗರೀಕರಣ. ನಗರ ಕ್ಷೇತ್ರಗಳಲ್ಲಿ ಸಾಧಾರಣವಾಗಿ ಗ್ರಾಮೀಣ ಕ್ಷೇತ್ರಕ್ಕಿಂತಲೂ ಸಾಕ್ಷರತಾ ಪ್ರಮಾಣವು ಹೆಚ್ಚಿರುತ್ತದೆ. ಈಗ ಸಧ್ಯ ಬಳ್ಳಾರಿ ಜಿಲ್ಲೆಯಲ್ಲಿ ೧೧೧ ಜನ ಶಿಕ್ಷಣ ನಿಲಯಗಳಿದ್ದು

ಅವು ಕೂಡ್ಲಿಗಿ ತಾಲೂಕಿನಲ್ಲಿ ಅತಿ ಹೆಚ್ಚಿದ್ದು ಸಿರುಗುಪ್ಪ ತಾಲೂಕಿನಲ್ಲಿ ಅತಿ ಕಡಿಮೆ ಇರುವವು. ಈ ಜನ ಶಿಕ್ಷಣ ನಿಲಯಗಳು ಸಾಧಾರಣವಾಗಿ ಜಿಲ್ಲೆಯಾದಾದ್ಯಂತ ಹರಡಿಕೊಂಡಿವೆ. ಬಳ್ಳಾರಿ ಜಿಲ್ಲೆಯಲ್ಲಿ ಅನಕ್ಷರಸ್ಥ ಸಮಸ್ಯೆಯನ್ನು ಅಳಿಸಲು ಕೇಂದ್ರ ಮತ್ತು ರಾಜ್ಯ ಸರಕಾರಗಳು ಅನುದಾನಿ ಬೆಂಬಲದಿಂದ "ಅಕ್ಷರ ವಿಜಯ" ಎಂಬ ಸಂಸ್ಥೆಯನ್ನು ರಚಿಸಿಕೊಂಡು ಎರಡು ವರ್ಷಗಳಿಂದ ನಿರಂತರವಾಗಿ ಪ್ರಯತ್ನ ಮಾಡಿವೆ.

ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ೪,೧೧,೨೭೬ ಜನ ಅನಕ್ಷರಸ್ಥರನ್ನು ಗುರುತಿಸಲಾಗಿದೆ. ಇದರಲ್ಲಿ ೧,೭೨,೪೮೫ ಜನ ಪುರುಷರು ಮತ್ತು ೨,೩೮,೭೯೧ ಜನ ಮಹಿಳಾ ಅನಕ್ಷರಸ್ಥರು ಇದ್ದಾರೆ. ಒಟ್ಟು ಅನಕ್ಷರಸ್ಥರಲ್ಲಿ ೩,೭೬,೧೧೦ ಜನ ಕನ್ನಡ, ೧೨,೬೬೪ ಜನ ತೆಲುಗು, ಮತ್ತು ೨೨,೫೦೨ ಜನ ಉರ್ದುಮಾತೃಭಾಷೆಯ ಅನಕ್ಷರಸ್ಥರು ಇದ್ದಾರೆ. ಬಳ್ಳಾರಿ ಜಿಲ್ಲೆಯ ಒಟ್ಟು ೪.೧೧,೨೭೬ ಜನ ಅನಕ್ಷರಸ್ಥರಲ್ಲಿ ೯-೧೪ ವಯಸ್ಸಿನವರು ೩೬,೫೭೯ ಜನ ಅನಕ್ಷರಸ್ಥರು ಮತ್ತು ೧೫-೩೫ ವಯಸ್ಸಿನವರು ೩,೭೪,೬೯೭ ಜನ ಅನಕ್ಷರಸ್ಥರು ಇದ್ದಾರೆ.

ಬಳ್ಳಾರಿ ಜಿಲ್ಲೆಯಲ್ಲಿ ಸಾಕ್ಷರತಾ ಆಂದೋಲನಕ್ಕಾಗಿ ವಾತಾವರಣ ನಿರ್ಮಾಣ ಮಾಡಲು ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡಲಾಯಿತು. ಜಿಲ್ಲೆಯಾದ್ಯಂತ ೧೫ ಕಲಾ ತಂಡಗಳನ್ನು ಗುರುತಿಸಿಕೊಂಡು ಸುಮಾರು ೩೫೦ ಜನ ಕಲಾವಿದರಿಗೆ ತರಬೇತಿಯನ್ನು ನೀಡಲಾಯಿತು. ಈ ಕಲಾವಿದರ ಮೂಲಕ ಸಾಧ್ಯವಾದಷ್ಟು ಎಲ್ಲಾ ಹಳ್ಳಿಗಳಲ್ಲಿ ಕಲಾಜಾಥಗಳನ್ನು ನಡೆಸಲಾಗಿದೆ. ವಾತಾವರಣ ನಿರ್ಮಾಣಕ್ಕೆ ಸಂಬಂಧಿಸಿದಂತೆ, ಬಿತ್ತಿಪತ್ರಗಳನ್ನು, ಕರ ಪತ್ರಗಳನ್ನು, ಬ್ಯಾನರ್ ಗಳನ್ನು, ಸ್ಲೈಡ್ಸುಗಳನ್ನು, ಸ್ಟೀಕರುಗಳು, ಬ್ಯಾಡ್ಜುಗಳು, ಆಡಿಯೋ, ವಿಡಿಯೋ ಕ್ಯಾಸೆಟುಗಳನ್ನು ಮಾಡಿಸಲಾಗಿದೆ. ಸಾಕ್ಷರತಾ ಘೋಷಣೆಗಳನ್ನು ಗೋಡೆಗಳ ಮೇಲೆ, ಬಸ್ ಗಳ ಮೇಲೆ, ಆಟೋರಿಕ್ಷಾಗಳ ಮೇಲೆ, ಇತ್ಯಾದಿಗಳ ಮೂಲಕ ಹೆಚ್ಚಿನ ಪ್ರಚಾರವನ್ನು ಮಾಡಲಾಗಿದೆ. ಸಾಕ್ಷರತಾ ಆಂದೋಲನದ ಬಗ್ಗೆ ಮಾಹಿತಿ ನೀಡುವ ಉದ್ದೇಶದಿಂದ ಜಿಲ್ಲಾ ಮಟ್ಟದಲ್ಲಿ ಎಲ್ಲಾ ಅಧಿಕಾರಿಗಳಿಗೆ, ವಕೀಲರಿಗೆ, ಮಹಿಳೆಯರಿಗೆ, ಸಂಘಸಂಸ್ಥೆಗಳ ಪ್ರತಿನಿಧಿಗಳಿಗೆ, ಪತ್ರಿಕಾ ವರದಿಗಾರರಿಗೆ, ಪ್ರತ್ಯೇಕವಾಗಿ ಒಂದು ದಿನದ ಸಮಾವೇಶ ನಡೆಸಲಾಗಿದೆ. ತಾಲೂಕು, ಗ್ರಾಮ ಪಂಚಾಯಿತಿ, ವಾರ್ಡ್ ಮಟ್ಟದಲ್ಲಿ ಸಹ ಅಧಿಕಾರಿಗಳು ಹಾಗೂ ಅಧಿಕಾರೇತರರಿಗೆ, ಚುನಾಯಿತ ಪ್ರತಿನಿಧಿಗಳಿಗೆ ಸಮಾವೇಶಗಳನ್ನು ವ್ಯವಸ್ಥೆ ಗೊಳಿಸಲಾಗಿದೆ.

ಬಳ್ಳಾರಿ ಜಿಲ್ಲೆಯಾದ್ಯಂತ ವಿದ್ಯೆ ಬೋಧನೆ ಮಾಡುವ ಸ್ವಯಂ ಸೇವಕರ ಸಂಖ್ಯೆ ೨೩, ೩೪೯ ಜನರನ್ನುನಿಗದಿಗೊಳಿಸಲಾಗಿದೆ. ಅಲ್ಲದೆ ಅನಕ್ಷರಸ್ಥರ ಸಂಖ್ಯೆ ಒಟ್ಟು ೪,೧೧,೨೭೬ ಜನರು ಇದ್ದು, ಅದರಲ್ಲಿ ಸಾಕ್ಷರತಾ ಆಂದೋಲನಕ್ಕೆ ಒಳಪಟ್ಟವರು ಒಟ್ಟು ೩,೬೫,೫೧೮ ಜನ ಅನಕ್ಷರಸ್ಥರು. ಸ್ವಯಂ ಸೇವಕರು ಇವರಿಗೆ ಅಕ್ಷರ ಕಲಿಸುವ ಪ್ರಕ್ರಿಯೆಯಲ್ಲಿ ತೊಡಗಿದರು. ಬಳ್ಳಾರಿ ಜಿಲ್ಲೆಯಾದ್ಯಂತ ಪೂರ್ವಭಾವಿ ಚಟುವಟಿಕೆಗಳು ಪ್ರಾರಂಭವಾದವು. ಸಂಪನ್ಮೂಲ ವ್ಯಕ್ತಿಗಳು, ಪರಿಣಿತ ತರಬೇತಿದಾರರು, ಸ್ವಯಂಸೇವಕರು, ಸಂಯೋಜಕರು, ಕಲಾವಿದರು, ಮಾಹಿತಿ ನಿರ್ವಹಣೆ ಅಧಿಕಾರಿಗಳು, ಮೇಲ್ವಿಚಾರಣೆ ಅಧಿಕಾರಿಗಳು ಹಾಗೂ ಎಲ್ಲಾ ಸಮಿತಿಗಳು. ಉಪಸಮಿತಿಗಳ ಸದಸ್ಯರನ್ನು ಗುರುತಿಸಿಕೊಂಡು ಅವರಿಗೆ ನಾನಾ ರೀತಿಯ ತರಬೇತಿ ಕೊಡಿಸಿ ಅವರನ್ನು ಆಂದೋಲನ ಪೂರ್ವಭಾವಿ ಚಟುವಟಿಕೆಗಳಲ್ಲಿ ತೊಡಗಿಸಲಾಯಿತು. ಜಾಥ ಕಲಾವಿದರಿಂದ ಅನಕ್ಷರಸ್ಥರ ಮನವೊಲಿಸಲಾಯಿತು. ಪ್ರಚಾರ ಮಾಧ್ಯಮಗಳಿಂದ ಆಂದೋಲನದ ಪ್ರಚಾರ ಕ್ರಮಕೈಗೊಳ್ಳಲಾಯಿತು. ಈ ಎಲ್ಲಾ ಚಟುವಟಿಕೆಗಳ ಅಂಗವಾಗಿ ಬಳ್ಳಾರಿ ಜಿಲ್ಲೆಯಾದ್ಯಂತ ದಿನಾಂಕ ೧-೬-೧೯೯೪ ರಂದು ಕಲಿಕಾ ಕೇಂದ್ರಗಳು ಪ್ರಾರಂಭವಾದವು. ಪ್ರಾರಂಭದ ಐದು ತಿಂಗಳು ಕಲಿಕಾ ಕೇಂದ್ರಗಳು ಬಹಳ ಚೆನ್ನಾಗಿ ನಡೆದವು. ವಿಧಾನಸಭಾ ಚುನಾವಣೆ, ಬರಗಾಲದ ಕಾರಣಗಳಿಗಾಗಿ ವಲಸೆ ಹೋಗುವುದು. ರಾತ್ರಿ ಸಮಯದಲ್ಲಿ ಹೊಲಗಳಿಗೆ ನೀರು ಬಿಡುವ ಸಲುವಾಗಿ ಅನಕ್ಷರಸ್ಥರು ಕೇಂದ್ರಗಳಿಗೆ ಬಾರದೇ ಇರುವುದು, ನಿರಂತರವಾಗಿ ಮೇಲ್ವಿಚಾರನೆ ಮಾಡದೇ ಇರುವುದರಿಂದ, ಇನ್ನು ಮುಂತಾದ ಕಾರಣಗಳಿಂದ ಕಲಿಕಾ ಕೇಂದ್ರಗಳಿಗೆ ಅದು ಸಮಸ್ಯೆಯಾಯಿತು. ಜಿಲ್ಲಾ ಪಂಚಾಯಿತ್ ಮತ್ತು ತಾಲೂಕು ಪಂಚಾಯತ್ ಚುನಾವಣೆಗಳು, ಮುಂತಾದ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಆ ಸಮಯದಲ್ಲಿ ಕಲಿಕೆ ಪ್ರಕ್ರಿಯೆ ಸ್ವಲ್ಪ ಮಟ್ಟಿಗೆ ಕುಂಠಿತಗೊಂಡಿತ್ತು. ಜಿಲ್ಲಾಸಂಪನ್ಮೂಲ ವ್ಯಕ್ತಿಗಳು, ಪರಿಣಿತ ತರಬೇತಿದಾರರು, ಸ್ವಯಂ ಸೇವಕರು, ತಾಲೂಕು ಮಟ್ಟದ ಸಂಯೋಜಕರು, ಎಲ್ಲಾ ಸರಕಾರಿ ಅಧಿಕಾರಿಗಳು ಪುನಶ್ಚೇತನಾ ಚಟುವಟಿಕೆಗಳಲ್ಲಿ ಭಾಗವಹಿಸಿ ಕಲಿಕಾ ಕೇಂದ್ರಗಳು ಪುನಃ ನಡೆಯುವ ಹಾಗೆ ಪ್ರಯತ್ನಿಸಿದ್ದಾರೆ. ಜಿಲ್ಲಾಧಿಕಾರಿಗಳು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಕಾರ್ಯದರ್ಶಿಗಳು, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಜಿಲ್ಲಾ ವಯಸ್ಕರ ಶಿಕ್ಷಣ ಅಧಿಕಾರಿಗಳು ಮತ್ತು ಇತರೆ ಅಧಿಕಾರಿಗಳು ಪ್ರತಿ ತಾಲೂಕು ಅಥವಾ ಯೋಜನೆಗೆ ಭೇಟಿ ಕೊಟ್ಟು ಎಲ್ಲಾ ಕಾರ್ಯಕರ್ತರನ್ನು ಮತ್ತು ಅಧಿಕಾರಿಗಳನ್ನು ಬೇಟಿಮಾಡಿ ಮತ್ತೆ ಆಂದೋಲನವನ್ನು ಪುನಶ್ಚೇತನಗೊಳಿಸಲು ಹುರಿದುಂಬಿಸಿದ್ದಾರೆ. ಆದರೂ ಕಲಿಕಾ ಕೇಂದ್ರಗಳು ಚೇತರಿಸಿಕೊಂಡು ೧೯೯೫ ಮೇ ತಿಂಗಳವರೆಗೆ ನಡೆದವು.

ಬಳ್ಳಾರಿ ಜಿಲ್ಲೆಯ ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ ಪಠ್ಯಪುಸ್ತಕಗಳಾಗಿ ಅಕ್ಷರ ವಿಜಯ ೧,೨, ಮತ್ತು ೩ ಪುಸ್ತಕಗಳನ್ನು ರಚಿಸಿದ್ದು. ಇದು ನಿರಂತರ ೬ ತಿಂಗಳ ಕಲಿಕೆಯಾಗಿದೆ. ಸ್ವಯಂ ಸೇವಕರಿಗಾಗಿ " ಅಕ್ಷರ ವಿಜಯ ಕೈಪಿಡಿ" ಯನ್ನು ತಯಾರಿಸಲಾಗಿದೆ. ಜೊತೆಗೆ ಸಾಕ್ಷರತಾ ಗೀತೆಗಳ ಪುಸ್ತಕವನ್ನು ಸಹ ರಚಿಸಲಾಗಿದೆ. ಒಟ್ಟು ೨.೨೨,೮೨೨ ಜನ ನವಸಾಕ್ಷರರು ಪುಸ್ತಕ ಒಂದನ್ನು, ೧,೭೪,೫೬೪ ಜನ ಪುಸ್ತಕ ಎರಡನ್ನು, ೧,೨೦,೪೬೫ ಜನ ಪುಸ್ತಕ ಮೂರನ್ನು ಹಾಗೂ ೨೭,೨೧೪ ಜನ ಬಾಲಸಿಹಿಕಲಿಕೆ ಪುಸ್ತಕವನ್ನು ಯಶಸ್ವಿಯಾಗಿ ಮುಗಿಸಿದ್ದಾರೆ. ಮೇ ೧೯೯೫ ರಲ್ಲಿ ನಡೆದ ಆಂತರೀಕ ಮೌಲ್ಯಮಾಪನದಲ್ಲಿ ಒಟ್ಟು ೧,೯೯,೬೦೪ ಜನ ನವಸಾಕ್ಷರರು ಭಾಗವಹಿಸಿದ್ದು, ಅದರಲ್ಲಿ ರಾಷ್ಟ್ರೀಯ ಸಾಕ್ಷರತಾ ಮಿಷನ್ನಿನ ಸೂಚನೆಗಳ ಮೇಲೆ ೧,೯೦,೮೮೩ ಜನರನ್ನು ನವ ಸಾಕ್ಷರರೆಂದು ಘೋಷಿಸಲಾಗಿತ್ತು. ನಂತರ ಪುನಃಶ್ಚೇತನ ಚಟುವಟಿಕೆಗಳ ಮೂಲಕ ಮತ್ತಷ್ಟು ಜನರನ್ನು ಕನಿಷ್ಟ ಕಲಿಕಾ ಹಂತಕ್ಕೆ ತಲುಪಿಸಲಾಯಿತು. ಒಟ್ಟು ಬಳ್ಳಾರಿ ಜಿಲ್ಲಾ ಸಮಿತಿಯು ಘೋಷಿಸಿದ ನವಸಾಕ್ಷರರ ಸಂಖ್ಯೆ. ೨,೨೮,೬೦೪, ಇದ್ದು ಅದರಲ್ಲಿ ೯-೧೪ ವಯಸ್ಸಿನ ನವಸಾಕ್ಷರರು ಇದ್ದಾರೆ. ಬಳ್ಳಾರಿ ಜಿಲ್ಲಾ ಸಾಕ್ಷರತಾ ಆಂದೋಲನಕ್ಕಾಗಿ ೨ ಕೋಟಿ ೮೦ ಲಕ್ಷರೂಪಾಯಿ ಬಿಡುಗಡೆಯಾಗಿದೆ. ಇದನ್ನು ಪಠ್ಯಪುಸ್ತಕ ರಚನೆ, ಕಲಿಕಾಸಾಮಗ್ರಿ ಹಾಗೂ ವಿವಿಧ ರೀತಿಯ ತರಬೇತಿಗಳಿಗೆ ವಿನಿಯೋಗಿಸಲಾಗಿದೆ. ಹಣಕಾಸಿನ ವಿಷಯದಲ್ಲಿ ಸಂಪೂರ್ಣ ಪಾರದರ್ಶಿಕೆ ಇದೆ. ಬಳ್ಳಾರಿ ಜಿಲ್ಲೆಯ ಸಂಪೂರ್ಣ ಸಾಕ್ಷರತಾ ಆಂದೋಲನದ ಬಾಹ್ಯ ಮೌಲ್ಯಮಾಪನವನ್ನು ಕರ್ನಾಟಕ ಶೈಕ್ಷಣಿಕ ಮತ್ತು ಅಭಿವೃದ್ಧಿ ಸಂಸ್ಥೆ, ಗುಲಬರ್ಗಾ, ಇವರು ನಡೆಸಿದ್ದು, ಒಳ್ಳೆಯ ಅಭಿಪ್ರಾಯವನ್ನು ವ್ಯಕ್ತಪಡಿಸಿ ಶೇ. ೫೨ ರಷ್ಟು ಗುರಿಯನ್ನು ಸಾಧಿಸಲಾಗಿದೆ ಎಂದು ತಿಳಿಸಿದೆ. ಬಳ್ಳಾರಿ ಜಿಲ್ಲೆಯ ಸಂಪೂರ್ಣ ಸಾಕ್ಷರತಾ ಆಂದೋಲನ ಈ ಸಂಸ್ಥೆಯ ಪ್ರಕಾರ ಯಶಸ್ವಿಯಾಗಿದೆ.

# ಅಧ್ಯಾಯ-೭

## ಸಮಾರೋಪ

ಪ್ರಜಾಪ್ರಭುತ್ವ ಒಂದು ಸಮರ್ಥವಾದ ರಾಜಕೀಯ ಸಿದ್ಧಾಂತವಾಗಿದೆ. ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಗೆ ಅನಕ್ಷರತೆ ಒಂದು ಪಿಡುಗು ಬಹು ಸಂಖ್ಯಾತ ಅನಕ್ಷರಸ್ಥರಿರುವ ಭಾರತದಲ್ಲಿ ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆ ಸುಗಮವಾಗದು. ಆಡಳಿತ ಮತ್ತು ಅಧಿಕಾರ ಅಕ್ಷರಸ್ಥರಾ ಕೆಲವೇ ವ್ಯಕ್ತಿಗಳ ಹಿಡಿತದಲ್ಲಿರುವ ಸಾಧ್ಯತೆ ಇರುತ್ತದೆ. ಇಂತಹ ಸಂದರ್ಭದಲ್ಲಿ ಶಿಕ್ಷಣ ಆದರ್ಶವಾದದ್ದು. ಭಾರತದ ಪ್ರಜಾಪ್ರಭುತ್ವವು ಬಲಿಷ್ಠಗೊಂಡು ದೃಢವಾಗಿ ಹಾಗೂ ಚಿರಸ್ಥಾಯಿಯಾಗಬೇಕಾದರೆ, ಜನತೆಗೆ ಶಿಕ್ಷಣ ನೀಡುವುದು ಅತಿ ಮುಖ್ಯವಾದ ಅಂಶವಾಗಿದೆ.

ಭಾರತದ ಚಿಂತಕರಾದ ಜವಾಹರಲಾಲ್ ನೆಹರೂ, ಮಹಾತ್ಮಗಾಂಧೀಜಿ ಹಾಗೂ ಡಾ.ಬಿ.ಆರ್.ಅಂಬೇಡ್ಕರ್ ರಂತ ಚಿಂತಕರು ಪ್ರಜಾಪ್ರಭುತ್ವ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೆ. ಜೊತೆಗೆ ಅನಕ್ಷರಸ್ಥ ಜನತೆಗೆ ಶಿಕ್ಷಣ ಕೊಡುವ ಬಗ್ಗೆ ಹೆಚ್ಚಿನ ಒತ್ತು ನೀಡಿದ್ದಾರೆ. ಅಲ್ಲದೇ ಭಾರತದಂತ ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಗೆ ಭದ್ರ ಬುನಾದಿಯನ್ನು ಹಾಕಿದ್ದಾರೆ. ಜವಾಹರಲಾಲ್ ನೆಹರೂರವರು ಭಾರತದ ಅಭಿವೃದ್ಧಿಗಾಗಿ ಬೃಹತ್ ಕೈಗಾರಿಕೆಗಳ ಬಗ್ಗೆ ಯೋಚಿಸಿದರೆ, ಮಹಾತ್ಮಗಾಂಧೀಜಿಯವರು ಗ್ರಾಮ ಸ್ವರಾಜ್ಯ ಸ್ಥಾಪನೆ ಬಗ್ಗೆ ಆಳವಾಗಿ ಚಿಂತಿಸಿದ್ದಾರೆ. ಇವರುಗಳ ಚಿಂತನೆ ಸಮರ್ಥವಾಗಿದೆ. ಗ್ರಾಮ ಸ್ವಾರಾಜ್ಯದಲ್ಲಿ , ಗ್ರಾಮ ಪಂಚಾಯಿತಿಯೇ ಶಾಸಕಾಂಗ, ನ್ಯಾಯಾಂಗ ಮತ್ತು ಕಾರ್ಯಾಂಗಗಳ ಕಾರ್ಯಗಳನ್ನು ನಿರ್ವಹಿಸುತ್ತದೆ. ಮೊದಲು ಗ್ರಾಮ ಸಮುದಾಯ ವಿಕಾಸವಾಗಬೇಕು. ಗ್ರಾಮದ ಆಡಳಿತ ಉತ್ತಮಗೊಳ್ಳಬೇಕೆಂದು ಗ್ರಾಮತತ್ವಕ್ಕೆ ಸಂಬಂಧಿಸಿದ ಹಾಗೂ ಜನತೆಗೆ ನೀಡುವ ಶಿಕ್ಷಣದ ಬೆಳವಣಿಗೆಯ ಬಗೆಗೆ ಮಹಾತ್ಮಗಾಂಧೀಜಿ ಚಿಂತಿಸಿರುವುದು ಪ್ರಗತಿದಾಯಕವಾಗಿದೆ. ಸಮಗ್ರ ಭಾರತದ ಬೆಳವಣಿಗೆಯ ಕನಸ್ಸು ಕಂಡ ನಮ್ಮ ಚಿಂತಕರು ಶಿಕ್ಷಣಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿದ್ದಾರೆ.

ಪ್ರಜಾಪ್ರಭುತ್ವದಂತ ಆಡಳಿತ ವ್ಯವಸ್ಥೆಯಲ್ಲಿ ಪ್ರಜೆಗಳು ಸಕ್ರಿಯವಾಗಿ ಭಾಗವಹಿಸಿಬೇಕಾದರೆ ಅವರಿಗೆ ಶಿಕ್ಷಣ ಅತ್ಯಗತ್ಯ. ಪ್ರಜ್ಞಾವಂತ ಜನರಿಂದ ರಚನೆಗೊಂಡ ಸರಕಾರ ಮಾತ್ರ ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯಾಗಲು ಸಾಧ್ಯ. ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯಲ್ಲಿ ಜನಮತಗಣನೆ ಮುಖ್ಯ. ಪ್ರಜಾಪ್ರಭುತ್ವ

ರೂಪು ಪಡೆಯಲು ಪ್ರಜೆಗಳ 'ಮತ' ಅಭಿಪ್ರಾಯವೇ ಮುಖ್ಯ ಜೀವಾಳವಾದರೂ ಪ್ರಜಾಪ್ರಭುತ್ವ ಸರಕಾರ ರಚನೆಗೊಂಡ ನಂತರ ಅದು ಪ್ರಜೆಗಳಿಗೆ ಪೂರಕವಾದ ಆಡಳಿತ ನೀಡುತ್ತದೆ. ವಿವಿಧ ವರ್ಗದ ಪ್ರತಿನಿಧಿಗಳಿಂದ ರಚಿತಗೊಂಡ ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆ ವಿವಿಧ ಆಶೋತ್ತರಗಳನ್ನೊಳಗೊಂಡಿರುತ್ತದೆ.

ಪ್ರಜಾಪ್ರಭುತ್ವದ ಅಳಿವು ಅಥ'ವಾ ಉಳಿವುಗಳು ಆಯಾ ದೇಶದ ಜನತೆ ಪಡೆದ ಶಿಕ್ಷಣವನ್ನವಲಂಬಿಸಿರುತ್ತದೆ. ಅದು ವ್ಯಕ್ತಿಗಳಲ್ಲಿ ಅಪೇಕ್ಷಿತವಾದ ಅಭಿರುಚಿಗಳನ್ನುಂಟು ಮಾಡಿ ವೈಜ್ಞಾನಿಕವಾದ ವರ್ತನೆಗೆ ಅವಕಾಶ ಮಾಡಿ ಕೊಡುತ್ತದೆ. ಆ ನಿಟ್ಟಿನಲ್ಲಿ ಪ್ರತಿಯೊಬ್ಬರಿಗೂ ಶಿಕ್ಷಣ ನೀಡುವುದು ಅಷ್ಟೇ ಮುಖ್ಯವಾಗಿದೆ. ಕಡು ಬಡವರಿಗೆ, ಹಿಂದುಳಿದ ವರ್ಗದವರಿಗೆ ಆರ್ಥಿಕ ಸಹಾಯ ಮತ್ತು ಎಲ್ಲಾ ರೀತಿಯ ಸೌಲಭ್ಯಗಳನ್ನು ಕೊಡುವುದರ ಮೂಲಕ ಪ್ರೋತ್ಸಾಹ ನೀಡಿದರೆ ಅವರು ಸಹ ಇತರರಂತೆ ಬಾಳಬಲ್ಲರು. ಪ್ರಜಾಪ್ರಭುತ್ವದಂತ ಆಡಳಿತ ವ್ಯವಸ್ಥೆಯಲ್ಲಿ ಪ್ರಜೆಗಳಿಗೆ ಶಿಕ್ಷಣ ಕೊಡುವುದಷ್ಟೇ ಮುಖ್ಯವಲ್ಲ. ಶಿಕ್ಷಣದೊಂದಿಗೆ ಬದುಕುವ, ಬದಕನ್ನು ಕಲಿಯುವ ಮತ್ತು ಕಲಿಸುವ ಶಿಕ್ಷಣ ನೀಡುವುದು ಗಮನಾರ್ಹವಾದ ಅಂಶವಾಗಿದೆ.

ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಔಪಚಾರಿಕ ಶಿಕ್ಷಣದಿಂದ ವಂಚಿತರಾದ ಪ್ರಜೆಗಳಿಗೆ ಅನೌಪಚಾರಿಕ ಶಿಕ್ಷಣದಡಿಯಲ್ಲಿ ಶಿಕ್ಷಣ ನೀಡಬೇಕಾಗುತ್ತದೆ. ಶಿಕ್ಷಣ ಪದ್ಧತಿಯಲ್ಲಿ ಕ್ರಾಂತಿಕಾರಕ ಹಾಗೂ ರೂಢ ಮೂಲವೆನಿಸಿದ ಬದಲಾವಣೆಗಳಾದ ಈ ಸಂದರ್ಭದಲ್ಲಿ 'ಸುಧಾರಿತ ವೇಗದಲ್ಲಿ ಸುಧಾರಿತ ಕಲಿಕೆ' ಜನತೆಗೆ ನೀಡುವುದರ ಮೂಲಕ ಅರಿವು ಮೂಡಿಸಬೇಕಾಗಿದೆ. ಸಮಾಜದ ಎಲ್ಲ ಸಮಸ್ಯೆಗಳಿಗೆ ಶಿಕ್ಷಣವೇ ಸಂಜೀವಿನಿ. ಶಿಕ್ಷಣ ಮಾತ್ರ ಸಮಾಜದ ಪುನರ್ರಚನೆಯ ಕಾರ್ಯದಲ್ಲಿ ಯಶಸ್ಸನ್ನು ತರಬಲ್ಲದು. ಯಾವ ಜನಾಂಗವೇ ಆಗಲಿ, ಮುಂದುವರಿಯಲು ಶಿಕ್ಷಣ ಅವಶ್ಯಕವಾಗಿ ಬೇಕಾದುದು.

ಪ್ರಜಾಪ್ರಭುತ್ವದ ಈ ಕಾಲದಲ್ಲಿ ಅನೌಪಚಾರಿಕ ಶಿಕ್ಷಣವಾದ 'ಸಾಕ್ಷರತೆ ' ಬಹಳ ಮಹತ್ವದ್ದು. ಮತ್ತು ಅದೊಂದು ಶಕ್ತಿಯೂ ಕೂಡ ಆಗಿದೆ. "ಸರ್ವರಿಗೂ ಶಿಕ್ಷಣ" ಎಂಬ ಅಭಿಪ್ರಾಯ ಎಲ್ಲೆಡೆಯೂ ಕೇಳಿ ಬರುತ್ತಿರುವ ಈ ಸಂದರ್ಭದಲ್ಲಿ ಸಾಕ್ಷರತಾ ಯೋಜನೆ ಉಪಯುಕ್ತವಾದದ್ದು. ಅಂತರ ರಾಷ್ಟ್ರೀಯ ಮಟ್ಟದಲ್ಲಿ ಸಾಕ್ಷರತೆ ಯಶಸ್ಸನ್ನು ಕಂಡಿದೆ. ದಿ. ರಾಜೀವಗಾಂಧೀಯವರ ಮಹತ್ವಕಾಂಕ್ಷಿಯಾದ ಈ ಯೋಜನೆಯನ್ನು ಕೇರಳ ರಾಜ್ಯದ ಎರ್ನಕುಲಂ ಜಿಲ್ಲೆಯಲ್ಲಿ ನಡೆಸಿದ ಪ್ರಯೋಗ ಯಶಸ್ವಿಯಾಗಿದೆ. ಇದರಿಂದ ಇಡೀ ರಾಷ್ಟ್ರಕ್ಕೆ

ಸಾಕ್ಷರತೆಯಲ್ಲಿ ಸಂಪೂರ್ಣ ಸಾಧನೆ ಮಾಡಲು ಸಾಧ್ಯವೆಂಬ ಅಂಶ ಮನದಟ್ಟು ಮಾಡಿಕೊಟ್ಟಿದೆ. ಆ ನಿಟ್ಟಿನಲ್ಲಿ ಸಾಕ್ಷರತಾ ಆಂದೋಲನ ದೇಶ ವ್ಯಾಪಿ ನಡೆಯುತ್ತಿದೆ. ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯಲ್ಲಿ ರ್ಗಾಳರಲ್ಲಿ ಸಂಪೂರ್ಣ ಸಾಕ್ಷರತಾ ಆಂದೋಲನವನ್ನು ಪ್ರಾರಂಭಿಸಲಾಗಿದೆ. ಅದು ತನ್ನದೇ ಆದ ವಿಶಿಷ್ಟತೆಯಿಂದ ಕೂಡಿದೆ

ಇತ್ತೀಚಿನ ದಿನಗಳಲ್ಲಿ ಬಡತನ ನಿರ್ಮೂಲನೆ, ನಿರುದ್ಯೋಗ ನಿವಾರಣೆ, ಅನಕ್ಷರತೆಯ ದೂರೀಕರಣ, ಇವುಗಳ ಬಗ್ಗೆ ಕೇಳಿ ಬರುತ್ತಿರುವ ಕೂಗಿನ ಹಿಂದೆ ಸಾಕ್ಷರತೆ ಎಂಬ ಅಂದೋಲನವು ಬಳ್ಳಾರಿ ಜಿಲ್ಲೆಯ ಜನತೆಗೆ ಜಾಗೃತಿಯನ್ನುಂಟು ಮಾಡಿದೆ. ಸಂಪೂರ್ಣ ಸಾಕ್ಷರತಾ ಆಂದೋಲನ ಬಳ್ಳಾರಿ ಜಿಲ್ಲೆಯ ಜನತೆಗೆ ಹೊಸ ಬೆಳಕನ್ನು ಚೆಲ್ಲಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಾಕ್ಷರತೆಯ ಪ್ರಯೋಗ ಬಹಳ ಉಪಯುಕ್ತವಾದದ್ದು. ಸಾಕ್ಷರತಾ ಆಂದೋಲನ ಬಳ್ಳಾರಿ ಜಿಲ್ಲೆಯ ಸಾರ್ವಜನಿಕರ ಮೇಲೆ, ನವಸಾಕ್ಷರರ ಮೇಲೆ, ಅಧಿಕಾರಿಗಳ ಮೇಲೆ ಸಾಕಷ್ಟು ಪರಿಣಾಮವನ್ನು ಬೀರಿದೆ. ಜಿಲ್ಲೆಯಲ್ಲಿ ಸಾಕ್ಷರತಾ ಆಂದೋಲನದ ಪ್ರಭಾವದಿಂದ ಸಾರ್ವಜನಿಕರು ತಮ್ಮ ಹಕ್ಕು ಬಾಧ್ಯತೆಗಳ ಬಗ್ಗೆ ತಿಳಿದು ಕೊಳ್ಳುವ ಪ್ರಯತ್ನದಲ್ಲಿದ್ದಾರೆ. ನವ ಸಾಕ್ಷರರು ಸರ್ಕಾರದಿಂದ ಕೊಡಮಾಡುವ ಅನೇಕ ಯೋಜನೆಗಳ ಬಗ್ಗೆ ಸಹಾಯ ಪಡೆಯಲು ಉತ್ಸುಕರಾಗಿದ್ದಾರೆ. ನವಸಾಕ್ಷರರು ಮತ್ತು ಮಹಿಳೆಯರು'ಪಂಚಾಯತ್ ರಾಜ್ ' ಸಂಸ್ಥೆಯಲ್ಲಿ ಹೆಚ್ಚಿನ ಮಟ್ಟದಲ್ಲಿ ಭಾಗವಹಿಸುತ್ತಿದ್ದಾರೆ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅನಕ್ಷರಸ್ಥರ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಯಾವ ರೀತಿ ಶೋಷಣೆಗೆ ಒಳಗಾಗಿದ್ದಾನೆ ಎಂಬುವುದನ್ನು ಪ್ರತ್ಯಕ್ಷವಾಗಿ ನೋಡಿದಾಗ ಅಂತವರಿಗೆ ಅಕ್ಷರ ಜ್ಞಾನ ಒದಗಿಸುವ ಸಾಕ್ಷರತೆ ಉಪಯುಕ್ತ. ಬಳ್ಳಾರಿ ಜಿಲ್ಲೆಯ ಸಂಪೂರ್ಣ ಸಾಕ್ಷರತಾ ಆಂದೋಲನದ ಬಾಹ್ಯ ಮೌಲ್ಯಮಾಪನವನ್ನು ಕರ್ನಾಟಕ ಶೈಕ್ಷಣಿಕ ಮತತು ಅಭಿವೃದ್ಧಿ ಸಂಸ್ಥೆ, ಗುಲಬರ್ಗಾ, ಇವರು ನಡೆಸಿದ್ದು. ಶೇ.೫೨ ರಷ್ಟು ಗುರಿಯನ್ನು ಸಾಧಿಸಲಾಗಿದೆ ಎಂದು ತಿಳಿಸಿದೆ. ಬಳ್ಳಾರಿ ಜಿಲ್ಲೆಯ ಸಂಪೂರ್ಣ ಸಾಕ್ಷರತಾ ಆಂದೋಲನದ ಸಾಧಕ-ಬಾಧಕಗಳನ್ನು ತಿಳಿಯಲು ಮತ್ತು ಅದರ ಒಟ್ಟು ಪರಿಣಾಮವನ್ನು ವಿಶ್ಲೇಷಿಸಲು ಕ್ಷೇತ್ರಕಾರ್ಯಕ್ಕೆ ಹೋದಾಗ, ಸಾಕ್ಷರತೆಯ ಫಲಾನುಭವಿಗಳನ್ನು, ಸಾರ್ವಜನಿಕರನ್ನು ಮತ್ತು ಅಧಿಕಾರಿಗಳನ್ನು ಸಂದರ್ಶನ ಮಾಡಲಾಗಿದೆ. ಅಲ್ಲದೇ ಸ್ವಯಂ ಸೇವಕರು, ಶಿಕ್ಷಕರು, ಯುವಕ ಸಂಘ, ಸಂಸ್ಥೆಗಳ ಮುಖ್ಯಸ್ಥರು, ಮಹಿಳೆಯರು, ಸಂಯೋಜಕರು ಇವರನ್ನೆಲ್ಲ ಸಂಪರ್ಕಿಸಿದಾಗ, ಅವರ ಹೇಳಿಕೆಗಳನ್ನು ದಾಖಲಿಸಿಕೊಂಡ ನಂತರ ಅವರಿಂದ ಬಂದ ಒಟ್ಟು ಅಭಿಪ್ರಾಯ ಬಳ್ಳಾರಿ ಜಿಲ್ಲಾ ಸಂಪೂರ್ಣ ಸಾಕ್ಷರತಾ ಆಂದೋಲನ ಶೇ. ೮೦ ದಾಟಿ ಗುರಿ ಸಾಧಿಸಿದೆ ಎಂಬ ಮಾತುಗಳನ್ನು ಕಂಡಾಗ ನಿಜವೆನಿಸುತ್ತದೆ. ಆದರೂ ಇನ್ನೂ ಸಾಧಿಸುವುದು ಸಾಕಷ್ಟಿದೆ.

ಬಳ್ಳಾರಿ ಜಿಲ್ಲೆಯ ಸಾಕ್ಷರತಾ ಆಂದೋಲನದ ಬಗ್ಗೆ ಕೆಲ ದೋಷಗಳಿವೆ. ಕ್ಷೇತ್ರ ಕಾರ್ಯ ಸಮಯದಲ್ಲಿ ಮೂಡಿದ ಅಭಿಪ್ರಾಯದಲ್ಲಿ, ಸ್ವಯಂ ಸೇವಕರಿಗೆ, ಗೌರವಧನದ ಸಮಸ್ಯೆ, ಅಧಿಕಾರಿಗಳ ಒತ್ತಡ, ಸಾಕ್ಷರತಾ ಆಂದೋಲನದಲ್ಲಿ ಸಕ್ರೀಯವಾಗಿ ಭಾಗವಹಿಸದೇ ಟೀಕೆ ಮಾಡುವವರ ಸಮಸ್ಯೆ, ಮೇಲ್ವಿಚಾರಣೆಯ ಸಮಸ್ಯೆ,ಚುನಾವಣೆ, ಪ್ರಕೃತಿ ವಿಕೋಪ, ಇತ್ಯಾದಿ ಏನೇ ಸಮಸ್ಯೆಗಳಿದ್ದರೂ ಅಂತಿಮವಾದವುಗಳಲ್ಲ. ಬಳ್ಳಾರಿ ಜಿಲ್ಲೆಯಾದ್ಯಂತ ಉತ್ತಮವಾತಾವರಣ ನಿರ್ಮಾಣವಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ಮಾತು ಹೆಚ್ಚಿನ ಮನ್ನಣೆ ಪಡೆದಿದೆ. ಎಷ್ಟೋ ಕಡೆ ಕೇವಲ ಅಂಕಿ-ಅಂಶಗಳನ್ನು ಆಧರಿಸಿ ಸಾಕ್ಷರತಾ ಆಂದೋಲನ ಯಶಸ್ವಿ ಎಂದುಹೇಳುವುದುಂಟು. ಆಂದೋಲನದ ಯಶಸ್ಸಿನ ತಳಹದಿ ಕೇವಲ ಅಂಕಿ-ಅಂಶಗಳು ಮಾತ್ರವಲ್ಲ.

ಬಳ್ಳಾರಿ ಜಿಲ್ಲೆಯಸಾಕ್ಷರತಾ ಆಂದೋಲನ ಅನೇಕ ಜನ ಕಲಾವಿದರನ್ನು, ಕಾರ್ಯಕರ್ತರನ್ನು, ಮುಂದಾಳುಗಳನ್ನು, ಭಾಷಣಕಾರರನ್ನು, ರಾಜಕಾರಣಿಗಳನ್ನು ಪ್ರತ್ಯಕ್ಷವಾಗಿ, ಹಾಗೂ ಪರೋಕ್ಷವಾಗಿ ತಯಾರು ಮಾಡಿದೆ. ಸಾಕ್ಷರತಾ ಆಂದೋಲನದಿಂದ ಸಮಾಜದಲ್ಲಿ ಬದಲಾವಣೆಯ ಗಾಳಿ ಬೀಸಿದೆ. ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಮುನ್ನಡೆ ಕಾಣಲಾಗುತ್ತಿದೆ. ಸಾಕ್ಷರತಾ ಆಂದೋಲನದಿಂದ ಹೊರಬಂದ ನವಸಾಕ್ಷರರಿಗೆ ಸಾಕ್ಷರೋತ್ತರ ಕಾರ್ಯಕ್ರಮ ರೂಪಿಸಲಾಗಿದೆ. ನವ ಸಾಕ್ಷರರು ಸಂಘಗಳನ್ನು ಕಟ್ಟಲು ತೊಡಗಿದ್ದಾರೆ. ಸಾಕ್ಷರತಾ ಚಟುವಟಿಕೆಗಳು ಒಂದು ಬರಹ ಮತ್ತು ಲೆಕ್ಕಾಚಾರಕ್ಕಾಗಿ ಸಮಾದಾನಗೊಳ್ಳದೆ ನವಸಾಕ್ಷರರ ಹಾಗೂ ಸಮಾಜದ ಸರ್ವತೋಮುಖ ಬೆಳವಣಿಗೆ ಕಡೆಗೆ ಪ್ರಯತ್ನಿಸುವ ಒಂದು ಪ್ರಾಮಾಣಿಕ ಪ್ರಯತ್ನವಾಗಿದೆ. ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯಲ್ಲಿ ಸಾಕ್ಷರತೆಯನ್ನು ಸರಿಯಾಗಿ ಉಪಯೋಗಿಸಿಕೊಂಡು ಹೋದರೆ ಸಾಧ್ಯತೆ ಇದೆ. ಒಟ್ಟಾರೆಯಾಗಿ ಬಳ್ಳಾರಿ ಜಿಲ್ಲಾ ಸಂಪೂರ್ಣ ಸಾಕ್ಷರತಾ ಆಂದೋಲನ ಜನಾಂದೋಲನವಾಗಿ ಯಶಸ್ವಿಯನ್ನು ಕಂಡಿದೆ ಎಂದು ಹೇಳಬಹುದು.

# ಅನುಬಂಧ-೧

## ಅ. ಕ್ಷೇತ್ರಕಾರ್ಯದ ಸಂಕ್ಷಿಪ್ತ ವರದಿ

೧೯೯೪ ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ನಡೆದ ಸಾಕ್ಷರತಾ ಕಾರ್ಯ ಕ್ರಮವನ್ನು ಕುರಿತು ಕ್ಷೇತ್ರಕಾರ್ಯ ಮಾಡಲಾಗಿದೆ. ಕ್ಷೇತ್ರಕಾರ್ಯಕ್ಕಾಗಿ ಬಳ್ಳಾರಿ ಜಿಲ್ಲೆಯ ಎಂಟು ತಾಲೂಕುಗಳಲ್ಲಿ ಅಧ್ಯಯನದ ಅನುಕೂಲಕ್ಕಾಗಿ ನಾಲ್ಕು ತಾಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ನಾಲ್ಕು ತಾಲೂಕುಗಳಾದ ಬಳ್ಳಾರಿ, ಹೊಸಪೇಟೆ, ಕೂಡ್ಲಿಗಿ, ಹಗರಿಬೊಮ್ಮನ ಹಳ್ಳಿಗಳನ್ನು ಆಯ್ಕೆ ಮಾಡಿಕೊಂಡು ನಗರ ಮತ್ತು ಗ್ರಾಮೀಣ ಪ್ರದೇಶದ ಸಾಕ್ಷರತೆಯ ಫಲಾನುಭವಿಗಳಾದ ನವಸಾಕ್ಷರರನ್ನು ಮತ್ತು ನವಸಾಕ್ಷರರಿಗೆ ಯೋಜನೆಯನ್ನು ಕಾರ್ಯರೂಪಕ್ಕೆ ಇಳಿಸಿದ ಸಂಯೋಜಕರನ್ನು ಮತ್ತು ವಿವಿಧ ರೀತಿಯಲ್ಲಿ ತರಬೇತಿಗಳನ್ನು ನೀಡಿದ ಶಿಕ್ಷಕರನ್ನು ಸಾಕ್ಷರತೆಗೆ ಸಂಬಂಧಿಸಿದಂತೆ ಸಂದರ್ಶನ ಮಾಡಲಾಗಿದೆ. ಜೊತೆಗೆ, ರಾಜಕೀಯ ವ್ಯಕ್ತಿಗಳನ್ನು, ಸ್ಥಳೀಯ ಮುಖಂಡರನ್ನು, ಜಿಲ್ಲಾ ಸಂಪನ್ಮೂಲ ವ್ಯಕ್ತಿಗಳನ್ನು, ವಿವಿಧ ಇಲಾಖೆಯ ಸರಕಾರಿ ಅಧಿಕಾರಿಗಳನ್ನು ಮತ್ತು ಸಾರ್ವಜನಿಕರನ್ನು ಸಹ ಅಧ್ಯಯನದ ಅವಧಿಯಲ್ಲಿ ಸಂದರ್ಶನ ಮಾಡಲಾಗಿದೆ. ಸಂದರ್ಶನ ಅವಧಿಯಲ್ಲಿ ಸಾಕ್ಷರತೆಯ ಉಪಯೋಗ ಮತ್ತು ಸಾಕ್ಷರತಾ ಕಾರ್ಯಕ್ರಮದ ಬಗ್ಗೆ ಅವರ ಅನಿಸಿಕೆಗಳ ಆಧಾರದ ಮೇಲೆ. ಬಳ್ಳಾರಿ ಜಿಲ್ಲೆಯ 'ಸಾಕ್ಷರತಾ ಕಾರ್ಯಕ್ರಮ' ಎಷ್ಟರ ಮಟ್ಟಿಗೆ ಫಲಪ್ರದ ಎಂಬುದನ್ನು ಅಧ್ಯಯನ ಮಾಡಲಾಗಿದೆ.

## ಆ. ಬಳ್ಳಾರಿ ಜಿಲ್ಲೆ ಸಾಕ್ಷರತೆಗೆ ಸಂಬಂಧಿಸಿದಂತೆ ಪ್ರಶ್ನಾವಳಿಗಳು

ನವಸಾಕ್ಷರರು

ಸಂಯೋಜಕರು

ಸ್ವಯಂ ಸೇವಕರು

ವಿವಿಧ ಇಲಾಖೆಯ ಅಧಿಕಾರಿಗಳು ಮತ್ತು

ಸಾರ್ವಜನಿಕರಿಗೆ

ಬಳ್ಳಾರಿ ಜಿಲ್ಲೆಯ ಸಾಕ್ಷರತೆಗೆ ಸಂಬಂಧಿಸಿದಂತೆ ಪ್ರಶ್ನೆಗಳನ್ನು, ಕ್ಷೇತ್ರಕಾರ್ಯದ ಸಮಯದಲ್ಲಿ ಕೇಳಲಾಗಿದೆ.

## ನವ ಸಾಕ್ಷರರಿಗೆ ಪ್ರಶ್ನಾವಳಿಗಳು

೧) ನೀವು ಸಾಕ್ಷರತೆಯಿಂದ ಓದು ಬರಹ ಕಲಿತಿರುವಿರಾ?

೨) ನಿಮಗೆ ಕಲಿಕಾ ಕೇಂದ್ರಕ್ಕೆ ಬರಲು ಯಾರು ಹೇಳಿದರು?

೩) ನೀವು ಅನಕ್ಷರಸ್ಥರಾಗಿದ್ದಾಗ ಏನು ಅನಿಸಿತು?

೪) ನಿಮಗೆ ಕಲಿಕಾ ಕೇಂದ್ರಕ್ಕೆ ಯಾಕೆ ಬರಬೇಕು ಅನಿಸಿತು?

೫) ಕಲಿಕಾ ಕೇಂದ್ರದಲ್ಲಿ ಪಾಟಿ ಹಿಡಿದಾಗ ನಿಮಗೆ ಏನು ಅನಿಸಿತು?

೬) ಅಕ್ಷರಗಳನ್ನು ಯಾವ ರೀತಿ ಕಲಿಯುತ್ತಿದ್ದೀರಿ?

೭) ಸಣ್ಣ ಪುಟ್ಟ ಲೆಕ್ಕಗಳನ್ನು ಬಿಡಿಸಲು ನಿಮಗೆ ಬರುತ್ತದೆಯೇ?

೮) ನೀವು ಕಲಿಕಾ ಕೇಂದ್ರಕ್ಕೆ ಹೋಗಲು ನಿಮ್ಮ ಮನೆಯವರು ಸಹಕರಿಸಿದರೆ ಅಥವಾ ವಿರೋಧಿಸಿದ್ದಾರೆಯೇ?

೯) ನೀವು ಮತ್ತು ನಿಮ್ಮ ಸ್ವಯಂ ಸೇವಕರು ಎಲ್ಲಿಗಾದರೂ ಪ್ರವಾಸ ಹೋಗಿದ್ದೀರಾ?

೧೦) ಅಕ್ಷರ ಕಲಿಯುವ ಮೊದ,ಮೊದಲು ನಿಮಗೆ ತೊಂದರೆ ಅನಿಸಲಿಲ್ಲವೇ?

೧೧) ಎಷ್ಟು ತಿಂಗಳು ನೀವು ಕಲಿಕಾ ಕೇಂದ್ರಕ್ಕೆ ಹೋಗಿರುವಿರಿ?

೧೨) ಸಾಕ್ಷರತೆಯಿಂದ ನಿಮಗೆ ಸಹಾಯವಾಗಿದೆಯೇ, ಅದು ಯಾವ ರೀತಿಯಲ್ಲಿ ಎಂದು ಹೇಳುವಿರಾ?

೧೩) ಸ್ವಯಂ ಸೇವಕರು ಸರಿಯಾದ ರೀತಿಯಲ್ಲಿ ಓದು, ಬರಹ ಕಲಿಸಿದರೆ?

೧೪) ನಿಮ್ಮ ಜೊತೆಗೆ ನಿಮ್ಮ ಸ್ನೇಹಿತರು ಓದು, ಬಹರ ಕಲಿಯಲು ಬಂದಿದ್ದಾರೆಯೇ?

೧೫) ಎಲ್ಲರು ಬೆರೆತು ಕಲಿಯುವಾಗ ನಿಮಗೆ ಏನು ಅನಿಸಿತು?

೧೬) ನಿಮಗೆ ಸ್ವಯಂ ಸೇವಕರು ಸರಿಯಾದ ರೀತಿಯಲ್ಲಿ ಕಲಿಸಿದಾಗ ಅವರ ಬಗ್ಗೆ ನಿಮಗೆ ಏನು ಅನಿಸುತ್ತದೆ?

೧೭) ಕಲಿಕಾ ಕೇಂದ್ರದಲ್ಲಿ ಅಕ್ಷರದ ಜೊತೆಗೆ ಮತ್ತೇನು ಕಲಿತು ಕೊಂಡಿದ್ದೀರಿ?

೧೮) ಅಕ್ಷರಸ್ಥರಾದ ಮೇಲೆ ನಿಮಗೆ ಈಗ ಏನು ಅನಿಸುತ್ತದೆ?

೧೯) ನವಸಾಕ್ಷರರಾದ ಮೇಲೆ ಮುಂದೆ ಏನು ಮಾಡುತ್ತೀರಿ?

೨೦) ನಿಮ್ಮ ಕೇಂದ್ರಗಳಿಗೆ ಅಧಿಕಾರಿಗಳು ವಿಚಾರಿಸಲು ಬರುತ್ತಿದ್ದಾರೆಯೇ?

೨೧) ದಿನ ಪತ್ರಿಕೆಗಳನ್ನು ಓದಲು ಬರುತ್ತದೆಯೇ? ಓದಬೇಕೆಂಬ ಆಸೆ ಆಗುತ್ತದೆಯೇ?

೨೨) ಯಾವ ಸಮಯದಲ್ಲಿ ಕಲಿಕಾ ಕೇಂದ್ರಕ್ಕೆ ಹೋಗುತ್ತೀದ್ದೀರಿ?

೨೩) ಸ್ವಯಂ ಸೇವಕರು ನಿಮಗೆ ಪಾಟಿ, ಬಳಪ, ಪುಸ್ತಕ, ಪೆನ್ನು, ಚೀಲ, ಇತ್ಯಾದಿ ಕೊಟ್ಟಿದ್ದಾರೆಯೇ?

೨೪) ನಿಮ್ಮ ಕಲಿಕಾ ಕೇಂದ್ರದಲ್ಲಿ ದೀಪದ ವ್ಯವಸ್ಥೆ ಸರಿಯಾಗಿ ಇದ್ದಿತೇ?

೨೫) ಸಾಕ್ಷರರಾದ ಮೇಲೆ ಚುನಾವಣೆಯ ಸಂದರ್ಭದಲ್ಲಿ ನಿಮ್ಮ ಸ್ವಂತಿಕೆಯಿಂದ ಓಟು ಹಾಕಿರುವೀರಾ?

## ಸ್ವಯಂ ಸೇವಕರಿಗೆ ಪ್ರಶ್ನಾವಳಿಗಳು

೧)ನಿಮ್ಮ ಕಲಿಕಾ ಕೇಂದ್ರಕ್ಕೆ ಎಷ್ಟು ಜನ ಅನಕ್ಷರಸ್ಥರು ಬರುತ್ತಿದ್ದರು?

೨) ನಿಮ್ಮ ಕಲಿಕಾ ಕೇಂದ್ರಕ್ಕೆ ಮಹಿಳೆಯರು ಎಷ್ಟು ಜನ ಬರುತ್ತಿದ್ದರು?

೩) ನಿಮ್ಮ ಕೇಂದ್ರ ಅಡೆತಡೆ ಇಲ್ಲದೇ ನಿರಂತರವಾಗಿ ನಡೆದಿದೆಯೇ?

೪) ಅನಕ್ಷರಸ್ಥರಿಗೆ ಅಕ್ಷರ ಕಲಿಸುವಾಗ ತೊಂದರೆ ಅನಿಸಲಿಲ್ಲವೇ?

೫) ಅನಕ್ಷರಸ್ಥರು ಕಲಿಯುವಾಗ ಅವರ ಪ್ರತಿಕ್ರಿಯೆ ಹೇಗಿತ್ತು?

೬) ನೀವು ಮತ್ತು ಅನಕ್ಷರಸ್ಥರು ಎಲ್ಲಿಗಾದರೂ ಪ್ರವಾಸ ಹೋಗಿರುವಿರಾ?

೭) ನಿಮ್ಮ ಕೇಂದ್ರಕ್ಕೆ ದೀಪದ ವ್ಯವಸ್ಥೆ ಇತ್ತೇ?

೮) ನಿಮಗೂ ಮತ್ತು ಅನಕ್ಷರಸ್ಥರ ಮಧ್ಯೆ ಸಂಬಂಧ ಯಾವ ರೀತಿ ಇತ್ತು?

೯) ಅನಕ್ಷರಸ್ಥರಿಗೆ ಅಕ್ಷರ ಕಲಿಯಬೇಕೆಂಬ ಉತ್ಸಾಹ ಇತ್ತೆ?

೧೦) ಮೌಲ್ಯಮಾಪನಕ್ಕೆ ಒಳಪಡಿಸಿದಾಗ ಅನಕ್ಷರಸ್ಥರು ಸರಿಯಾದ ರೀತಿಯಲ್ಲಿ ಬರೆದಿದ್ದಾರೆಯೇ?

೧೧) ನಿಮ್ಮ ದೃಷ್ಟಿಯಲ್ಲಿ ಅನಕ್ಷರಸ್ಥರಿಗೆ ಪಾಟಿ, ಬಳಪ, ಪುಸ್ತಕ, ಚೀಲ, ಇತ್ಯಾದಿ ಸಮರ್ಪಕವಾಗಿ ಪೂರೈಕೆ ಯಾಗಿದೆಯೇ?

೧೨) ನಿಮ್ಮ ವಾರ್ಡ ಸಂಯೋಜಕರು ಸರಿಯಾಗಿ ಕೆಲಸ ಮಾಡಿರುವರೇ?

೧೩) ನಿಮಗೆ ಎಲ್ಲ ರೀತಿಯ ತರಬೇತಿ ನೀಡಿದ್ದಾರೆಯೇ?

೧೪) ನಿಮ್ಮ ಕೇಂದ್ರಕ್ಕೆ ಬಂದ ಅನಕ್ಷರಸ್ಥರಿಗೆ ಓದಲು, ಬರೆಯಲು, ಲೆಕ್ಕ ಮಾಡಲು ಬರುತ್ತದೆಯೇ?

೧೫) ನಿಮಗೆ ಪ್ರೇರಣೆ ನೀಡಲು ಯಾವ ಕಾರ್ಯಕ್ರಮ ಹಮ್ಮಿಕೊಂಡಿದ್ದರು?

೧೬) ಅಕ್ಷರಸ್ಥರಾದಾಗ ಅವರ ಭಾವನೆ ಹೇಗಿತ್ತು?

೧೭) ಅನಕ್ಷರಸ್ಥರಿಗೆ ಅರಿವು ಮೂಡಿರಬಹುದೇ?

೧೮) ಒಟ್ಟಿನಲ್ಲಿ ಬಳ್ಳಾರಿ ಜಿಲ್ಲಾ ಸಾಕ್ಷರತಾ ಬಗ್ಗೆ ಏನುನಿಸುತ್ತದೆ?

ಸಂಯೋಜಕರಿಗೆ ಪ್ರಶ್ನಾವಳಿಗಳು

೧) ನಿಮಗೆ ಸಂಯೋಜಕರಾಗಿ ಸೇವೆ ಸಲ್ಲಿಸಬೇಕೆಂಬ ಹಂಬಲ ಹೇಗೆ ಬೆಳೆಯಿತು?

೨)ನಿಮ್ಮ ಮನೆಯವರು ನಿಮಗೆ ಸಂಪೂರ್ಣ ಸಹಕಾರ ನೀಡಿದ್ದಾರೆಯೇ?

೩) ನಿಮಗೆ ಯಾವ ಯಾವ ಹಂತಗಳಲ್ಲಿ ತರಬೇತಿ ನೀಡಲಾಯಿತು?

೪) ನಿಮಗೂ ಮತ್ತು ಸ್ವಯಂ ಸೇವಕರಿಗೂ ಸಂಬಂಧ ಹೇಗಿತ್ತು?

೫) ನಿಮ್ಮ ವಾರ್ಡಿಗೆ ಗ್ರಾಮಕ್ಕೆ ಏನಾದರೂ ಕೊರತೆ ಇತ್ತೇ?

೬) ಸ್ವಯಂ ಸೇವಕರಿಗೆ ಯಾವ ರೀತಿ ಹುರಿದುಂಬಿಸುತ್ತಿದ್ದೀರಿ?

೭) ನಿಮ್ಮ ವಾರ್ಡಿನ ಗ್ರಾಮದ ಎಲ್ಲ ಸ್ವಯಂ ಸೇವಕರು ಉತ್ಸಾಹದಿಂದ ಭಾಗವಹಿಸಿದ್ದಾರೆಯೇ?

೮) ನಿಮ್ಮ ವಾರ್ಡಿನ ಗ್ರಾಮದ ಸಮೀಕ್ಷೆ ಪ್ರಕಾರ ಎಲ್ಲ ಅನಕ್ಷರಸ್ಥರು ಕಲಿಕಾ ಕೇಂದ್ರಕ್ಕೆ ಬರುತ್ತಿದ್ದರೇ? ಬಾರದೆ ಇದ್ದಾಗ ಯಾವ ಕ್ರಮ ಅನುಸರಿಸುತ್ತಿದ್ದೀರಿ?

೯) ಸಾಕ್ಷರತೆಗೆ ಪೂರಕವಾಗಿ ವಾತಾವರಣ ನಿರ್ಮಾಣವಾಗಿದೆಯೇ?

೧೦) ಸಾಕ್ಷರತಾ ಆಂದೋಲನದ ಸಮಿತಿಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?

೧೧) ನಿಮ್ಮ ಪ್ರಕಾರ ಈ ಆಂದೋಲನದಲ್ಲಿ ಉತ್ಸಾಹದಿಂದ ಭಾಗವಹಿಸಿದವರು ಯಾರು?

೧೨) ಈ ಆಂದೋಲನದಲ್ಲಿ ಜಿಲ್ಲಾಧಿಕಾರಿಗಳ ಪಾತ್ರ ಹೇಗಿತ್ತು?

೧೩) ತಾಲೂಕು ಮತ್ತು ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಸಾಕ್ಷರತೆ ಬಗ್ಗೆ ನಿಮ್ಮ ಅನಿಸಿಕೆ?

೧೪) ಇತರ ಜಿಲ್ಲೆಗಳಿಗೆ ಹೋಲಿಸಿದರೆ ಬಳ್ಳಾರಿ ಜಿಲ್ಲೆಯ ಸಾಕ್ಷರತೆಯ ವಿಶೇಷತೆಗಳೇನು?

೧೫)ಕಲಾತಂಡ, ಕಲಾಜಾಥ ಹೇಗೆ ಕಾರ್ಯ ನಿರ್ವಹಿಸಿದವು?

೧೬) ಅನಕ್ಷರಸ್ಥರಿಗೆ ಅಕ್ಷರ ಕಲಿಯಬೇಕೆಂಬ ಉತ್ಸಾಹ ಇತ್ತೆ?

೧೭) ಕಲಿಯುವ ಸಾಮಗ್ರಿಗಳು ಸರಿಯಾಗಿ ಪೂರೈಕೆಯಾಗಿವೆಯೇ?

೧೮) ಸಂಘ, ಸಂಸ್ಥೆಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿರುವವೇ?

೧೯) ಈ ಆಂದೋಲನದಲ್ಲಿ ಏನಾದರೂ ತೊಂದರೆಗಳು ಕಂಡು ಬಂದಿರುವವೇ?

೨೦) ನಿಮ್ಮ ವಾರ್ಡಿನ ? ಗ್ರಾಮದ ಕಲಿಕಾ ಕೇಂದ್ರಗಳು ನಿರಂತರವಾಗಿ ನಡೆದಿರುವವೇ?

೨೧) ಈ ಕಾರ್ಯ ಕ್ರಮದಲ್ಲಿ ಕಂಡು ಬಂದ ವಿಶೇಷತೆಗಳೇನು?

## ಸರಕಾರಿ ಅಧಿಕಾರಿಗಳಿಗೆ ಪ್ರಶ್ನಾವಳಿಗಳು

೧) ನಿಮಗೆ ತಿಳಿದಿರುವಂತೆ ಅನಕ್ಷರಸ್ಥರ ಸಮೀಕ್ಷೆ ಸರಿಯಾಗಿ ನಡೆದಿದೆಯೇ?

೨) ಸಾಕ್ಷರತಾ ಆಂದೋಲನದ ಉದ್ಘಾಟನೆ ನಂತರ ಪೂರ್ವ ಸಿದ್ಧತೆಯ ಬಗ್ಗೆ ಏನಾದರೂ ದೋಷಗಳಿವೆಯೇ?

೩) ನಿಮಗೆ ತಿಳಿದಿರುವಂತೆ ಸಮೀಕ್ಷೆ ನಂತರ ಸಾಕ್ಷರತೆಗೆ ಒಳಪಡದೆ ಅನಕ್ಷರಸ್ಥರು ಉಳಿದುರುವರೇ?

೪)ಈ ಕಾರ್ಯಕ್ರಮದಲ್ಲಿ ಉತ್ಸಾಹದಿಂದ ಭಾಗವಹಿಸಿದವರು ಯಾರು?

೫) ಈ ಕಾರ್ಯಕ್ರಮದಲ್ಲಿ ವಾತಾರವಣ ಕುರಿತು ನಿಮ್ಮ ಅನಿಸಿಕೆ?

೬) ಈ ಕಾರ್ಯಕ್ರಮದಲ್ಲಿ ಸಮಿತಿಗಳ ಕಾರ್ಯ ವೈಖರಿ ಬಗ್ಗೆ ನಿಮ್ಮ ಅನಿಸಿಕೆ? (ಕಾರ್ಯಕಾರಿ ಸಮಿತಿ-ಸಲಹಾ ಸಮಿತಿ)

೭) ಈ ಕಾರ್ಯಕ್ರಮದಲ್ಲಿ ಜಿಲ್ಲಾಧಿಕಾರಿಗಳ ಪಾತ್ರ?

೮) ನಿಮಗೆ ಬಳ್ಳಾರಿ ಜಿಲ್ಲಾ ಸಾಕ್ಷರತಾ ಆಂದೋಲನಕ್ಕೂ ಮತ್ತು ಕರ್ನಾಟಕದ ಇತರ ಜಿಲ್ಲೆಗಳ ಆಂದೋಲನಕ್ಕೂ ಏನು ಅನಿಸುತ್ತದೆ. ಅವುಗಳಿಗಿಂತ ಬಳ್ಳಾರಿ ಜಿಲ್ಲೆ ಯಾವುದಾದರೂ ವಿಷಯದಲ್ಲಿ ಭಿನ್ನತೆ ಇವೆಯೇ?

೯) ಒಟ್ಟನಲ್ಲಿ ಬಳ್ಳಾರಿ ಜಿಲ್ಲಾ ಸಾಕ್ಷರತಾ ಆಂದೋಲನದ ಬಗ್ಗೆ ನಿಮ್ಮ ಅಭಿಪ್ರಾಯ?

೧೦) ಬಳ್ಳಾರಿ ಜಿಲ್ಲಾ ಸಾಕ್ಷರತೆ ಯಶಸ್ವಿ ಎನ್ನುತ್ತೀರೋ ಅಥವಾ ಅಯಶಸ್ವಿ ಎನ್ನುತ್ತಿರೋ?

೧೧) ಸರಕಾರದ ಎಲ್ಲ ಇಲಾಖೆಗಳು ಈ ಆಂದೋಲನದಲ್ಲಿ ಸಕ್ರೀಯವಾಗಿ ಭಾಗವಹಿಸಿರಬಹುದೇ?

## ಸಾರ್ವಜನಿಕರಿಗೆ ಪ್ರಶ್ನಾವಳಿಗಳು

೧) ಬಳ್ಳಾರಿ ಜಿಲ್ಲಾ ಸಾಕ್ಷರತೆ ಬಗ್ಗೆ ನಿಮ್ಮ ಅನಿಸಿಕೆ?

೨) ಈ ಕಾರ್ಯಕ್ರಮದ ಪೂರ್ವ ಸಿದ್ಧತೆ ಸರಿಯಾಗಿ ಇದೆಯೇ?

೩) ಈ ಕಾರ್ಯಕ್ರಮದಲ್ಲಿ ಅನಕ್ಷರಸ್ಥರ ಸಮೀಕ್ಷೆ ಸರಿಯಾಗಿ ನಡೆದಿದೆಯೇ?

೪) ಈ ಕಾರ್ಯಕ್ರಮದಲ್ಲಿ ಕಂಡು ಬಂದ ವಾತಾವರಣ ಹೇಗಿತ್ತು?

೫) ಈ ಕಾರ್ಯಕ್ರಮದಲ್ಲಿ ಹೆಚ್ಚು ಸಕ್ರೀಯವಾಗಿ ಭಾಗವಹಿಸಿದವರು ಯಾರು?

೬) ಈ ಆಂದೋಲನದಲ್ಲಿ ಜಿಲ್ಲಾಧಿಕಾರಿಗಳ ಭಾಗಿತ್ವ ಹೇಗಿತ್ತು?

೭) ಈ ಕಾರ್ಯಕ್ರಮದಲ್ಲಿ ಅಧಿಕಾರಿಗಳು ಮತ್ತು ಅಧೀಕಾರೇತರರ ಭಾಗಿತ್ವಹೇಗಿತ್ತು?

೮) ಈ ಆಂದೋಲನದಲ್ಲಿ ಹಣಕಾಸಿನ ಬಗ್ಗೆ ಏನಾದರೂ ದೂರುಗಳು ಇವೆಯೇ?

೯) ಈಕಾರ್ಯಕ್ರಮದಲ್ಲಿ ಏನಾದರೂ ಅವ್ಯವಹಾರ ನಡೆದಿದೆಯೇ?

೧೦) ಈ ಆಂದೋಲನದಲ್ಲಿ ಕಂಡು ಬಂದ ಸಮಸ್ಯೆಗಳೇನು?

೧೧) ಇಡೀ ರಾಜ್ಯದಲ್ಲಿ ಹೆಚ್ಚಿನ ವಾತಾವರಣ ನಿರ್ಮಾಣ ಮಾಡಿದ್ದು ಬಳ್ಳಾರಿ ಜಿಲ್ಲೆ ಎನ್ನುತ್ತಿದ್ದಾರೆ ನಿಜವೇ?

೧೨) ಈ ಕಾರ್ಯಕ್ರಮದಲ್ಲಿ ಶಿಕ್ಷಕರ ಭಾಗಿತ್ವ ಹೇಗಿತ್ತು?

೧೩) ಈ ಯೋಜನೆಯ ಎಲ್ಲ ಹಂತಗಳಲ್ಲಿ ಜನರ ಸಹಕಾರ ಹೇಗಿತ್ತು?

೧೪) ಕಲಿಕಾ ಕೇಂದ್ರಕ್ಕೆ ಎಲ್ಲ ಸಾಮಗ್ರಿಗಳು ಪೂರೈಕೆ ಆಗಿವೆಯೇ?

೧೫) ಪ್ರಚಾರ ಮಾಧ್ಯಮಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?

೧೬) ನಿಮಗೆ ತಿಳಿದಿರುವಂತೆ ದೀಪದ ವ್ಯವಸ್ಥೆ ಹೇಗಿತ್ತು (ಕಲಿಕಾ ಕೇಂದ್ರಗಳಿಗೆ)

೧೭) ಅನಕ್ಷರಸ್ಥರು ನಿರಂತರವಾಗಿ ಕಲಿಕಾ ಕೇಂದ್ರಗಳಿಗೆ ಬರುತ್ತಿದ್ದಾರೆಯೇ?

೧೮) ಈ ಆಂದೋಲನದಿಂದ ಅನಕ್ಷರಸ್ಥರಿಗೆ ಅರಿವು ಮೂಡಿರಬಹುದೇ?

೧೯) ಇನ್ನೂ ಏನಾದರೂ ಹೇಳಲು ಇಷ್ಟಪಡುವಿರಾ?

## ಅನುಬಂಧ-೨

ಅ). ಸಾಕ್ಷರತಾ ಕಾರ್ಯಕ್ರಮವನ್ನೂ ಆಕರ್ಷಕವಾಗಿ ಹೇಳುವ ಕೆಲವು ಘೋಷಣೆಗಳು.

ಶಿಕ್ಷಣವೇ ಶಕ್ತಿ

ಶಿಕ್ಷಣ ಪಡೆದ ವ್ಯಕ್ತಿ ಆಗುವನು ದೇಶಕ್ಕೆ ಶಕ್ತಿ

ಶಿಕ್ಷಣದ ಡಂಗುರ ಹೊಡಿಸಿ ಜನಶಕ್ತಿ ಜಾಗೃತ ಗೊಳಿಸಿ.

ಶಿಕ್ಷಣವೆಂಬ ಸುವರ್ಣಾವಕಾಶ ಕಳೆದು ಕೊಳ್ಳದಿರಿ ಸದಾವಕಾಶ.

ಶಿಕ್ಷಣ ಜ್ಞಾನ ತೊಡೆಯುವದು ಅಜ್ಞಾನ.

ಸಾಕ್ಷರತಾ ದೀಪ ಬೆಳಗಿಸಿ ಅನಕ್ಷರತಾ ಕತ್ತಲು ತೊಲಗಿಸಿ.

ಸಾಕ್ಷರತಾ ಸಂಸಾರ ಆನಂದದ ಸಾಗರ.

ಸಾಕ್ಷರತೆಯ ವೃದ್ಧಿ ಬಾಳಿಗೆ ಅಭಿವೃದ್ಧಿ.

ಸಾಕ್ಷರತೆಯನ್ನು ಪಡೆದುಕೊಳ್ಳಿ ಜ್ಞಾನಭಂಡಾರ ತುಂಬಿಕೊಳ್ಳಿ.

ಸಾಕ್ಷರಸ್ಥ ಹೆಂಗಸು ಜೀವನದ ಹೊಂಗನಸು.

ಸಾಕ್ಷರತೆ ಪಡೆಯಿರಿ ಮೌಢ್ಯತೆ ತೊರೆಯಿರಿ.

ಸಾಕ್ಷರತಾ ಯಾತ್ರೆ ಪ್ರಗತಿಯ ಅಕ್ಷಯ ಪಾತ್ರೆ.

ಸಾಕ್ಷರತಾ ಆಂದೋಲನ ಬಂದಿತು ಗ್ರಾಮದ ಜನತೆಗೆ ಅರಿವನು ತಂದಿತು.

ಸಾಕ್ಷರತೆಯ ಯಶ ಜಾತೀಯತೆಯ ವಿನಾಶ .

ಸಾಕ್ಷರತೆ ಪಡೆಯೋಣ ಜನಸಂಖ್ಯೆ ನಿಯಂತ್ರಿಸೋಣ.

ಸಾಕ್ಷರ ಸಾರಿ ಪ್ರಗತಿಗೆ ದಾರಿ.

ಸಾಕ್ಷರತೆ ಪಡೆಯೋಣ ಸಹಬಾಳ್ವೆ ನಡೆಸೋಣ.

ಸಂಕೋಲೆಯ ಬಿಡುಗಡೆ ಶಿಕ್ಷಣವೇ ಸಾಧನ.

ಸಾಕ್ಷರ ನಗರ ಸುಂದರ ನಗರ.

ಸೈನ್ಯದಿಂದ ಶತ್ರು ಓಡಿಸೋಣ ಅಕ್ಷರ ಸೈನ್ಯದಿಂದ ನಿರಕ್ಷರತೆ ನಿರ್ಮೂಲ ಮಾಡೋಣ.

ಸಾಕ್ಷರತಾ ಕುಟುಂಬ ಸುಖೀ ಕುಟುಂಬ.

ಸಾಕ್ಷರರಾಗಿ ಬಾಳಿರಿ ಬಡತನವ ತೊಲಗಿಸಿರಿ.

ಸಾಕ್ಷರತಾ ರಥ ಪ್ರಗತಿಯ ಪಥ.

ಸಾಕ್ಷರತಾ ಡಂಗುರ ಹೊಡಿಸಿ ಜನಶಕ್ತಿಯ ಬಡಿದೆಬ್ಬಿಸಿ.

ಸಾಕ್ಷರತಾ ಆಂದೋಲನಾ ಬಂದಿತು ಜನರಿಗೆ ಅರಿವನು ತಂದಿತು.

ಸಾಕ್ಷರತಾ ನೌಕೆಯ ಬಳಸಿ ಯಶಸ್ಸಿನ ಜೀವನಗಳಿಸಿ.

ಸಾಕ್ಷರತಾ ಮಲ್ಲ ಬದುಕನು ಬಲ್ಲ.

ಅನಕ್ಷರತೆ ತರುವದು ಆಪತ್ತು ವಿದ್ಯೆ ಅಪಹರಿಸಲಾಗದ ಸಂಪತ್ತು.

ಅನಕ್ಷರತೆಯಿಂದ ದಾನವ ಸಾಕ್ಷರತೆಯಿಂದ ಮಾನವ.

ಅಕ್ಷರ ಜ್ಞಾನ ತುಂಗಾಪಾನ.

ಅಕ್ಷರ ಕಲಿಯಿರಿ ಅಪರಾಧ ತಡೆಯಿರಿ.

ಅಕ್ಷರ ಕಲಿಯೋಣ ಹೊಸ ಬೇಸಾಯ ಮಾಡೋಣ.

ಅಕ್ಷರ ಸರದಾರ ಸಹಕಾರಕ್ಕೆ ಆಧಾರ.

ಅಕ್ಷರ ಕಲಿಸು ಕಾನೂನು ರಕ್ಷಿಸು.

ಅಕ್ಷರ ಕಲಿಸಿ ನೀರನ್ನು ಉಳಿಸಿ.

ಆಹಾರ ಬೇಕು ಹೊಟ್ಟೆಯ ಹಸಿವಿಗೆ ಅಕ್ಷರಬೇಕು ಜ್ಞಾನದ ಹಸಿವಿಗೆ.

ಆರೋಗ್ಯವಿದ್ದರೆ ಆಯುಷ್ಯ ಅಕ್ಷರವಿದ್ದರೆ ಭವಿಷ್ಯ.

ಅಕ್ಷರ ಕಿರಣ ಕೈಗಾರೀಕರಣ.

ಅಕ್ಷರ ಜ್ಞಾನ ನಮಗೆ ಬೇಕು ಪಂಚಾಯಿತಿ ವ್ಯವಸ್ಥೆ ನಮಗಿರಬೇಕು.

ಅಕ್ಷರ ವಿಜಯಕ್ಕೆ ಜಯವಾಗಲಿ.

ಅಕ್ಷರವಿಲ್ಲದ ಬಾಳು ಅಂಧಕಾರದ ಗೋಳು.

ಅನಕ್ಷರಸ್ಥರಿಗೆ ಓದಲು ಕಲಿಸಿ ದೇಶದ ಮುನ್ನಡೆಗೆ ಸಹಕರಿಸಿ.

ಅನೌಪಚಾರಿಕ ಶಿಕ್ಷಣ ಬಂತು- ಅನಕ್ಷರತೆ ತೊಲಗಿತು.

ಅನಕ್ಷರತಾ ಅಜ್ಞಾನ ಸಾಕ್ಷರತಾ ಸುಜ್ಞಾನ.

ಅಕ್ಷರವೆಂಬ ಬೀಜ ಬಿತ್ತಿರಿ ಜ್ಞಾನವೆಂಬ ಬೆಳೆಯ ಬೆಳೆಸಿರಿ.

ಆಹಾರ ದೇಹಕ್ಕೆ ಪುಷ್ಟಿ ಶಿಕ್ಷಣ ಮನಕೆ ಪುಷ್ಟಿ

ಅಜ್ಞಾನ ಕಳೆಯ ಕಿತ್ತಿ ಅಕ್ಷರ ಬೀಜವ ಬಿತ್ತಿ.

ಅಜ್ಞಾನದ ಕತ್ತಲೆಯ ಅಳಿಸಿ ಸುಜ್ಞಾನದ ಜ್ಯೋತಿಯ ಬೆಳಗಿಸಿ.

ಅಜ್ಞಾನ ಅಭಿವೃದ್ಧಿಗೆ ತಡೆ ಸುಜ್ಞಾನ ಅಭಿವೃದ್ಧಿಗೆ ಮುನ್ನಡೆ.

ಅಜ್ಞಾನದ ಕತ್ತಲೆಯ ಸರಿಸಿ ಜ್ಞಾನದ ಬೆಳಕನ್ನು ಬೆಳಗಿಸಿ.

ಅಕ್ಷರ ಸಂಪತ್ತು ಅಕ್ಷಯ ಸಂಪತ್ತು.

ಅನಕ್ಷರತೆ ರಾಷ್ಟ್ರದ ಪ್ರಥಮ ಶತ್ರು.

ಅನಕ್ಷರತೆಯಿಂದ ಪರಾವಲಂಬನೆ ಸಾಕ್ಷರತೆಯಿಂದ ಸ್ವಾವಲಂಬನೆ.

ಅಕ್ಷರ ಅರಿವಿನ ಗುರು

ಓದು ಬಲ್ಲವನ ಸಂಸಾರ ಚೊಕ್ಕಸಂಸಾರ.

ಓದು ಕಲಿತ ರೈತ ಧೈರ್ಯ ಸಾಹಸಿಯಾತ.

ಬರಹ ನೀ ಕಲಿ ಸಾರ್ಥಕ ಬದುಕನು ನೀ ತಿಳಿ.

ಓದು ಕಲಿಯಲು ನಾಚಿಕೆಯೇಕೆ ವಯಸ್ಸಿನ ಅಂತರ ಇದಕೇಕೆ?.

ಒಳ್ಳೆಯ ಪುಸ್ತಕ ಪಡೆಯಿರಿ ಒಳ್ಳೆಯ ಗುಣಗಳ ಹೊಂದಿರಿ.

ಓದು ಬರಹ ಕಲಿಯೋಣ ನಾವೆಲ್ಲ ಒಂದಾಗಿ ಬಾಳೋಣ.

ಒಂದು ಎರಡು ಮೂರು ಸಾಕ್ಷರತೆಯನು ಸಾರು.

ಓದು ಬರಹಬಲ್ಲ ಮಡದಿ ತೋರುವಳು ಪತಿಗೆ ದಾರಿ.

ಓದು ಬರಹ ಕಲಿತನಾರಿ ಆಗುವಳು ಪ್ರಗತಿಗೆ ದಾರಿ.

ಓದು ಬರಹ ಕಲಿಯೋಣ ಬದುಕಿನ ದಾರಿ ತಿಳಿಯೋಣ.

ಓದು ಬರಹ ಲೆಕ್ಕ ತಿಳಿದವನ ಬಾಳುಚೊಕ್ಕ.

ಓದು ಬರಹ ಕಲಿತನಾರಿ ಸುಖಿ ಸಂಸಾರಕ್ಕೆ ದಾರಿ.

ಓದು ಬರಹ ಕಲಿತ ಕೃಷಿಕ ಆಗುವನು ದೇಶದ ಹಿತ ಚಿಂತಕ.

ಓದು ಕಲಿತ ಜಾಣ ಊರಿಗೊಂದು ಆಭರಣ.

ಆ). ಪ್ರಜಾಪ್ರಭುತ್ವ ಮತ್ತು ಶಿಕ್ಷಣ ಕುರಿತಂತೆ ಚಿಂತನೆ ಶೀಲರು ಹೇಳಿರುವ ಆಕರ್ಷಣೆಯ ಕೆಲವು ಉಕ್ತಿಗಳು

೧) "ಮಗು ಮತ್ತು ವ್ಯಕ್ತಿಯಲ್ಲಿರುವ ಶರೀರ, ಮನಸ್ಸು ಹಾಗೂಆತ್ಮದ ಶಕ್ತಿಗಳಲ್ಲಿಯ ಅತ್ಯುತ್ತಮಾಂಶಗಳನ್ನು ಸರ್ವತೋಮುಖವಾಗಿ ಹೊರಗೆಡುವುದೇ ಶಿಕ್ಷಣ"

-ಗಾಂಧೀಜಿ.

೨. "ನಾವು ಏನು ಓದುತ್ತೇವೆಯೋ ಅದರ ಬಗ್ಗೆ ಯೋಚಿಸಬೇಕು ಅದನ್ನು ಮನನ ಮಾಡಿಕೊಳ್ಳಬೇಕು. ಅದನ್ನು ನಮ್ಮ ನಿತ್ಯ ಜೀವನದಲ್ಲಿ ಅಳವಡಿಸಿಕೊಳ್ಳಬೇಕು".

-ಗಾಂಧೀಜಿ.

೩. "ಅರ್ಧದಷ್ಟು ನಮ್ಮ ಜನ ಅನಕ್ಷರಸ್ಥರಾಗಿರುವುದು ಅಥವಾ ಇರಲು ಬಿಟ್ಟಿರುವುದು ಪಾಪಮಾತ್ರವಲ್ಲ ಕಳಂಕವೂ ಹೌದು. ಇದನ್ನು ತೊಡೆದು ಹಾಕಲೇ ಬೇಕು".

-ಗಾಂಧೀಜಿ.

೪. ಮಹಾತ್ಮಗಾಂಧೀಜಿಯವರು ಸಪ್ತಘಾತಕಗಳನ್ನು ಹೇಳಿದರು. ಅವುಗಳಲ್ಲಿ 'ಶೀಲವಿಲ್ಲದ ಶಿಕ್ಷಣ ಶಿಕ್ಷಣವೆನಿಸದು'ಎಂದಿದ್ದಾರೆ. ಅದರಂತೆ ಇನ್ನುಳಿದ ಕ್ಷೇತ್ರಗಳಿಗೂ ಸಂಬಂಧಿಸಿದ ಅಂಶಗಳು.

೧) ತತ್ವರಹಿತ ರಾಜಕೀಯ

೨) ದುಡಿಮೆ ಇಲ್ಲದ ಸಂಪತ್ತು

೩) ಪ್ರಜ್ಞೆಯಿಲ್ಲದ ಸಂತೋಷ

೪) ಶೀಲವಿಲ್ಲದ ಶಿಕ್ಷಣ

೫) ನೀತಿಯಿಲ್ಲದ ವ್ಯವಹಾರ

೬) ಮಾನವೀಯತೆ ಇಲ್ಲದ ವಿಜ್ಞಾನ

೭) ತ್ಯಾಗವಿಲ್ಲದ ಪೂಜೆ

-ಮಹಾತ್ಮಗಾಂಧೀಜಿ.

೫. ಶಿಕ್ಷಣ ಎಂದರೆ ಹೃದಯಕ್ಕೆ ಮನಸ್ಸುಗಳಿಂದ ಶ್ರೇಷ್ಠವಾದುದನ್ನು ಪಡೆಯುವ ಪ್ರಯತ್ನ

-ಗಾಂಧೀಜಿ.

೬) " ವಿದ್ಯೆ ಎಂಬುದೊಂದು ದೊಡ್ಡ ತಪಸ್ಸು"

-ಸ್ವಾಮಿವಿವೇಕಾನಂದ.

೭. "ಮನುಷ್ಯನಿಗೆ ತನಗೆ ಇರುವ ಪರಿಪೂರ್ಣತೆಯನ್ನು ಸೃಷ್ಟಿಪಡಿಸುವುದೇ ಶಿಕ್ಷಣ"

-ಸ್ವಾಮಿವಿವೇಕಾನಂದ.

೮. "ಅಮೃತ ಪುತ್ರರೇ
ಅನ್ನನೀಡಿದರೆ ಒಂದು ದಿನ ಸಹಾಯ ಮಾಡಿದಂತೆ
ಅರಿವೆ ನೀಡಿದರೆ ಕೆಲವು ತಿಂಗಳಿಗೆ ಸಹಾಯ ಮಾಡಿದಂತೆ
ಅಕ್ಷರ ಕಲಿಸಿ, ಅರಿವು ಮೂಡಿಸಿದರೆ,
ಶಾಶ್ವತ ಸಹಾಯ ಮಾಡಿದಂತೆ"

-ಸ್ವಾಮಿವಿವೇಕಾನಂದ.

೯. " ಮಾನವನಲ್ಲಿ ಅಡಗಿರುವ ದೈವತ್ವವನ್ನು ಹೊರಗೆಡುವದೇ ಶಿಕ್ಷಣ"

-ಸ್ವಾಮಿವಿವೇಕಾನಂದ.

೧೦. "ಯಾವ ಮನುಷ್ಯ ತಾನು ಕಲಿತುದ್ದನ್ನು ತನ್ನ ನಡೆ, ನುಡಿಗಳಲ್ಲಿ ಬಿಂಬಿಸುವನೋ ಅದೇ ಶಿಕ್ಷಣ"

-ಸ್ವಾಮಿವಿವೇಕಾನಂದ.

೧೧."ಸಂಪ್ರದಾಯಿಕ ಅರ್ಥದಲ್ಲಿ ಧರ್ಮವಿಲ್ಲದೆ ಶಿಕ್ಷಣಪದ್ಧತಿ, ಶಿಕ್ಷಣ ಅಲ್ಲ. ಅದು ಆಧ್ಯಾತ್ಮಿಕ ಮತ್ತು ಪಾಂಡಿತ್ಯವನ್ನು ಒಳಗೊಂಡು ವೈಜ್ಞಾನಿಕ ಮತ್ತು ಸಮದರ್ಶಿತ್ವದ ವಿಶ್ವಬಂಧುತ್ವದ ಆಧಾರದ ಮೇಲೆ ಇರಬೇಕು."

-ಸ್ವಾಮಿವಿವೇಕಾನಂದ.

೧೨."ಭಾರತದ ಇಂದಿನ ದುರ್ಗತಿಗೆ ಅನಕ್ಷರತೆ, ದಾರಿದ್ರ್ಯವೇಕಾರಣ. ಜನಸಾಮಾನ್ಯರಿಗೆ ಶಿಕ್ಷಣ ನೀಡಿ ನಷ್ಟವಾದ ಅವರ ವ್ಯಕ್ತಿತ್ವವನ್ನು ಅವರಿಗೆ ಮರಳಿ ದೊರಕಿಸಿ ಕೊಡುವುದೇ ಈ ಹೊತ್ತಿನ ನಮ್ಮ ಪ್ರಥಮ ಕರ್ತವ್ಯವಾಗಬೇಕು."

-ಸ್ವಾಮಿವಿವೇಕಾನಂದ.

೧೩. " ಮಾನವ ಮೀನಿನಂತೆ ನೀರಿನಲ್ಲಿ ಈಜುವುದನ್ನು ಕಲಿತ,
ಹಕ್ಕಿಯಂತೆ ಬಾನಿನಲ್ಲಿ ಹಾರಾಡುವುದನ್ನು ಕಲಿತ,
ಆದರೆ ಮಾನವ , ಮಾನವನಂತೆ ಬದುಕುವುದನ್ನೂ ಮಾತ್ರ ಕಲಿಯಲಿಲ್ಲ."

-ಡಾ|| ರಾಧಾಕೃಷ್ಣನ್.

೧೪."ಮಕ್ಕಳು ಮಾನವರಾಗಿ, ನಾಗರಿಕರಾಗಿ, ಇನ್ನೊಬ್ಬರೊಡನೆ ಪ್ರೀತಿ-ಗೌರವ ಘನತೆಗಳಿಂದ ವರ್ತಿಸುವಂತೆ ಮಾಡಿ, ಮಕ್ಕಳಲ್ಲಿ ಔದಾರ್ಯ, ಸೋದರಭಾವನೆ, ಸಹಾನುಭೂತಿ, ಬೆಳೆಯುವಂತೆ ಮಾಡುವುದೇ ಶಿಕ್ಷಣ".

-ಡಾ|| ರಾಧಾಕೃಷ್ಣನ್.

೧೫." ಆತ್ಮದ ಬೆಳವಣಗೆಗೆ ನೆರವು ನೀಡುವುದೇ ಶಿಕ್ಷಣ''

-ಡಾ|| ರಾಧಾಕೃಷ್ಣನ್.

೧೬."ವಿದ್ಯೆಯ ಮುಖ್ಯಗುರಿ ಏನೆಂದರೆ ಇತರರೊಡನೆ ನಮ್ಮನ್ನು ಹೊಂದಿಸಿ ಕೊಳ್ಳುವುದು."

-ಡಾ|| ರಾಧಾಕೃಷ್ಣನ್.

೧೭. "ಮಣ್ಣು, ನೀರು ಮತ್ತು ಪ್ರಕಾಶದೊಡನೆ ಸಂಪೂರ್ಣ ಸಂಬಂಧವಿಲ್ಲದೇ ಶಾರೀರಿಕ ಶಿಕ್ಷಣ ಸಂಪೂರ್ಣವಾಗುವುದಿಲ್ಲ."

-ರವೀಂದ್ರನಾಥ ಟ್ಯಾಗೋರ್.

೧೮."ಸಹಜೀವಿಗಳನ್ನು ಸಮಾಜವನ್ನು, ದೇಶವನ್ನು ಅನ್ಯರಾಷ್ಟ್ರಗಳನ್ನು ಅರಿತು ಕೊಂಡು ಅವುಗಳಿಗೆಲ್ಲ ಉಚಿತ ಗೌರವ ನೀಡುವ ಪದ್ಧತಿಯನ್ನು ಕಲಿಸುವಂಥದೇ ನಿಜವಾದ ಶಿಕ್ಷಣ''.

-ರವೀಂದ್ರನಾಥ್ ಟ್ಯಾಗೋರ್

೧೯." ಮಣ್ಣಿನಿಂದ ಚಿನ್ನವನ್ನು ತೆಗೆಯುವ ಅಸ್ತ್ರ ಶಿಕ್ಷಣ"

-ರವೀಂದ್ರನಾಥ್ ಟ್ಯಾರಗೋರ್

೨೦." ಆತ್ಮಪ್ರಕಾಶ, ಪ್ರೇಮಿಗಳೆಂಬ ಸ್ಥಿರ ಸಂಪತ್ತನ್ನು ತಂದುಕೊಟ್ಟು ಮಗುವನ್ನು ಸುಂದರ, ಯೋಗ್ಯ ಹಾಗೂ ಸತ್ಯವಂತನನ್ನಾಗಿ ಮಾಡುವುದೇ ಶಿಕ್ಷಣ".

-ರವೀಂದ್ರನಾಥ್ ಟ್ಯಾಗೋರ್

೨೧. "ಆತ್ಮ ಸಾಕ್ಷಾತ್ಕಾರ ನೀಡುವುದೇ ಶಿಕ್ಷಣ"

-ಶ್ರೀ ಅರವಿಂದಘೋಷ್.

೨೨." ಕೇವಲ ವಿಷಯದ ಮಾಹಿತಿ ನೀಡುವುದು ಶಿಕ್ಷಣವಾಗಲಾರದು. ಮಗುವಿನ ಬೌದ್ಧಿಕ ಹಾಗೂ ನೈತಿಕ ಉತ್ಕರ್ಷವೇ ಶಿಕ್ಷಣದ ಗುರಿ".

-ಶ್ರೀ ಅರವಿಂದಘೋಷ್.

೨೩. " ಅದೃಷ್ಟವಾದವನ್ನು ಖಂಡಿತ ಬಿಡಿ.
ಪ್ರಯತ್ನಮಾಡಿ, ವಿದ್ಯಾವಂತರಾಗಿರಿ."

-ಡಾ|| ಬಿ.ಆರ್. ಅಂಬೇಡ್ಕರ್.

೨೪." ನಿಮ್ಮ ಸಮೀಪದಲ್ಲಿ ಇರುವವರಿಗೆ , ಪರಿಚಿತರಿಗೆ, ಶಿಕ್ಷಣದ ಮಹತ್ವ ಕುರಿತು ಬೋಧಿಸಿರಿ".

-ಡಾ|| ಬಿ.ಆರ್. ಅಂಬೇಡ್ಕರ್.

೨೫. " ತನ್ನ ಇರುವಿಕೆಯನ್ನು ಸಮಾಜವು ಕಾಪಾಡಿಕೊಂಡು ಪ್ರಗತಿಪರ ಹೆಜ್ಜೆಗಳನ್ನೂ, ಇಡುವಕ್ಕಾಗಿ ಕಾರಣ ಸಹಿತವಾಗಿ ಕೈಗೊಂಡ ಪ್ರಯತ್ನವೇ ಶಿಕ್ಷಣದ ಗುರಿ."

-ಡಾ|| ಝಕೀರ್ ಹುಸೇನ್.

೨೭. " ಭಾರತದ ಅಭಿವೃದ್ಧಿಯಾಗಬೇಕಾದರೆ ಮಹಿಳೆಯರಿಗೆ ಶಿಕ್ಷಣಾವಕಾಶ ನೀಡಲೇಬೇಕು."

-ಜ್ಯೋತಿಬಾಪುಲೆ.

೨೭). "ಪರೀಕ್ಷೆಗಳಲ್ಲಿ ಪಾಸಾಗಿ ಪದವಿಗಳನ್ನು ಸಂಪಾದಿಸಿದ ಮಾತ್ರಕ್ಕೆ ವಿದ್ಯೆ ಮುಗಿಯಲಿಲ್ಲ. ಕಲಿತುದನ್ನು ಅರಗಿಸಿಕೊಂಡು ಜೀವನದಲ್ಲಿ ಅಳವಡಿಸಿಕೊಂಡು ಸಾಮಾಜದೊಡನೆ ರೂಢಿಸಿಕೊಂಡು ಹೋಗುವ ಸಾಮರ್ಥ್ಯವನ್ನು ಪಡೆದಾಗಲೇ ವಿದ್ಯೆಯ ಸಾರ್ಥಕತೆ".

-ಕುವೆಂಪು.

೨೮." ವಿಶ್ವವೇ ನನ್ನ ಮನೆ
ಮಾನವ ಕುಲವೇ ನನ್ನ ಕುಟುಂಬ
ಜ್ಞಾನವೇ ನನ್ನ ತೀರ್ಥ."



-ಕುವೆಂಪು.

೨೯. "ಆತ್ಮ ಶುದ್ಧಿ ಆಗಬೇಕಾದರೆ,
ದ್ವೇಷವನ್ನು ಅಳಿಸಬೇಕು.
ಜ್ಞಾನವನ್ನು ಪಡೆಯಬೇಕು".

-ಜೈನಧರ್ಮ.

೩೦. "ಧೈರ್ಯವಿಲ್ಲದೆ ಧನವಿಲ್ಲ
ಶೌರ್ಯವಿಲ್ಲದೆ ಜಯವಿಲ್ಲ
ಜ್ಞಾನವಿಲ್ಲದೆ ಮೋಕ್ಷವಿಲ್ಲ
ದಾನವಿಲ್ಲದೆ ಯಶಸ್ಸಿಯಿಲ್ಲ".

ಸಭಾರಂಜನ್ ಶತಕ.

೩೧. "ಜ್ಞಾನದಿಂದ ಅಜ್ಞಾನ ಅಳಿಯುವುದು, ಅಂತಹ ಜ್ಞಾನ
ಸೂರ್ಯನಂತೆ ಪ್ರಕಾಶಮಾನವೂ, ಪರಬ್ರಹ್ಮವೂ ಆಗಿರುತ್ತದೆ."

-ಶ್ರೀಕೃಷ್ಣಪರಮಾತ್ಮ.

೩೨. "ಜ್ಞಾನಕ್ಕೆ ಸರಿಸಮವಾದ ಪವಿತ್ರ ವಸ್ತು
ಈ ಜಗತ್ತಿನಲ್ಲಿ ಬೇರೊಂದಿಲ್ಲ."

-ಭಗವದ್ಗೀತೆ.

೩೩. "ಉದ್ಯಮಶೀಲತೆ, ಸಾಹಸ, ಧೈರ್ಯ, ಬುದ್ಧಿ, ಶಕ್ತಿ, ಪರಾಕ್ರಮ - ಈ ಆರೂ ಯಾರಲ್ಲಿರುತ್ತವೋ ಅವರಿಗೆ ದೈವವೇ ಬೆಂಬಲಕ್ಕೆ ನಿಲ್ಲುತ್ತದೆ".

-ವಿಕ್ರಮಚರಿತೆ.

೩೪." ತಾಯ್ನಾಡು ಹಾಗೂ ತಾಯ್ನಾಡಿಯ ಬಗ್ಗೆ ಹೆಮ್ಮೆ ಪಡುವಂತಹ ಮಕ್ಕಳನ್ನು ತರಬೇತಿ ಗೊಳಿಸುವದೇ ಶಿಕ್ಷಣ".

-ಕೌಟಿಲ್ಯ.

೩೫." ಸ್ನಾನವ ಮಾಡಿರೋ ಜ್ಞಾನದ ತೀರ್ಥದಲಿ"

-ದಾಸರು.

೩೬."ವಿದ್ಯೆ ಯಾರು ಕಸಿದು ಕೊಳ್ಳಲಾಗದ ಅಳಿದು ಹೋಗದ, ಪ್ರಳಯವಾದರೂ ನಾಶವಾಗದ ಸಂಪತ್ತು."

-ನಾಣ್ಣುಡಿ.

೩೭. "ಸದಾವಕಾಶ ಕಳೆದು ಕೊಂಡರೆ,
ತನ್ನನ್ನು ತಾನೇ ಕಳೆದು ಕೊಂಡಂತೆ".

-ಗಾದೆ.

೩೮. "ವಿದ್ಯೆಬಲ್ಲವನ ಮುಖ ಮುದ್ದು ಬರುವಂತಿಕ್ಕು
ವಿದ್ಯೆಬಾರದವನ ಮುಖ
ಹಾಳೂರು ಹದ್ದಿಗಿಂತಲೂ ಕಡೆ ಸರ್ವಜ್ಞ".

-ಸರ್ವಜ್ಞ.

೩೯. "ಯದಾ ಯದಾಹಿ ಧರ್ಮಸ್ಯಗ್ಲಾ ನಿರ್ಭವತಿ ಭಾರತ"
ಅಂದರೆ ಧರ್ಮಗ್ಲಾನಿ ನಡೆಯುತ್ತಿರುವ ಕಲಿಯುಗದ
ಅಂತಿಮ ಸಮಯದಲ್ಲಿ ನಿರಾಕಾರ ಶಿವಪರಮಾತ್ಮನು
ಸೃಷ್ಟಿಯಲ್ಲಿ ಅವತರಿಸಿ ದಿವ್ಯಜ್ಞಾನ ನೀಡುತ್ತಿರುವನು.

-ಮಹಾಭಾರತ.

೪೦. "ಪ್ರತಿಯೊಬ್ಬರಿಗೂ ಕಲಿಯುವ ಹಕ್ಕಿದೆ.
ಜ್ಞಾನವೆನ್ನುವುದು ಅನ್ನದಷ್ಟೇ ಮುಖ್ಯ".

-ಗೌತಮಬುದ್ಧ.

೪೧. "ಮನುಷ್ಯನನ್ನು ಸ್ವಾವಲಂಬಿಯಾಗಿ ಮಾಡುವುದೇ ನಿಜವಾದ ಶಿಕ್ಷಣ"

-ಋಗ್ವೇದ

೪೨. " ಶಿಕ್ಷಣವು ಮನುಷ್ಯನನ್ನು ಒಳ್ಳೆಯ ಗುಣವುಳ್ಳವನನ್ನಾಗಿ ಮಾಡುತ್ತದೆ".

-ಯಾಜ್ಞವಲ್ಕ ಮಹರ್ಷಿ.

೪೩. "ದೇಶಕ್ಕಾಗಿ ಪ್ರೀತಿ, ತರಬೇತಿ, ಮತ್ತು ರಾಷ್ಟ್ರ ಪ್ರೇಮವನ್ನೂ ಬೆಳೆಸುವುದೇ ಶಿಕ್ಷಣ".

-ಕೌಟಿಲ್ಯ.

೪೪. "ಶಿಕ್ಷಣ ಎಂದರೆ ಆತ್ಮ ಸಾಕ್ಷಾತ್ಕಾರತ"

-ಶಂಕರಾಚಾರ್ಯ.

೪೫. "ಮಾನವನಿಗೆ ಶಿಕ್ಷಣದಿಂದ ವಿಚಾರಗಳು ಬೆಳೆಯುವುದರ ಜೊತೆಗೆ ಪರೋಪಕಾರಿಯೂ ಆಗುತ್ತಾನೆ".

-ಗುರುನಾನಕ್.

೪೬. " ವ್ಯಕ್ತಿಯಲ್ಲಿ ಅಡಿಗಿರುವ ಸಾಮರ್ಥ್ಯಗಳನ್ನು ಕಂಡು ಹಿಡಿದು ಅವುಗಳನ್ನೂ ಬೆಳೆಸಿ, ಸಮಾಜದ ಮೂರೂ ವರ್ಗಗಳಿಗೆ ಆತನನ್ನು ಹೊಂದಿಕೊಳ್ಳುವಂತೆ ಮಾಡುವುದೇ ಶಿಕ್ಷಣ".

-ಜಾನ್ ಡ್ಯೂಯಿ.

೪೭. " ಮನುಷ್ಯನ ಸರ್ವಶಕ್ತಿಗಳನ್ನು ಬೆಳೆಸುವುದೇ ಶಿಕ್ಷಣ".

-ಜಾನ್ ಡ್ಯೂಯಿ.

೪೮. "ಶಿಕ್ಷಣವು ಜೀವಿತಕಾಲದ ಉದ್ದಕ್ಕೂ ನಡೆಯಲೇಬೇಕಾದ ಕಲಿಕೆಯ ಕ್ರಮವಾಗಿದೆ. ಪ್ರತಿಕ್ಷಣದ ಜೀವನದಲ್ಲಿಯೂ ನಾವು ಶಿಕ್ಷಣ ಪಡೆಯುತ್ತಲೇ ಇರುವೆವು. ನಿರಂತರವೂ ಅನುಭವಗಳನ್ನು ಪುನರ್ರಚಿಸುತ್ತಿರುವುದೇ ಶಿಕ್ಷಣದ ಧ್ಯೇಯವಾಗಿದೆ".

-ಜಾನ್ ಡ್ಯೂಯಿ.

೪೯. " ಸದೃಢವಾದ ದೇಹದಲ್ಲಿ
ಸದೃಢವಾದ ಮನಸ್ಸನ್ನು
ನೆಲೆಗೊಳಿಸುವುದೇ ಶಿಕ್ಷಣ".

-ಅರಿಸ್ಟಾಟಲ್.

೫೦. " ಸತ್ತವರಿಗಿಂತಲೂ ಬದುಕಿರುವವರು ಹೇಗೆ ಶ್ರೇಷ್ಠರೋ ಹಾಗೆ
ಶಿಕ್ಷಿತ ಮಾನವರು ಅಶಿಕ್ಷಿತರಿಗಿಂತ ಮೇಲು".

-ಅರಿಸ್ಟಾಟಲ್.

೫೧. “ಶಿಕ್ಷಣದ ಗುರಿ ಯೋಧನನ್ನಾಗಲಿ, ನ್ಯಾಯಾಧೀಶನನ್ನಾಗಲಿ. ಆಡಳಿತಗಾರನನ್ನಾಗಲಿ, ಪುರೋಹಿತನನ್ನಾಗಲಿ ನಿರ್ಮಿಸುವುದಾಗಿರದೆ ಮಾನವನನ್ನು ನಿರ್ಮಿಸುವುದಾಗಿದೆ”.

-ಜೆ.ಜೆ. ರೂಸ್ಸೊ.

೫೨. “ಮನುಷ್ಯನ ಬೆಲೆಯುಳ್ಳ ವ್ಯಕ್ತಿತ್ವವನ್ನು ಬೆಳೆಸುವ ಮಾರ್ಗ ಶಿಕ್ಷಣ” .

-ರೂಸೋ

೫೩. “ ಅವರವರ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸುವುದೇ ಶಿಕ್ಷಣ”.

-ರೂಸೋ

೫೪. ವ್ಯಕ್ತಿತ್ವದ ವಿಕಾಸವೇ ಶಿಕ್ಷಣದ ಮುಖ್ಯ ಉದ್ದೇಶ”.

- ಪ್ಲೇಟೋ

೫೫. “ಶಿಕ್ಷಣವು ಮೈಕೈಗಳಿಂದ ಮೆದುಳಿಗೆ, ಮೆದುಳಿನಿಂದ ಹೃದಯಕ್ಕೆ ತಕ್ಕ ಸಂಸ್ಕಾರವನ್ನುಂಟು ಮಾಡಿ ವ್ಯಕ್ತಿಯ ಸಮತೋಲ ವಿಕಾಸಕ್ಕೆ ನೆರವಾಗಬೇಕು.

-ರೂಸ್ ವೆಲ್ಟ್ .

೫೬). “ಮನುಷ್ಯನ ದುರಂತಕ್ಕೆ ಅವನ ವ್ಯಕ್ತಿತ್ವ ಮತ್ತು ಪರಿಸರಗಳೇ ಕಾರಣ ಅವುಗಳನ್ನು ಕಾಪಾಡಿಕೊಂಡು ಹೋಗುವುದೇ ಶಿಕ್ಷಣ”.

-ಸಾಕ್ರಟೀಸ್.

೫೭. ಶಿಕ್ಷಣ ಎನ್ನುವುದು ಅಮೂಲ್ಯವಾದುದು. ಅಂದರೆ ಅದು ತಿಳಿದುಕೊಳ್ಳಬೇಕಾದುದನ್ನು ದೊರಕಿಸುವುದು.

-ಮೈಲ್ಡ್ .

೫೮. ಶಿಕ್ಷಣವೆಂಬುದು ಯಾರೂ ಕಿತ್ತು ಕೊಳ್ಳಲಾಗದ ಅಮೂಲ್ಯವಾದ ಸಂಪತ್ತು.

-ಫ್ರಾಂಕ್ಲಿನ್.

೫೯. ಶಿಕ್ಷಣವು ಒಂದು ಬಗೆಯ ವಿಧಾನ. ಈ ವಿಧಾನದಿಂದಲೇ ಹಾಗೂ ಈ ವಿಧಾನದಲ್ಲಿಯೇ ಎಳೆಯ ಮಕ್ಕಳ ಜ್ಞಾನ, ಶೀಲ, ಹಾಗು ವರ್ತನೆಗಳು ಸಾಕಾರಗೊಳ್ಳುವವು. ಆದ್ದರಿಂದ ಮಗುವಿನಲ್ಲಿರುವ ಸುಪ್ತ ಶಕ್ತಿಗಳನ್ನು ಹಂತ, ಹಂತವಾಗಿ ಪ್ರಕಟಗೊಳಿಸುವುದೇ ಶಿಕ್ಷಣ.

-ಡ್ರೀವರ್.

೬೦. ಜ್ಞಾನ ಮನಸ್ಸಿನ ನಿಧಿ. ವಿವೇಚನೆ ಅದರ ಕೀಲಿಕೈ. ಅದಿಲ್ಲದಿದ್ದರೆ ಜ್ಞಾನ ವ್ಯರ್ಥ. ವ್ಯವಹಾರಿಕ ವಿವೇಕ ಅತೀ ಶ್ರೇಷ್ಠ.

-ಷೇಲ್ಡ್ ಹ್ಯಾಂ.

೬೧. ಇಳಿತದ ಸೂತ್ರಕ್ಕೆ ಒಳಗಾಗದ ಒಂದೇ ಒಂದು ಉತ್ಪಾದನೆ ವಸ್ತು ಎಂದರೆ ಜ್ಞಾನ.

-ಕ್ಲಾರ್ F.

೬೨. ಜ್ಞಾನ ಧರ್ಮದ ವೈರಿಯಲ್ಲ. ಹಾಗಾಗಿದ್ದಲ್ಲಿ ಧರ್ಮವೆಂದರೆ ಅಜ್ಞಾನ ಎಂದಾಗುತ್ತಿತ್ತು.

-ಓ. ಡಬ್ಲ್ಯೂ. ಹೋಮ್ಸ್.

೬೩.ಶಿಕ್ಷಣವು ಸರ್ವಸಮನ್ವಯ ರೂಪವುಳ್ಳದ್ದು. ಹಾಗೂ ಜೀವನದ ಧ್ಯೇಯ ಸಾಧನೆಯನ್ನು ಮಾಡುವುದು.

-ಸರ್. ಪರ್ಸಿನನ್.

೬೪.ಅಮೃತ ಶಿಲೆಯ ಒಂದು ತುಂಡಿಗೆ ಶಿಲ್ಪವು ಅಗತ್ಯವಿರುವಂತೆ ಆತ್ಮದ ಮೇಲ್ಮೆಗೆ ಶಿಕ್ಷಣವು ಅಗತ್ಯ.

-ಆ್ಯಡಿಸನ್

೬೫. ನಮ್ಮ ಸ್ವಂತ ಜೀವನದ ತತ್ತ್ವ ದೃಷ್ಟಿಯಿಂದಲೇ ಶಿಕ್ಷಣದ ಪ್ರತಿಯೊಂದು ಪ್ರಶ್ನೆಯೂ ಸೂಕ್ತವಾದ ಪರಿಹಾರವನ್ನು ಪಡೆಯುವುದು ಸರ್ವರಿಗೂ ವಿದಿತವಾಗಿರುವ ವಿಷಯ.

-ರಸ್ಕ್.

೬೬. ಯುದ್ಧ ಶಾಂತಿ ಸರ್ಕಾರಿ ಹಾಗೂ ಖಾಸಗಿ ಕೆಲಸ ಕಾರ್ಯಗಳನ್ನಿ ಯಶಸ್ವಿಯಾಗಿ ಕುಶಲತೆಯಿಂದ ನಿರ್ವಹಿಸಲು ಮಾನವನಿಗೆ ದೊರಕಿಸಿಕೊಡುವುದೇ ಸಂಪೂರ್ಣ ಶಿಕ್ಷಣ.

-ಮಿಲ್ಟನ್ ಕವಿ.

೬೭. ಬೃಹತ್ ಪ್ರಮಾಣದಲ್ಲಿ ಜ್ಞಾನರಾಶಿಯನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂಬ ಕೌಶಲವನ್ನು ಬೆಳೆಯಿಸಿ ಕೊಳ್ಳುವುದೇ ಶಿಕ್ಷಣ.

-ಎ.ಎಂ. ವೈಟ್ ಹೆಡ್.

೬೮. ವ್ಯಕ್ತಿಯ ವ್ಯಕ್ತಿತ್ವವನ್ನು ಪರಿಪೂರ್ಣಗೊಳಿಸಲು ಸಹಾಯ ನೀಡುವುದೇ ಶಿಕ್ಷಣದ ಗುರಿಯೆನಿಸಿದೆ. ಮಗುವಿಗಾಗಿ ಶಿಕ್ಷಣ, ಶಿಕ್ಷಣಕ್ಕಾಗಿ ಮಗುವಲ್ಲ; ಎನ್ನುವುದು ಸತ್ಯ ನುಡಿಯೆನ್ನಬಹುದು.

-ಟಿ.ಪಿ.ನನ್ ರವರ ಅಭಿಪ್ರಾಯ

೬೯. ಕೆಟ್ಟವ್ವರ ಒಂದು ಬೇರು ಸಾವಿರ ಕೊಂಬೆಯಾಗಿ ಒಡೆಯುತ್ತದೆ. ಅದಕ್ಕೆ ಶಿಕ್ಷಣಬೇಕು.

-ಎಚ್.ಡಿ. ಥೋರಿಯೋ.

೭೦. ನಿಜವಾದ ಆನಂದ ಐಶ್ವರ್ಯ, ಆರಾಮದಿಂದಾಗಲಿ, ಜನರ ಹೊಗಳಿಕೆಯಿಂದಾಗಲಿ ಬರುವುದಿಲ್ಲ. ಏನಾದರೂ ಯೋಗ್ಯ ಶಿಕ್ಷಣ ನೀಡುವುದರಿಂದ, ಪಡೆಯುವುದರಿಂದಲೇ ಅದು ದೊರಕುತ್ತದೆ.

-ಕಾರ್ಲೈಲ್.

## ೯. ಶಿಕ್ಷಣವನ್ನು ಕುರಿತು ವರದಿಗಳನ್ನು ಸಲ್ಲಿಸಿರುವ ಕೆಲವು ಪ್ರಮುಖ ಆಯೋಗಗಳು

ಸ್ವಾತಂತ್ರ್ಯಪೂರ್ವ ಬ್ರಿಟಿಷರ ಕಾಲದಲ್ಲಿ ಭಾರತದಲ್ಲಿ ಶಿಕ್ಷಣ ಸುಧಾರಣೆಗಾಗಿ ಹಲವಾರು ಆಯೋಗಗಳು ರಚಿತವಾಗಿದ್ದವು. ಸ್ವಾತಂತ್ರ್ಯ ನಂತರದ ಅವಧಿಯಲ್ಲೂ ಕೆಲವು ಆಯೋಗಗಳು ರಚಿತವಾದವು. ಅವುಗಳಲ್ಲಿ ಪ್ರಮುಖವಾದವುಗಳ ಸ್ಥೂಲ ಪರಿಚಯ ಇಂತಿದೆ.

### ೧. ಲಾರ್ಡ್ ಮೆಕಾಲೆಯ ಮಿನಿಟ್ಸ್

ಭಾರತದ ಗವರ್ನರ್ ಜನರಲ್ ಅವರ ಕಾರ್ಯಕಾರೀ ಸಭೆಯ ಸದಸ್ಯನಾಗಿದ್ದ ಲಾರ್ಡ್ ಮೆಕಾಲೆ ೧೮೩೫ ರಲ್ಲಿ ಭಾರತದ ಶಿಕ್ಷಣ ಹೇಗಿರಬೇಕು ಎಂಬ ಬಗ್ಗೆ ಕೆಲವು ಸಲಹೆಗಳನ್ನು ನೀಡಿದ. ಇಂಗ್ಲೀಷ್ ಶಿಕ್ಷಣವನ್ನು ಭಾರತದ ಶಾಲೆಗಳಲ್ಲಿ ಪ್ರಾರಂಭಿಸಬೇಕೆಂದು ಸೂಚಿಸಿದ. ಇದರ ಪರಿಣಾಮವಾಗಿಯೇ ಭಾರತದ ಶಾಲೆಗಳಲ್ಲಿ ಇಂಗ್ಲೀಷ್ ಕಲಿಕೆ ಕಾಲಿಟ್ಟಿತು.

### ೨. ಚಾರ್ಲ್ಸ್‌ವುಡ್ ವರದಿ

ಇದೊಂದು ಭಾರತದ ಶಿಕ್ಷಣ ರಂಗದಲ್ಲಿ ಮೈಲಿಗಲ್ಲು.೧೮೫೪ರಲ್ಲಿ ಬಂದ ಚಾರ್ಲ್ಸ್ ವುಡ್ ನ ವರದಿ. ಇದರ ಪರಿಣಾಮವೆಂದರೆ,ಅದುವರೆಗೂ ಪದವಿ ಹಾಗೂ ಸ್ನಾತಕೋತ್ತರ ಪದವಿಗಳಿಗಾಗಿ ಇಂಗ್ಲೆಂಡಿನ ವಿಶ್ವವಿದ್ಯಾನಿಲಯಗಳನ್ನೇ ಮೊರೆ ಹೋಗಬೇಕಾಗಿದ್ದ ಭಾರತೀಯರಿಗಾಗಿ ಬೊಂಬಾಯಿ, ಮದ್ರಾಸು, ಮತ್ತು ಕಲ್ಕತ್ತಗಳಲ್ಲಿ ವಿಶ್ವ ವಿದ್ಯಾಲಯಗಳ ಸ್ಥಾಪನೆಯಾಯಿತು.

### ೩. ಹಂಟರ್ ಸಮಿತಿ ವರದಿ.

ಸರ್ ವಿಲಿಯಂ ಹಂಟರ್ ನೇತೃತ್ವದ ಸಮಿತಿ ೧೮೮೨ರಲ್ಲಿ ಸಲ್ಲಿಸಿದ ವರದಿ ವಿಶ್ವ ವಿದ್ಯಾನಿಲಯಗಳಲ್ಲಿ ದಾಖಲಾಗಲು ಪ್ರವೇಶ ಪರೀಕ್ಷೆ ಇರಬೇಕೆಂದು ಸೂಚಿಸಿದ್ದೇ ಅಲ್ಲದೆ ವೃತ್ತಿಪರ ಶಿಕ್ಷಣಕ್ಕೆ ಅವಕಾಶ ಇರಬೇಕೆಂದೂ ಸೂಚಿಸಿತು.

### ೪. ಭಾರತೀಯ ವಿಶ್ವ ವಿದ್ಯಾನಿಲಯಗಳ ಆಯೋಗ.

೧೯೦೨ರಲ್ಲಿ ಭಾರತೀಯ ವಿಶ್ವವಿದ್ಯಾನಿಲಯಗಳ ಆಯೋಗ ವಿಶ್ವವಿದ್ಯಾನಿಲಯಗಳ ಪುನರ್ ವ್ಯವಸ್ಥೆ ಹಾಗೂ ಸುಧಾರಣೆಗಳ ಬಗೆಗೆ ವರದಿ ನೀಡಿತು. ಭಾರತೀಯ ಶಿಕ್ಷಣ ವ್ಯವಸ್ಥೆಯಲ್ಲಿ ಬೋಧನೆಯು ಪರೀಕ್ಷೆಗೆ ಅಡಿಯಾಳಾಗಿದೆಯೇ ವಿನಾ ಪರೀಕ್ಷೆಯು ಬೋಧನೆಗೆ ಅಡಿಯಾಳಾಗಿಲ್ಲ ಎಂದು ಈ ಆಯೋಗ ಅಭಿಪ್ರಾಯ ಪಟ್ಟಿತು.

೫. ಸ್ಯಾಡ್ಲರ್ ಆಯೋಗ.

ಕಲ್ಕತ್ತಾ ವಿಶ್ವವಿದ್ಯಾನಿಲಯ ಆಯೋಗವೆಂದೂ ಪರಿಚಿತವಾಗಿರುವ ಸರ್ ಮೈಖೆಲ್ ಸ್ಯಾಡ್ಲರ್ ನೇತೃತ್ವದ ಆಯೋಗ ಸೆಕೆಂಡರಿ ಮತ್ತು ಇಂಟರ್ ಮೀಡಿಯೇಟ್ ಬೋರ್ಡ್ ಗಳನ್ನು ಸ್ಥಾಪಿಸುವ ಬಗ್ಗೆ ಸಲಹೆ ನೀಡಿತು.

೬. ಹಾರ್ಟಾಗ್ ಸಮಿತಿ.

೧೯೨೮-೨೯ರ ಹಾರ್ಟಾಗ್ ಸಮಿತಿ ಶಾಲಾ ಶಿಕ್ಷಣದಲ್ಲಿನ ಅಪವ್ಯಯ ಮತ್ತು ವ್ಯರ್ಥತೆಗಳ ಬಗ್ಗೆ ಅಧ್ಯಯನ ಮಾಡಿ ಅವುಗಳ ನಿವಾರಣೆಗೆ ಸಲಹೆ ನೀಡಿತು.

೭. ಅಬಟ್ ಮತ್ತು ವುಡ್ ವರದಿ.

೧೯೩೬-೩೭ರ ಅಬಟ್ ಮತ್ತು ವುಡ್ ರ ವರದಿಯು ವೃತ್ತಿ ಶಿಕ್ಷಣದ ಬಗ್ಗೆ ಮತ್ತು ಹೆಣ್ಣು ಮಕ್ಕಳ ಶಿಕ್ಷಣದ ಸಮಸ್ಯೆಗಳತ್ತ ಗಮನ ಹರಿಸಿತು.

೮. ಸಾರ್ಜೆಂಟ್ ಆಯೋಗ.

೧೯೪೪ರ ಸರ್ ಜಾನ್ ಸಾರ್ಜೆಂಟ್ ಆಯೋಗದ ವರದಿಯೂ ಪರಿಣಾಮವಾಗಿ ಕೇಂದ್ರೀಯ ಶಿಕ್ಷಣ ಸಲಹಾ ಮಂಡಳಿಯ ಸ್ಥಾಪನೆಯಾಯಿತು. ಇದು ಇಂದಿಗೂ ಮುಂದುವರಿದುಕೊಂಡು ಬರುತ್ತದೆ.

೯. ವಿಶ್ವವಿದ್ಯಾನಿಲಯ ಶಿಕ್ಷಣ ಆಯೋಗ .

ಸ್ವಾತಂತ್ರ್ಯಾನಂತರ ನೇಮಕವಾದ ಪ್ರಮುಖ ಶಿಕ್ಷಣ ಆಯೋಗಗಳಲ್ಲಿ ೧೯೪೮ರ ವಿಶ್ವವಿದ್ಯಾನಿಲಯ ಶಿಕ್ಷಣ ಆಯೋಗವೂ ಒಂದು ಶ್ರೇಷ್ಠ ಶಿಕ್ಷಕರೂ ಹಾಗೂ ವಿಶ್ವವಿಖ್ಯಾತ ವಿದ್ವಾಂಸರೂ ಆಗಿದ್ದ ಡಾ.ಎಸ್.ರಾಧಾಕೃಷ್ಣನ್ ರವರ ನೇತೃತ್ವದಲ್ಲಿ ರಚಿತವಾದ ಈ ಆಯೋಗ ಪ್ರೌಢ ಶಿಕ್ಷಣದ ಸಮಸ್ಯೆಗಳನ್ನು ವಿವರವಾಗಿ ಚರ್ಚಿಸಿ, ಅದನ್ನು ಉತ್ತಮಪಡಿಸಲು ಅನೇಕ ಸಲಹೆಗಳನ್ನು ನೀಡಿತು.

೧೦. ಸೆಕೆಂಡರಿ ಶಿಕ್ಷಣ ಆಯೋಗ.

ಡಾ. ಲಕ್ಷ್ಮಣಸ್ವಾಮಿ ಮುದಲಿಯಾರರ ನೇತೃತ್ವದಲ್ಲಿ ೧೯೫೨ರ ಸೆಪ್ಟಂಬರ್ ೨೦ರಂದು 'ಸೆಕೆಂಡರಿ ಶಿಕ್ಷಣ ಆಯೋಗವನ್ನು' ರಚಿಸಲಾಯಿತು. ೧೯೫೨-೫೩ರಲ್ಲಿ ಶಾಲಾ ಶಿಕ್ಷಣದ ಬಗ್ಗೆ ಮಹತ್ವಪೂರ್ಣ ಸಲಹೆಗಳನ್ನು ನೀಡಿತು.

೧೧.ಭಾರತೀಯ ಶಿಕ್ಷಣ ಆಯೋಗ.

೧೯೬೪-೬೬ರ 'ಭಾರತೀಯ ಶಿಕ್ಷಣ ಆಯೋಗ' ಡಾ| ಡಿ.ಎಸ್.ಕೊಠಾರಿಯವರ ಮಾರ್ಗದರ್ಶನದಲ್ಲಿ ಶಿಕ್ಷಣದ ಎಲ್ಲಾ ಕ್ಷೇತ್ರಗಳ ಬಗೆಗೂ ವ್ಯಾಪಕವಾದ ಮಾಹಿತಿ ಸಂಗ್ರಹಿಸಿ ಸಮಗ್ರವಾದ ವರದಿಯೊಂದನ್ನು ಸಲ್ಲಿಸಿತು. ಈ ವರದಿಯ ಆಧಾರದ ಮೇಲೆ ಕೇಂದ್ರ ಸರಕಾರವು ಶಿಕ್ಷಣಕ್ಕೆ ಸಂಬಂಧಿಸಿದ ರಾಷ್ಟ್ರೀಯ ನೀತಿಯೊಂದನ್ನು ರೂಪಿಸಿತು.ನಾಡಿನ ಬಹುತೇಕ ರಾಜ್ಯಗಳಲ್ಲಿ ಈ ಪದ್ಧತಿ ಈಗಾಗಲೇ ಜಾರಿಗೆ ಬಂದಿದೆ. ಇವುಗಳಲ್ಲದೆ, ಸ್ವಾತಂತ್ರ್ಯ ಪೂರ್ವದ ಭಾರತೀಯ ವಿಚಾರವಂತರ, ಶಿಕ್ಷಣ ತಜ್ಞರ ವರದಿಗಳಲ್ಲಿ ೧೯೩೭ರ ವಾರ್ಧಾ ಶಿಕ್ಷಣ ಪದ್ಧತಿ, ಅಂದರೆ ೧೯೩೭ರ ಅಕ್ಟೋಬರ್ ೨೨ರಲ್ಲಿ ಮೊಟ್ಟ ಮೊದಲನೆಯ ರಾಷ್ಟ್ರೀಯ ಶಿಕ್ಷಣ ಸಮ್ಮೇಳನವು ವಾರ್ಧಾದಲ್ಲಿ ಗಾಂಧೀಜಿಯ ಅಧ್ಯಕ್ಷತೆಯಲ್ಲಿ ನಡೆಯಿತು. ಅಲ್ಲದೆ, ಡಾ|ಝುಕೀರ್ ಹುಸೇನ್ ಸಮಿತಿಯ ೧೯೩೭ರ ಮೊದಲ ವರದಿ ಮತ್ತು ಮರುವರ್ಷ- ಅಂದರೆ ೧೯೩೮ರ ಏಪ್ರಿಲ್ ನಲ್ಲಿ ಸಲ್ಲಿಸಿದ ಎರಡನೆ ವರದಿ, ೧೯೪೭ರ ಆಚಾರ್ಯ ನರೇಂದ್ರದೇವ ಸಮಿತಿಯ ವರದಿಗಳು ಗಮನಾರ್ಹವಾದುವುಗಳು.

## ಅನುಬಂಧ-೩

### ಗ್ರಂಥಸೂಚಿ

ಅ. ಪ್ರಬಂಧಕ್ಕಾಗಿ ನೇರವಾಗಿ ಬಳಸಿರುವ ಗ್ರಂಥಗಳು ಮತ್ತು ಲೇಖನಗಳು


| | | |
|---|---|---|
| ೧) ಟಿ.ಆರ್. ನಾಗಪ್ಪ | ೧೯೯೦ | ವಯಸ್ಕರ ಶಿಕ್ಷಣ ಉಪಾಧ್ಯಾಯರ ಕೈಪಿಡಿ, ಚೇತನ ಬುಕ್ ಹೌಸ್ ಪ್ರಕಾಶನ, ಮೈಸೂರು. |
| ೨)ಮಹಾಬಲೇಶ್ವರರಾವ್ | ೧೯೯೨ | ಬಹುಮುಖಿ ಶಿಕ್ಷಣ, ಎಸ್.ಬಿ.ಎಸ್. ಪಬ್ಲಿಷರ್ಸ್ ಬೆಂಗಳೂರು. |
| ೩) ಸಿ.ಹೆಚ್. ಮರಿದೇವರು | ೧೯೭೩ | ಶಿಕ್ಷಣ ತತ್ವ ಶಾಸ್ತ್ರ ಉದಯಭಾನು ಪ್ರಕಾಶನ, ತುಮಕೂರು. |
| ೪) ಮಹಮ್ಮದ್ ಕುಳಾಯಿ ಮತ್ತು ಇತರರು (ಸಂ), | ೧೯೯೧ | ಶಿಕ್ಷಣ ಮತ್ತು ಮುಸ್ಲಿಮರು, ಮುಸ್ಲಿಮ್ ಲೇಖಕರ ಸಂಘ ಪ್ರಕಾಶನ, ಮಂಗಳೂರು. |
| ೫) ಎಚ್.ಜೆ. ರಾಮಯ್ಯಂಗಾರ್. | ೧೯೯೪ | ಕೆಲವು ಶಿಕ್ಷಣ ಪದ್ಧತಿಗಳು ಪ್ರಕಾಶನ ಎಚ್.ಜೆ. ರಾಮಯ್ಯಂಗಾರ್ ಬಸವನಗುಡಿ, ಬೆಂಗಳೂರು. |
| ೬) ವೆ.ಮ. ರಾಜಶೇಖರ. | ೧೯೯೪ | ಬಳ್ಳಾರಿ ಜಿಲ್ಲೆಯ ಶೈಕ್ಷಣಿಕ ಸೌಲಭ್ಯಗಳು. ಶ್ರೀ ಸಿದ್ಧವೀರ ಶಿವಾಚಾರ್ಯ ಜ್ಞಾನ ಪ್ರಕಾಶನ, ಪುರ. |

೭) ಶ್ರೀಮತಿ ಹರಿಪ್ರಸಾದ್. ೧೯೯೧ ನೆಹರೂ ಮತ್ತು ವಿಜ್ಞಾನ. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಪ್ರಕಾಶನ, ಬೆಂಗಳುರು.

ನಿಯತ ಕಾಲಿಕೆಗಳು

೮) ಕರ್ಮವೀರ ವಾರಪತ್ರಿಕೆ. ಅಕ್ಟೋಬರ್ ೧೩, ೧೯೯೬.

ಆ. ಹೆಚ್ಚುವರಿ ಓದಿಗಾಗಿ

೧) ಕೆ.ಎಸ್.ಆಚಾರ್ಯ (ಸಂ), ೧೯೯೩ ಗಾಂಧೀ ವಿಚಾರಧಾರೆ. ಗಾಂಧೀವಿಜ್ಞಾನ ಟ್ರಸ್ಟ್ ಪ್ರಕಾಶನ, ಬೆಂಗಳೂರು.

೨) ಓಬಳೇಶಘಟ್ಟಿ ೧೯೯೨ ಭಾರತೀಯ ಶಿಕ್ಷಣ ಮತ್ತು ಪ್ರಚಲಿತ ಸಮಸ್ಯೆಗಳು ಶಿವಗಂಗಾ ಪ್ರಕಾಶನ, ತೋರಣಘಟ್ಟ.

೩) ಎಸ್. ಕೃಷ್ಣಪ್ಪ ೧೯೭೬ ಶಿಕ್ಷಣದ ತಾತ್ವಿಕ ಮತ್ತು ಸಾಮಾಜಿಕ ಮೂಲಾಧಾರಗಳು, ಪ್ರಾಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೪) ಎಲ್.ಹೆಚ್.ಕಲ್ಮಠ. ೧೯೯೧ ಗ್ರಾಮೀಣ ಜನತೆ ಹಾಗೂ ರಾಜಕೀಯ ಚಿಂತನೆ. ಪ್ರಾಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

೫) ಗುರುಮೂರ್ತಿ ಪೆಂಡಕೂರು (ಸಂ), ೧೯೯೩ ಸೂರ್ಯಕಾಂತಿ, ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು ರಾಮನಗರ, ಹಗರಿಬೊಮ್ಮನ ಹಳ್ಳಿ. ಜೂಲೈ ೨೪,೨೫,೧೯೯೩

| | | |
|---|---|---|
| ೬) ವಿ.ಕೆ.ಜವಳಿ. | ೧೯೭೧ | ಶಿಕ್ಷಣ ಆಧಾರಗಳು ಮತ್ತು ಪ್ರಥಮ ತತ್ವಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ೭) ಡಾ.ಜಿ.ಎಸ್.ದೀಕ್ಷಿತ. | ೧೯೭೦ | ಪ್ರಾಚೀನ ಕರ್ನಾಟಕದ ಶಿಕ್ಷಣ ಕ್ರಮ, ಕರ್ನಾಟಕವಿಶ್ವವಿದ್ಯಾಲಯ, ಧಾರವಾಡ |
| ೮) ಟಿ.ಆರ್.ನಾಗಪ್ಪ. | ೧೯೯೩ | ಸಾಕ್ಷರತಾ ಆಂದೋಲನ, ಚೇತನ ಬುಕ್ ಹೌಸ್ ಪ್ರಕಾಶನ, ಮೈಸೂರು. |
| ೯) ಟಿ.ಆರ್. ನಾಗಪ್ಪ. | ೧೯೯೦ | ವಯಸ್ಕರ ಶಿಕ್ಷಣ ಉಪಾಧ್ಯಾಯರ ಕೈಪಿಡಿ ಚೇತನ, ಬುಕ್ ಹೌಸ್ ಪ್ರಕಾಶನ, ಮೈಸೂರು. |
| ೧೦) ಟಿ.ಆರ್.ನಾಗಪ್ಪ,ಸಿ.ಕೃಷ್ಣ. | ೧೯೭೪ | ನಿರಕ್ಷರತೆ ಮತ್ತು ಅದರ ನಿವಾರಣೆ ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ ಮೈಸೂರು. |
| ೧೧) ಟಿ.ಆರ್.ನಾಗಪ್ಪ | ೧೯೯೪ | ಕರ್ನಾಟಕದಲ್ಲಿ ವಯಸ್ಕರ ಶಿಕ್ಷಣ ಒಂದು ಚಿಂತನೆ, ರಾಜ್ಯ ಸಂಪನ್ಮೂಲ ಕೇಂದ್ರ ಮೈಸೂರು. |
| ೧೨) ಟಿ. ಆರ್.ನಾಗಪ್ಪ | ೧೯೮೫ | ವಯಸ್ಕರ ಶಿಕ್ಷಣ ಗಿತಾಬುಕ್ ಹೌಸ್ ಪ್ರಕಾಶನ, ಮೈಸೂರು. |
| ೧೩) ಟಿ.ಆರ್.ನಾಗಪ್ಪ | ೧೯೭೯, ೮೦, | ವಯಸ್ಕರ ಶಿಕ್ಷಣ ಕೈಪಿಡಿ, ಪಿ.ಬಿ.ಹೆಚ್.ಪ್ರಕಾಶನ, ಬೆಂಗಳೂರು. |

೧೪) ಡಾ.ಕೆ.ವಿ.ಪುಟ್ಟಪ್ಪ (ಸಂ), ೧೯೭೧ ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂಪುಟ-೨, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ ಮೈಸೂರು.

೧೫) ಪೆರ್ಲಕೃಷ್ಣ ಭಟ್ಟ. ೧೯೯೬ ರಾಮಾಯಣ ಉಪನ್ಯಾಸಗಳು, ಕರ್ನಾಟಕ ಸಂಘ ಪುತ್ತೂರು, ದಕ್ಷಿಣ ಕನ್ನಡ.

೧೬) ಎಂ.ಎಸ್.ಪಾಟೀಲ. ೧೯೭೬ ರಾಜಕೀಯ ಸಿದ್ಧಾಂತ ಭಾರತ ಬುಕ್ ಡಿಪೋ ಮತ್ತು ಪ್ರಕಾಶನ, ಧಾರವಾಡ.

೧೭) ಬಾಪು ಹೆದ್ದೂರ ಶೆಟ್ಟಿ ೧೯೮೯ ಸಮಾಜವಾದ ಜನತಂತ್ರ ಮತ್ತು ಕಮ್ಯೂನಿಸಂ. ಅಕ್ಷರ ಪ್ರಕಾಶನ, ಸಾಗರ.

೧೮) ಎ.ಎಸ್. ಬಾಲಸುಬ್ರಮಣ್ಯ ೧೯೮೬ ಸಮೂಹ ಮಾಧ್ಯಮಗಳು ಮತ್ತು ರಾಷ್ಟ್ರೀಯ ಅಭಿವೃದ್ಧಿ. ಪ್ರಾಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೯) ಭೈರಪ್ಪ ಎಸ್.ಎಲ್., ಮತ್ತು ಇತರರು (ಸಂ), ೧೯೯೨ ಮಾನ (ಹಾ.ಮಾ.ನಾಯಕ ಅಭಿನಂದನ ಗ್ರಂಥ) ಗೀತಾಬುಕ್ ಹೌಸ್ ಪ್ರಕಾಶನ, ಮೈಸೂರು.

೨೦) ಮಲ್ಲಿಕಾರ್ಜುನ ಅಮರನಾಥಶಾಸ್ತ್ರಿ (ಅನು) ೧೯೮೬ ದ್ವಂದ್ವಮಾನ ಮತ್ತು ಚಾರಿತ್ರಿಕ ಭೌತವಾದದ ಮೂಲ ಪಾಠಗಳು. ನವ ಕರ್ನಾಟಕ ಪ್ರಕಾಶನ, ಬೆಂಗಳೂರು.

೨೧) ಪ್ರೊ.ಟಿ. ಮಲ್ಲಪ್ಪ | | ಆಧುನಿಕ ರಾಜಕೀಯ ಸಿದ್ಧಾಂತ ಮತ್ತು ರಾಜಕೀಯದಾರ್ಶನಿಕರು, ಪ್ರಭು ಪ್ರಕಾಶನ, ರೇಣುಕಾ ಬಡಾವಣೆ, ಕೊಟ್ಟೂರು.

೨೨) ಸಂ. ಡಾ.ಮೃತ್ಯುಂಜಯ ಹೊರಕೇರಿ. ೧೯೯೧ ಸ್ಕಂದ-ಶ್ರೀಗಂಧ. ಕನ್ನಡ ಸಾಹಿತ್ಯ ಪರಿಷತ್ತು ಪ್ರಕಾಶನ, ಸೊಂಡೂರು. ಜನವರಿ ೧೨,೧೩, ೧೯೯೧.

೨೩) ವಿ.ಜಿ. ಮಾರೀಹಾಳ. ಕರ್ನಾಟಕ ಸಂಸ್ಕೃತಿಯ ವಿಶ್ವರೂಪ. ಕರ್ನಾಟಕವಿಶ್ವವಿದ್ಯಾಲಯ, ಧಾರವಾಡ

೨೪) ಎಸ್. ರಜತಾದ್ರಿ, ೧೯೮೩ ವಯಸ್ಕರ ಶಿಕ್ಷಣ ವಿಚಾರಧಾರೆ, ಪ್ರಾಸಾರಾಂಗ ಮೈಸೂರು ವಿಶ್ವವಿದ್ಯಾಲಯಮೈಸೂರು.

೨೫)ಲಕ್ಷ್ಮಣ ತೆಲಗಾವಿ, (ಸಂ), ೧೯೯೧ ಸಂಶೋಧನ (ಡಾ.ಎಂ.ಚಿದಾನಂದ ಮೂರ್ತಿ ಅಭಿನಂದನ ಗ್ರಂಥ) ಡಾ. ಎಂ. ಚಿದಾನಂದಮೂರ್ತಿ ಅಭಿನಂದನಾ ಸಮಿತಿ, ೩, ರಾಗಿಣಿ ಸರ್ವಿಸ್ ರಸ್ತೆ, ವಿಜಯನಗರ, ೨ನೇ ಹಂತ, ಬೆಂಗಳೂರು

೨೬) ಪ್ರಾ.ಪಿ.ವಿ.ವಜ್ರಮಟ್ಟಿ. ೧೯೯೩ ಡಾ.ಬಿ.ಆರ್.ಅಂಬೇಡಕರ, ಮಿತ್ರ ಭಾರತಿ ಪ್ರಕಾಶನ, ಜಮಖಂಡಿ.

೨೭) ಶಂಕರ ಪಾಟೀಲ್. ೧೯೭೧ ಭಾರತದಲ್ಲಿ ಪ್ರಜಾಸತ್ತಾತ್ಮಕ ರಾಜಕಾರಣದ ಕೆಲ ಲಕ್ಷಣಗಳು. ಪ್ರಾಸಾರಾಂಗ ಮೈಸೂರು ವಿಶ್ವವಿದ್ಯಾಲಯ ಮೈಸೂರು.

೨೮) ಡಾ. ಶಿವಾನಂದ ಗುಬ್ಬಣ್ಣವರ . ೧೯೯೩ ಪ್ರಜಾಪ್ರಭುತ್ವ ಮತ್ತು ವಿರೋಧ ಪಕ್ಷಗಳು. ಪ್ರಾಸಾರಾಂಗ ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ.

೨೯) ಕೆ.ಎಸ್.ಸದಾಶಿವಯ್ಯ. ೧೯೭೪ ಶಿಕ್ಷಣ ಮತ್ತು ಪ್ರಜಾಸತ್ತೆ. ವಿಶ್ವನಾಥ ಪ್ರಕಾಶನ ಸರಸ್ವತಿ ಪುರಂ, ಮೈಸೂರು.

